ಮಾಧ್ಯಮಿಕ ಶಾಲೆಗಳ ೯ನೆಯ ಇಯತ್ತೆಯ ಸಲುವಾಗಿ

# ಅಭಿನವ ಸಾಹಿತ್ಯ ಪ್ರವೇಶ



## ಭಾಗ : ೨

## ( ಗದ್ಯ ಭಾಗ )




ಸಂಪಾದಕರು :

ಶ್ರೀ. ಶಂ. ಬಾ. ಜೋಶಿ

ಪ್ರೊ. ವ್ಹಿ. ಎಂ. ಇನಾಮದಾರ, ಎಂ. ಎ.

ಶ್ರೀ. ವ್ಹಿ. ಕೆ. ಹೋಳೀಕಟ್ಟಿ, ಬಿ. ಎ., ಎಸ್. ಟಿ. ಸಿ.



ಪ್ರಕಾಶಕರು :

ರಾ. ಗೋ. ಹುಕ್ಕೇರಿ,

ಮಾರ್ಕೆಟ್ ಬೀದಿ :: ಧಾರವಾಡ

೧೯೬೦

# ಅರಿಕೆ

ಈ 'ಅಭಿನವ ಸಾಹಿತ್ಯ ಪ್ರವೇಶ'ವನ್ನು ೧೩ ರಿಂದ ೧೫ ನೆಯ ವಯಸ್ಸಿನ ವಿದ್ಯಾರ್ಥಿಗಳನ್ನು ಕಣ್ಣೆದುರಿಗೆ ಇಟ್ಟುಕೊಂಡು ರಚಿಸಲಾಗಿದೆ. ಸರಕಾರದವರು ಮಾಧ್ಯಮಿಕ ಶಾಲೆಗಳ ವಿದ್ಯಾರ್ಥಿಗಳ ಸಲುವಾಗಿ ಗೊತ್ತುಪಡಿಸಿರುವ ಅಭ್ಯಾಸ ಪತ್ರಿಕೆಯನ್ನು ಅನುಸರಿಸಿ ಇದನ್ನು ಅಣಿಗೊಳಿಸಿದ್ದೇವೆ. ಕೇಂದ್ರ ಮಂತ್ರಿ ಸರ್ ಚಿಂತಾಮಣಿ ದೇಶಮುಖ ಅವರು, ನಮ್ಮ ದೇಶದ ಮಾಧ್ಯಮಿಕ ಶಾಲೆಗಳ ಅಭ್ಯಾಸದ ಮಟ್ಟವು, ಕೆಂಬ್ರಿಜ್ಜಿನ ಪ್ರೌಢ ಪರೀಕ್ಷೆಗಿಂತ ಕೆಳಗೆ ಇರಕೂಡದು, ಎಂದು ತಮ್ಮ ನಿಶ್ಚಿತ ಅಭಿಪ್ರಾಯವನ್ನು ಸಾರಿದ್ದಾರೆ. ಜಾಗತಿಕ ರಂಗದಲ್ಲಿ ಭಾರತವು ಇನ್ನಾವ ರಾಷ್ಟ್ರಕ್ಕಿಂತಲೂ ಹಿಂದುಳಿಯಬಾರದು. ಆದ್ದರಿಂದ ಸರ್ ಚಿಂತಾಮಣಿಯವರು ಕೊಟ್ಟ ಎಚ್ಚರಿಕೆಯನ್ನು ಕಡೆಗಣಿಸಲಿಕ್ಕಾಗುವದಿಲ್ಲ. ನಮ್ಮ ವಿದ್ಯಾರ್ಥಿಗಳ ಭಾವನೆ, ವಿಚಾರಗಳ ಕ್ಷೇತ್ರವು ವಿಸ್ತಾರವಾಗಬೇಕು, ಅವರ ಅರಿವಿನ ಆಳವು ಹೆಚ್ಚಬೇಕೆಂಬ ದೃಷ್ಟಿಯಿಂದ ಇದರೊಳಗಿನ ಪ್ರತಿಯೊಂದು ಪಾಠವನ್ನು ಆಯ್ದುಕೊಳ್ಳಲಾಗಿದೆ.

ಇದೀಗ ಜಾಗತಿಕ ಸಂಕ್ರಮಣ ಕಾಲವು ಒದಗಿದೆ. ಇಂತಹ ಅದಲು ಬದಲಾಟದ ಸಮಯದಲ್ಲಿ ಒಳಿತು ಯಾವುದು, ಕೆಡಕು ಯಾವುದು ಎಂಬುದನ್ನು ನಿರ್ಧರಿಸುವದಕ್ಕೆ ತಿಳಿಯದ ಸಮಾಜದಲ್ಲಿ ಶೈಥಿಲ್ಯವು ತಲೆಯೆತ್ತುತ್ತದೆ. ಬಾಹ್ಯ ನಿರ್ಬಂಧಗಳಿಗಿಂತಲೂ ಅಂತರಂಗದ ಸದಭಿರುಚಿಯ ಮೂಲಕ ನಡೆವಳಿಯಲ್ಲಿ ಕಾಣಿಸಿಕೊಂಡ ಸಂಯಮವು ಹೆಚ್ಚು ಬೆಲೆಯುಳ್ಳದ್ದಾಗಿದೆ. ಈ ವಿಶ್ವದೊಳಗಿನ ದಿವ್ಯವಾದ, ಭವ್ಯವಾದ, ಪವಿತ್ರವಾದ ಉದಾತ್ತವಾದ ಸುಂದರವಾದ ಅಂಶಗಳ ನಿಜವಾದ ಅನುಭವದಿಂದ ಉಂಟಾಗುವ ಸದಭಿರುಚಿಯು ಆ ಮನುಷ್ಯನನ್ನು ಕೀಳು ಮಟ್ಟಕ್ಕೆ ಇಳಿಯಗೊಡುವದಿಲ್ಲ. ಶ್ರೇಷ್ಠ ಕಲೆ ಮತ್ತು ಸಾಹಿತ್ಯವು ಈ ಬಗೆಯ ಅಭಿರುಚಿಯನ್ನು ಉಂಟುಮಾಡಬಲ್ಲದಾಗಿದೆ. ಈ ಬಗೆಯ ಸಾಹಿತ್ಯದ ಸ್ವಲ್ಪ ಪರಿಚಯ ಮಾಡಿಕೊಡುವದು "ಅಭಿನವ ಸಾಹಿತ್ಯ ಪ್ರವೇಶ"ದ ಮುಖ್ಯ ಗುರಿಯಾಗಿದೆ.

ಈ ಸಂಗ್ರಹದಲ್ಲಿ ಕಥೆಯ ವಿವಿಧ ಪ್ರಕಾರಗಳಿವೆ. ಕಾದಂಬರಿಯ ಸಾರವಿದೆ. ಕಥೆ–ಕಾದಂಬರಿಗಳ ಅಂತರಂಗವನ್ನು ಬಿಡಿಸಿ ತೋರಿಸಿದ್ದಾಗಿದೆ. ಅಭಿನಯಕ್ಕೆ ಅನುಕೂಲವಾದ ನಾಟಕ, ನಾಟಕದ ಭಾಗಗಳಿವೆ, ಬಗೆ ಬಗೆಯ ವಿನೋದದ ಮಾದರಿ

ಗಳಿವೆ; ಗಂಭೀರ ಹಾಗು ಲಘು ಪ್ರಬಂಧಗಳ ಪ್ರಕಾರಗಳಿವೆ. ನಮ್ಮ ಮತ್ತು ಇತರ ಜನಾಂಗಗಳ ರೀತಿ ಸಂಸ್ಕೃತಿಗಳ ತಿಳುವಳಿಕೆಯನ್ನು ಮಾಡಿಕೊಡುವ ಲೇಖನಗಳಿವೆ. ಇಂತೀ ಬಗೆಯಲ್ಲಿ ಜೀವನದ ವಿವಿಧಾಂಗಗಳ ಪರಿಚಯ ಮಾಡಿ ಕೊಡುವ ಸಾಹಿತ್ಯ ಲೇಖನಗಳಿಂದ ಕೂಡಿದ ಈ ಪುಸ್ತಕಕ್ಕೆ 'ಅಭಿನವ ಸಾಹಿತ್ಯ ಪ್ರವೇಶ'ವೆಂಬ ಹೆಸರು ಉಚಿತವಾಗಿದೆಯೆಂದು ಹೇಳಬಹುದು.

ಸಾಹಿತ್ಯಾನಂದವು ದೊರೆತು ತಿಳಿಗನ್ನಡದಲ್ಲಿ ಚೆನ್ನಾಗಿ ಮಾತನಾಡುವ ಹಾಗು ಬರೆಯುವ ಸಾಮರ್ಥ್ಯವು ಉಂಟಾಗುವಂತೆ ಇದರ ಪಾಠಗಳ ರಚನೆಯಿದೆ. ಪ್ರಾಚೀನ ಮತ್ತು ಅರ್ವಾಚೀನ ಗದ್ಯ ಪದ್ಯಗಳೊಳಗಿಂದ ಒಳ್ಳೊಳ್ಳೆಯ ಭಾಗ ಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಪ್ರತಿಯೊಂದು ಪಾಠದ ಕೊನೆಗೆ ಭಾಷಾ ಭ್ಯಾಸ, ಶಬ್ದವಿಚಾರ, ವಾಕ್-ಶಿಕ್ಷಣ, ಚರ್ಚೆ ಮತ್ತು ಬರೆಹಗಳೆಂಬ ವಿಭಾಗ ಗಳಲ್ಲಿ ವಿದ್ಯಾರ್ಥಿಗಳ ವಿಮರ್ಶೆ, ವಿಚಾರ ಮತ್ತು ವಿವೇಚನಾಸಾಮರ್ಥ್ಯವು ಬೆಳೆಯುವಂತೆ ಪ್ರಶ್ನೆಗಳನ್ನು ಕೊಡಲಾಗಿದೆ. ಭಾಷಾಭ್ಯಾಸದಲ್ಲಿ ಭಾಷೆ, ಶೈಲಿ ಮತ್ತು ವಿಚಾರಸ್ಪಷ್ಟೀಕರಣದಂತಹ ವಿಷಯವು ಅಡಕವಾಗಿದೆ. ಶಬ್ದವಿಚಾರದಲ್ಲಿ ವಿಚಾರದ ಸೂಕ್ಷ್ಮತೆಗೆ ಅಗತ್ಯವಾದ ಶಬ್ದಗಳ ಸೂಕ್ಷ್ಮ ಅರ್ಥಭೇದಾದಿ ಸಂಗತಿ ಗಳಿಗೆ ಗಮನಕೊಡಲಾಗಿದೆ. ವಾಕ್-ಶಿಕ್ಷಣದಲ್ಲಿ ಹುಡುಗರಿಗೆ ಶ್ರೇಷ್ಠ ಸುಂದರ ಭಾಗಗಳನ್ನು ಪಾಠಮಾಡಲು ಪ್ರೋತ್ಸಾಹಿಸಿದ್ದಾಗಿದೆ. ಕಥಾಸ್ಪರ್ಧೆ ಅಭಿನಯಾದಿ ಗಳ ಮೂಲಕ ವಾಕ್-ಶಿಕ್ಷಣದಿಂದ ಮಕ್ಕಳ ಭಾವನೆಗಳಿಗೆ ಸುಸಂಸ್ಕಾರವು ದೊರೆಯುವದು. ಚರ್ಚೆಯ ವಿಭಾಗದ ಮಹತ್ತ್ವವಂತೂ ಅಷ್ಟಿಷ್ಟಲ್ಲ. 'ವಾದೇ ವಾದೇ ಜಾಯತೇ ತತ್ತ್ವಬೋಧಃ' ವಿವಾದ ಚರ್ಚೆಗಳನ್ನು ಸಮರ್ಪಕವಾಗಿ ನಡೆಸಲರಿಯದವರು ಪ್ರಜಾರಾಜ್ಯದಲ್ಲಿ ಹಿಂದುಳಿದವರಾಗುವಲ್ಲಿ ಸಂದೇಹವಿಲ್ಲ. ಈ ದೃಷ್ಟಿಯಿಂದ ವಿದ್ಯಾರ್ಥಿಗಳಲ್ಲಿ ಚರ್ಚೆಗಳನ್ನು ನಡೆಸುವ ಯೋಗ್ಯ ಶಿಕ್ಷಣವು ದೊರೆಯಬೇಕೆಂದು ಪ್ರತಿ ಪಾಠದಲ್ಲಿ ಅಂತಹ ಒಂದೆರಡು ವಿಷಯಗಳನ್ನಾದರೂ ಸೂಚಿಸಿದೆ. ಪ್ರತಿಯೊಂದು ಸಂಗತಿಯನ್ನು ಅನುಕೂಲ ಪ್ರತಿಕೂಲ ಎರಡೂ ನಿಟ್ಟಿನಿಂದಲೂ ಚೆನ್ನಾಗಿ ವಿಮರ್ಶಿಸಿ ಅರಿತುಕೊಂಬ ರೂಢಿಯು ವ್ಯೈಯುಂಡರೆ ಏಕಾಂಗಿ ದೃಷ್ಟಿಯ ಎಗ್ಗರು ಆಗುವ ಹೆದರಿಕೆಯಿಲ್ಲ. ಕೊನೆಗೆ ಬರೆಹ—ಪ್ರಬಂಧ, ಪತ್ರವ್ಯವಹಾರ, ಆತ್ಮಚರಿತ್ರೆ, ಕಥೆ ಮೊದಲಾದ ಒಂದಿಲ್ಲೊಂದು ರೂಪದ ಬರೆಹಕ್ಕಾಗಿ ಅವಕಾಶವನ್ನು ಕಲ್ಪಿಸಿ ಕೊಡಲಾಗಿದೆ.

ಪ್ರತಿಪಾಠದ ಕೊನೆಗೂ ಇಷ್ಟು ವಿವರವಾದ ಅಭ್ಯಾಸದ ಯೋಜನೆಯನ್ನು ಮಾಡಿರುವದರಿಂದ ವಿದ್ಯಾರ್ಥಿಗಳ ತಿಳುವಳಿಕೆಯ ಮಟ್ಟವು ಹೆಚ್ಚದೆ ಇರಲಾರ ದೆಂದು ಹಾರಯಿಸಿದ್ದೇವೆ.

—ಸಂಪಾದಕರು.

# ಕೃತಜ್ಞತೆ

ನಮ್ಮ ಅಭಿನವ ಸಾಹಿತ್ಯ ಪ್ರವೇಶವನ್ನು ಅಣಿಗೊಳಿಸಲು ಸಹಕರಿಸಿದ ಹಿರಿ–ಕಿರಿಯ ಎಲ್ಲ ಸಾಹಿತ್ಯಿಕರಿಗೆ, ಅವಶ್ಯವಿದ್ದ ಸಂದರ್ಭ ಗ್ರಂಥಗಳನ್ನು ಒದಗಿಸಿದ ಕರ್ನಾಟಕ ಪ್ರಾದೇಶಿಕ ಗ್ರಂಥಾಲಯದ ಚಾಲಕರಿಗೆ, ಅಂದವಾದ ಚಿತ್ರಗಳನ್ನು ಬರೆದು ಕೊಟ್ಟ ಕಲಾವಿದರಿಗೆ, ಒಳ್ಳೆಯ ಪಡಿಯಚ್ಚುಗಳನ್ನು ಸಿದ್ಧಪಡಿಸಿಕೊಟ್ಟ ಪಡಿಯಚ್ಚುಗಾರರಿಗೆ, ಬರೆಹದ ಕಾರ್ಯದಲ್ಲಿ ವಿಶೇಷವಾದ ಆಸ್ಥೆವಹಿಸಿ ಕೆಲಸಮಾಡಿದ ಶ್ರೀ. ಕೆ ಎಸ್. ವರಾಹಮೂರ್ತಿ ರಿ. ಎ. ಡಿ. ಇ. ಆಯ್. ಇವರಿಗೆ ಸಕಾಲಕ್ಕೆ ಮುದ್ರಿಸಿಕೊಟ್ಟ ಮುದ್ರಕರಿಗೆ ನಾವು ಕೃತಜ್ಞರಾಗಿದ್ದೇವೆ.

ಪ್ರಕಾಶಕ.

# ಪರಿವಿಡಿ

## ಗದ್ಯವಿಭಾಗ

—೦—

# ವಿವಿಧ ವಿಷಯಗಳಿಗನುಸರಿಸಿದ ಪಾಠಗಳ ಅನುಕ್ರಮಣಿಕೆಯು

## (೮) ಜೀವನ ಚರಿತ್ರೆ



## (೯) ಸಂಸ್ಕೃತಿ ದರ್ಶನ



## (೧೦) ಸಾಹಿತ್ಯ ವಿಮರ್ಶನ

# ೧. ಜೀವನ ದೃಷ್ಟಿ

[ ಸಮಾಜದ ಕಡೆಗೆ ಬೆನ್ನು ತಿರುವಿ ಕಾಡು ಸೇರಲು ಗೀತೆಯು ಬೋಧಿಸಿಲ್ಲ. 'ಸರ್ವ ಭೂತ ಹಿತೇ ರತಾಃ' ವಿಶ್ವದ ಕಲ್ಯಾಣದಲ್ಲಿ ತೊಡಗಿರುವದು ಸಿದ್ಧರ ಲಕ್ಷಣ. ಮಹಾತ್ಮಾಜಿಯವರು ತಮ್ಮ ನಡೆವಳಿಯಲ್ಲಿ ಗೀತೆಯ ಉಪದೇಶವನ್ನು ಅಳವಡಿಸಿಕೊಂಡಿದ್ದರು. ಅದರ ಸ್ವಲ್ಪ ಸ್ಪಷ್ಟೀಕರಣವೇ ಇಲ್ಲಿ ಇದೆ. ಈ ಒಂದು ಸಾರಭೂತ ವಿಚಾರವನ್ನು ಹೃದಯದಲ್ಲಿ ಕೊರೆದಿಟ್ಟುಕೊಂಡು ಬಾಳಲು ಪ್ರಯತ್ನಿಸಿದರೂ ಅವನು ಆತ್ಮೋದ್ಧಾರ ಮಾಡಿಕೊಳ್ಳುವನಲ್ಲದೆ, ಆತನಿಂದ ಸಮಾಜದ ಕಲ್ಯಾಣವೂ ಆಗುವುದು. ]

ಶ್ರೀ. ಗೀತೆಯು ನನಗೆ ಮೂರು ಸಂಗತಿಗಳನ್ನು ಅರುಹಿರುವುದು. ಮುಕ್ತಿಯೇ ಗೀತೆಯ ಗುರಿಯು. ಪರಮಾತ್ಮನ ಸಗುಣ ಆರಾಧನೆಯಿಂದಲೂ ಅವನ ಧ್ಯಾನದಿಂದಲೂ ಅವನಿಗಾಗಿ ಮಾಡಿದ ನಿಷ್ಕಾಮ ಕರ್ಮದಿಂದಲೂ ಮುಕ್ತಿಯನ್ನು ಪಡೆಯಬಹುದು ಎಂದು ಗೀತೆಯು ಹೇಳುತ್ತದೆ. ದೇವರನ್ನು ವ್ಯಕ್ತಿಯೆಂದು ಕಲ್ಪಿಸಿ ಅವನನ್ನು ಷೋಡಶ ಉಪಚಾರಗಳಿಂದ ಪೂಜಿಸುವದು ಹಾಗು ಅದರಿಂದ ಅವನ ಕೃಪೆ ಪಡೆಯಲು ಎಳಸುವುದು ಒಂದು ಹಾದಿ. ಧ್ಯಾನ-ಧಾರಣಾದಿ ಯೋಗಸಾಧನಗಳಿಂದ ಅವನನ್ನು ಕಾಣುವುದು ಇನ್ನೊಂದು ಹಾದಿ. ಇವೆರಡೂ ಒಂದು ಬಗೆಯಾದ ಸ್ವಾರ್ಥವನ್ನೇ ಒಳಗೊಂಡಿರುವವು. ಆದ್ದರಿಂದ ಅವು ನನಗೆ ಅಷ್ಟೊಂದು ರುಚಿಸಲಿಲ್ಲ. ಆದರೆ ಗೀತೆಯಲ್ಲಿ ಉಸುರಲಾದ ಸದ್ಗುಣಗಳನ್ನು ಬೆಳಸಿ ತಮ್ಮ ತನು ಮನ ಧನವನ್ನು ಸಮಾಜರೂಪಿಯಾದ ಪರಮಾತ್ಮನಿಗೆ ಅರ್ಪಿಸಿ ಅವನ ಸೇವೆಯನ್ನು ಮಾಡುವುದು ನನಗೆ ಹೆಚ್ಚು ಸೇರಿತು. 'ಮತ್ ಚಿತ್ತಃ ಭವ.... ಮದರ್ಪಣಂ ಕುರು' ಎಂದು ಭಗವಂತನು ಬೋಧಿಸಿರುವನು. ನಿನ್ನದೆಲ್ಲವನ್ನೂ ನನಗೆ ಅರ್ಪಿಸು ಎಂದು ಪರಮಾತ್ಮನು ಹೇಳುತ್ತಾನೆ. ಇಲ್ಲಿ 'ಮತ್' ಯಾರು? "ನನಗೆ—ನಾನು ಯಾರು?" ನಾನು ಎಂದರೆ ಸಮಾಜ—ರಾಷ್ಟ್ರ. ತಾನು ಗಳಿಸಿದ್ದನ್ನು ತನ್ನ ಸ್ವಂತ ಉಪಯೋಗಕ್ಕಾಗಿ ತೀರ ಅವಶ್ಯವಿದ್ದಷ್ಟನ್ನು ಮಾತ್ರ ಬಳಸಿ ಉಳಿದುದನ್ನು ಸಮಾಜ ಕಲ್ಯಾಣಕ್ಕಾಗಿ ವಿನಿಯೋಗಿಸಬೇಕು. ಈ ರೀತಿ ಸಮಾಜ ಪುರುಷನನ್ನು ಆರಾಧಿಸಬೇಕು. ಪರಮಪೂಜ್ಯ ಬಾಪೂಜಿಯವರು ಇದನ್ನೆ ತಮ್ಮ ಕೃತಿಯಿಂದ ಬೋಧಿಸಿದರು. ನಾವು ನಮ್ಮ ಸಂಪತ್ತಿಯ ಕೇವಲ ನಿಧಿರಕ್ಷಕರು, ಒಡೆಯರಲ್ಲ. ಈ ಭಾವನೆಯಿಂದ ನಾವು ಅದನ್ನು ಬಳಸಬೇಕು, ಎಂದು ಮಹಾತ್ಮಾಜಿಯವರು ಹೇಳಿರುವರು. ಆಡುವುದು ಸುಲಭ, ಮಾಡುವುದು ಕಠಿಣ, ಎಂಬುದನ್ನು ನಾನು ಬಲ್ಲೆ. ನನ್ನಲ್ಲಿಯ ಕೊರತೆಯ ಅರಿವು ನನಗೆ ಚೆನ್ನಾಗಿದೆ. ಆದರೆ ನನ್ನ ಬಲವಿದ್ದ ಮಟ್ಟಿಗೆ ನಾನು ಈ ಆದರ್ಶವನ್ನು ಮುಟ್ಟಲು ಯತ್ನಿಸುವೆ. ಗೀತೆಯು ನನಗೆ ಅರುಹಿದ ಬೋಧೆಯಿದು.

(ಸಿಂಹಾಳದಲ್ಲಾದ ಒಂದು ಉಪನ್ಯಾಸದಿಂದ)

—ಕೈಲಾಸನಾಥ ಕಟಿಜು

## ಅಭ್ಯಾಸನೆಗಳು

**ಪ್ರಶ್ನೆಗಳು:—**

೧) ಗೀತೆಯು ಅರುಹಿದ ಮೂರು ಸಂಗತಿಗಳಾವುವು?

೨) ಇವುಗಳಲ್ಲಿ ಶ್ರೀ. ಕಟಜು ಅವರು ಇಟ್ಟುಕೊಂಡ ಆದರ್ಶಗಳಾವುವು? ಏಕೆ?

**ಭಾಷಾಭ್ಯಾಸ:—**

ಸ್ಪಷ್ಟೀಕರಿಸಿರಿ

೧) ಸಮಾಜರೂಪಿ ಪರಮಾತ್ಮನಿಗೆ ಅರ್ಪಿಸಿ ಅವನ ಸೇವೆ ಮಾಡುವದು ನನಗೆ ಹೆಚ್ಚು ಪ್ರೀತಿ

೨) ಆಡುವದು ಸುಲಭ, ಮಾಡುವದು ಕಠಿಣ.

**ಶಬ್ದ ವಿಚಾರ:—**

೧) ಸಮಾಜರೂಪಿ ಪರಮಾತ್ಮ, ತನು ಮನ ಧನ,— ಇವುಗಳ ಅರ್ಥವನ್ನು ಸ್ಪಷ್ಟಗೊಳಿಸಿರಿ.

೨) ದಯೆ, ಕೃಪೆ, ಅನುಗ್ರಹ, ಆಶೀರ್ವಾದ, ಕರುಣೆ, ಪ್ರೇಮ,— ಇವುಗಳಲ್ಲಿಯ ಅರ್ಥಭೇದವನ್ನು ಹೇಳಿರಿ.

**ವಾಕ್-ಶಿಕ್ಷಣ:—**

ಸದ್ಗುಣಗಳನ್ನು ವರ್ಧಿಸುವ ಭಗವದ್ಗೀತೆಯ ೧೬ ನೆಯ ಅಧ್ಯಾಯದೊಳಗಿನ ದೈವೀ ಸಂಪತ್ತಿನ ಭಾಂಡಾರವನ್ನು ಪಾರಮಾಡಿ ನಿಮ್ಮಲ್ಲಿಟ್ಟುಕೊಳ್ಳಿರಿ.

**ಚರ್ಚೆ.—**

ಕುಬೇರನಿಗಿಂತ ಸಂನ್ಯಾಸಿಯೇ ಮೇಲು.

**ಬರಹ:—**

ನಾನು ಯಾವ ಬಗೆಯಿಂದ ಸಮಾಜಕ್ಕೆ ಉಪಯುಕ್ತನಾಗಿರಬೇಕೆಂದಿರುವೆ. ಎಂಬುದನ್ನು ಕುರಿತು ಬರೆಯಿರಿ.

# ೨. ಬಲಿದಾನ

[ಚೀನವು ಇಂದು ಸ್ವತಂತ್ರವಾಗಿದೆ ಜಪಾನಿಗಳು ಚೀನದ ಕೆಲ ಭಾಗವನ್ನು ಆಕ್ರಮಿಸಿದಾಗ ಅಲ್ಲಿಯ ದೇಶಪ್ರೇಮಿಗಳು ತಮ್ಮ ತಾಯ್ನಾಡಿನ ಬಿಡುಗಡೆಗಾಗಿ ಎಷ್ಟೊಂದು ಘೋರ ಸಂಕಟಗಳನ್ನು ಎದುರಿಸಬೇಕಾಯ್ತು ಎಂಬುದನ್ನು ತಿಳಿಸುವ ಒಂದು ಒಳ್ಳೆಯ ಕಥೆ. ಸ್ವರಾಜ್ಯ-ಸ್ವಾತಂತ್ರ್ಯ ಸಂಪಾದಿಸಲು ಹಿಂದೂ ದೇಶದ ತರುಣರೂ ಮಾಡಿದ ಎಣೆಯಿಲ್ಲದ ಬಲಿದಾನದ ನೆನಪು ಇದನ್ನೋದುವಾಗ ಒತ್ತರಿಸಿ ಬಂದು, ದೇಶಕ್ಕಾಗಿ ತಮ್ಮ ಸರ್ವಸ್ವವನ್ನು ಸೂರೆಮಾಡಿದ ಆ ತ್ಯಾಗವೀರರ ದಿವ್ಯಸ್ಮೃತಿಯು ಲೋಕದೊಳಗಿನ ಅನ್ಯಾಯಗಳನ್ನು ಎದುರಿಸುವ ಸ್ಫೂರ್ತಿಯನ್ನುಂಟುಮಾಡುತ್ತದೆ.

ಶ್ರೀ. ಗೋರೂರು ರಾಮಸ್ವಾಮಿಯುವರು ಬರೆದ 'ಉಸುಬು' ಎಂಬ ಕಥಾಸಂಗ್ರಹದಿಂದ ಈ ಬಾಗವನು ಆಯ್ದುಕೊಳ್ಳಲಾಗಿದೆ.]

## ಬಿಡುಗಡೆ

ಹೈಸ್ಕೂಲಿನ ಇತಿಹಾಸದ ತರಗತಿಯಲ್ಲಿ ಅಧ್ಯಾಪಕರು **ಚೀಣ ದೇಶದ** ಪ್ರಾಚೀನ ಇತಿಹಾಸದ ಮೇಲೆ ಉಪನ್ಯಾಸ ಮಾಡುತ್ತಿದ್ದುದನ್ನು ಚಿನ್ ಎಂಬ ವಿದ್ಯಾರ್ಥಿ ಕೇಳುತ್ತಾ ಕುಳಿತಿದ್ದ. ಆದರೆ ಅವನ ಮನಸ್ಸಿಗೆ ನೆಮ್ಮದಿಯಿರಲಿಲ್ಲ; ಅವನ ಹೃದಯ ತಮಟೆಯಂತೆ ಪವಡವ ಎಂದು ಹೊಡೆದುಕೊಳ್ಳುತ್ತಿತ್ತು. ಆದರೆ ಕಾರಣ ಚಿನ್‌ಗೆ ಗೊತ್ತಾಗಲಿಲ್ಲ. ಕಾರಣವೇನಿರಬಹುದೆಂದು ಆತ ಊಹಿಸತೊಡಗಿದ. ಹೊತ್ತು ಮೀರಿ ತಾನು ತರಗತಿಗೆ ಬಂದುದರಿಂದ ಅಧ್ಯಾಪಕರಿಗೆ ತನ್ನ ಮೇಲೆ ಕೋಪ ಉಂಟಾಗಿರಬಹುದೆ? ಎಂದು ಯೋಚಿಸಿದ. ಇಲ್ಲವೆಂದು ತತ್‌ಕ್ಷಣ ಗೊತ್ತಾಯಿತು. ಇತಿಹಾಸದ ಉಪಾಧ್ಯಾಯ ಒಂದು ಬಗೆಯ ಸಾದಾ ಪ್ರಾಣಿ, ಭಾವನಾಜೀವಿ. ಚೀಣ ದೇಶದ ಕಲೆ, ಹಿಂದಲ ಕಾಲದ ನೆಮ್ಮದಿ ಶಾಂತಿಗಳನ್ನು ಕುರಿತು ಆತ ಯಾವಾಗಲೂ ಅತಿ ಉತ್ಸಾಹದಿಂದ ಮಾತನಾಡುತ್ತಿದ್ದ. ಜಪಾನರ ಆಳ್ವಿಕೆಗೊಳಗಾದ ಮಂಚೂರಿಯಾದ ರಾಜಧಾನಿ ಪೀಪಿಂಗ್‌ನ ಸ್ಕೂಲಿಗೆ ಬರುತ್ತಿದ್ದ ಚೀಣ ವಿದ್ಯಾರ್ಥಿಗಳಲ್ಲಿ ಆತನಿಗೆ ಬಹಳ ವಿಶ್ವಾಸವಿತ್ತು. "ಹಾಗಾದರೆ ನನ್ನ ಈ ಅಶಾಂತಿಗೆ ಕಾರಣವೇನು? ಹಳ್ಳಿಯಲ್ಲಿರುವ ನನ್ನ ಮುದಿತಾಯಿಯನ್ನು ಜಪಾನರು ಕೊಂದಿರಬಹುದೆ?" ಎಂದು ಚಿನ್ ಯೋಚಿಸಿದ; ಕೂಡಲೆ ಆ ಯೋಚನೆಯೂ ನಿರಾಧಾರವಾದುದೆಂದು ಆತನಿಗೆ ಹೊಳೆಯಿತು. ಯಾಕೆಂದರೆ ಎರಡು ದಿನಗಳ ಕೆಳಗೆ ಅವನ ತಾಯಿ ಅವನಿಗೆ "ನಾನು ಆರೋಗ್ಯವಾಗಿದ್ದೇನೆ. ನೀನು ಬಿ. ಎ. ಆಗುವದನ್ನೇ ಕಾಯುತ್ತಿದ್ದೇನೆ. ಅನಂತರ ಯಾವುದಾದರೂ ಕಸಬನ್ನು ಪ್ರಾರಂಭಿಸಿದರೆ ಇಬ್ಬರೂ ಒಟ್ಟಿಗಿರಬಹದೆ"ಂದು ಬರೆದಿದ್ದಳು. "ಹಾಗಾದರೆ ಈ ಹೃದಯ ಯಾಕೆ ಹೀಗೆ ಹೊಡೆದುಕೊಳ್ಳುತ್ತಿದೆ?" ಎಂದು ಚಿನ್ ಆಲೋಚಿಸತೊಡಗಿದ.

ಅವನು ಹೀಗೆ ಆಲೋಚಿಸುತ್ತಿರುವ ವಿದ್ಯಾಶಾಲೆಯ ಮುದಿ ಜವಾನ ಒಳಕ್ಕೆ ಬಂದ. ವಿದ್ಯಾಶಾಲೆಯ ಸೇವೆಯಲ್ಲಿ ಅವನ ಗಡ್ಡ ಬೆಳ್ಳಗಾಗಿತ್ತು. ಉಪಾಧ್ಯಾಯರ ಎದುರಿಗೆ ಬರುವಾಗಲೂ ಅವನು ಕೊಳವೆಯನ್ನು ಸೇದುತ್ತಲೇ ಬಂದ. ಅವನ ವಯಸ್ಸಿನಿಂದ ಅವನು ಅಧಿಕಾರಿಗಳ ಎದುರಿಗಿರಬೇಕಾದ ಸಾಂಪ್ರದಾಯಿಕ ಮರ್ಯಾದೆಯನ್ನು ಮರೆತುಬಿಡುತ್ತಿದ್ದ ಆದರೆ ಅವನು ಬಹಳ ನಮ್ರನಾದ, ನಂಬಿಗಸ್ತನಾದ ಸೇವಕ. ಆತನು ಚಿನ್‌ನ ಸಮೀಪಕ್ಕೆ ಬಂದು, ಅವನ ಕಿವಿಯಲ್ಲಿ ಮೆಲ್ಲನೆ ಕಾಣಿಯ ಧ್ವನಿಯಲ್ಲಿ "ಅಪ್ಪಾ, ಮಗು, ಹೊರಗೆ ನಿನಗಾಗಿ ಒಬ್ಬನು ಕಾಯ್ದುಕೊಂಡಿದ್ದಾನೆ," ಎಂದು ಸೇವಕನು ಹೀಗೆ [illegible] ಹೊರಗಡೆ ಆ ಮನುಷ್ಯನೆಡೆಗೆ ಕೈ ತೋರಿಸಿ ದೀರ್ಘವಾದ ನಿಟ್ಟುಸಿರು ಬಿಟ್ಟ. ಚಿನ್ ಹೊರಗಡೆ ನೋಡಿದ. ಕುಳ್ಳಗಿ ಪುಷ್ಟನಾಗಿ ಕರಿಯ ಉಡುಪನ್ನು ಧರಿಸಿದ್ದ ಆ ಬಂದಿದ್ದವನ ಬೆನ್ನು ಅವನಿಗೆ ಕಾಣಿಸಿತು. ಇದ್ದಕ್ಕಿದ್ದಂತೆ ಒಂದು ಗಳಿಗೆ ಅವನ ಹೃದಯ ಮಿಡಿಯುವುದನ್ನೇ ನಿಲ್ಲಿಸಿತು. ಚಿನ್ ಆ ಬೆಳಗ್ಗೆ ವಿದ್ಯಾಶಾಲೆಗೆ ಬರುತ್ತಿರುವಾಗ ಅವನನ್ನು ಹಿಂಬಾಲಿಸಿಕೊಂಡು ಬೀದಿಯಲ್ಲಿ ಬರುತ್ತಿದ್ದವನೇ ಅವನು. ಚಿನ್ [illegible] ದಿಂದ

ಎದ್ದನು. ಉಪಾಧ್ಯಾಯನು ಚೀಣಾದ ಹಳೆಯ ಇತಿಹಾಸವನ್ನು ಉತ್ಸಾಹದಿಂದ ಹೇಳುವದರಲ್ಲಿ ತೊಡಗಿದ್ದನು. "ಪ್ರಾಚೀನ ಚೀಣಾ ಸ್ವರ್ಗವಾಗಿತ್ತು," ಎಂದೂ ಬೋಧಿಸುತ್ತಿದ್ದನು. ಚಿನ್ ಯಾರೊಂದಿಗೂ ಯಾವ ಮಾತನ್ನೂ ಆಡದೆ ಆ ದಯಾಶಾಲಿಯಾದ ಸೇವಕನೊಡನೆ ಹೊರಕ್ಕೆ ಹೋದನು. ತರಗತಿ ಅದರ ಪಾಡಿಗೆ ನಡೆಯುತ್ತಿತ್ತು.

ಚಿನ್ ಹೊರಕ್ಕೆ ಹೋದಕೂಡಲೇ, ಕಾಳವಸ್ತ್ರಧಾರಿ ಅವನ ಕಡೆಗೆ ತಿರುಗಿ ನಕ್ಕನು. ಅವನ ಹಲ್ಲುಗಳು ಕರಾಳ ದಂಷ್ಟ್ರಗಳಂತೆ ಕಾಣುತ್ತಿದ್ದವು. ಹಾಗೆಯೇ ಅವನು ತನ್ನ ವೇಸ್ಟ್‌ಕೋಟಿನ ಜೇಬಿನಲ್ಲಿದ್ದ ಪಿಸ್ತೂಲನ್ನು ತೋರಿಸಿದನು. ಅದು ಒಳ್ಳೆಯ ಜಾತಿ ಬಂದೂಕು. ಅದರ ಹಿಡಿ ಹೊಳೆಯುತ್ತಿತ್ತು. ಅದನ್ನು ನೋಡಿ ಚಿನ್ 'ಈ-ಮಗ ನಮ್ಮ ದೇಶದವರ ಮೇಲೆ ಅನೇಕ ಸಲ ಅದನ್ನು ಉಪಯೋಗಿಸಿರಬೇಕು' ಎಂದುಕೊಂಡನು. ಕಾಳವಸ್ತ್ರಧಾರಿಯು "ಎಲ್ಲಿ, ಬೇಗ ನನ್ನನ್ನು ಹಿಂಬಾಲಿಸು'' ಎಂದನು.

ಚಿನ್‌ಗೆ ತನಗೆ ಏನೋ ಗ್ರಹಚಾರ ಬಂದಿದೆಯೆಂದು ಚೆನ್ನಾಗಿ ಗೊತ್ತಾಯಿತು. ಆದರೂ ಅವನು ಸ್ವಾಭಾವಿಕವಾದ ಧ್ವನಿಯಲ್ಲಿ 'ಆಗಲಿ' ಎಂದನು. ಆದರೆ ಹೊರಡುವುದಕ್ಕೆ ಮುಂಚೆ ಸೇವಕನನ್ನು ನೋಡಿ "ಅಪ್ಪ ಹೋಗಿಬರುತ್ತೇನೆ. ನಿನ್ನ ಎಚ್ಚರಿಕೆ ನೋಡಿಕೊ" ಎಂದು ಹೇಳಿದನು. ಮುದುಕ ಪ್ರತ್ಯುತ್ತರ ಕೊಡಲಿಲ್ಲ. ಅವನ ಕಣ್ಣು ನೀರಿನಿಂದ ತುಂಬಿತ್ತು. ಆ ವಯಸ್ಸಿಗೆ ಹಾಗೆ ಇದ್ದಕಿದ್ದಂತೆ ನುರಿಯಾಗುವ ಅನೇಕ ಯುವಕರನ್ನು ಅವನು ನೋಡಿದ್ದನು. "ನಿನಗೆ ಒಳ್ಳೆಯದಾಗಲಿ" ಎಂದು ಹೇಳುವ ಶಕ್ತಿ ಸಹ ಅವನಿಗೆ, ಇರಲಿಲ್ಲ. ಅವನ ಕಣ್ಣು ನೀರಿನಿಂದ ಮಂಜಾಗಿತ್ತು

ಚಿನ್‌ನನ್ನು ಜಪಾನ ಸೈನ್ಯಾಧಿಕಾರಿಯ ಕಚೇರಿಗೆ ಕರೆದುಕೊಂಡು ಹೋದರು. ಹೋಗುವ ದಾರಿಯಲ್ಲಿ ಕಾಳವಸ್ತ್ರಧಾರಿ ಅವನನ್ನು ಪೃಷ್ಠದ ಮೇಲೆ ಅನೇಕ ಸಲ ಒದ್ದಿದ್ದನು. ಕಚೇರಿಯ ಸಣ್ಣ ಕೊಠಡಿಯ ಕುರ್ಚಿಯ ಮೇಲೆ ಸೈನ್ಯಾಧಿಕಾರಿ ಕುಳಿತಿದ್ದನು. ಅವನ ಮುಖ ವಿಕಾರವಾಗಿತ್ತು. ಮೀಸೆ ಬಿಡಿಬಿಡಿಯಾಗಿ ವಿರಳವಾಗಿತ್ತು ಅವನ ಎದುರಿಗೆ ಹಾಕಿದ್ದ ಕಾಲುಮಣೆಯಮೇಲೆ ಚಿನ್‌ನನ್ನು ಕೂರಿಸಿದರು. ದಾರಿಯಲ್ಲಿ ತಿಂದಿದ್ದ ಒದೆತದಿಂದ ಚಿನ್‌ನ ಪೃಷ್ಠ ಇನ್ನೂ ನೋಯುತ್ತಿತ್ತು. ಕೊಠಡಿಯ ಬಾಗಿಲನ್ನು ಮುಚ್ಚಿದರು. ಕೂದಲ ಬ್ರಷ್‌ನಂತೆ ದಪ್ಪ ಮೀಸೆಯುಳ್ಳ ಒಬ್ಬ ಟೊಣಪ ಜಪಾನನು ಬಾಗಿಲಲ್ಲಿ ನಿಂತನು.

ಜಪಾನ್ ಸೈನ್ಯಾಧಿಕಾರಿ ರಕ್ತದಂತೆ ಕೆಂಪಾದ ಕಣ್ಣುಗಳನ್ನು ಚಿನ್‌ನ ಮೇಲೆ ಇಟ್ಟು "ನಿನ್ನ ಸಂಸ್ಥೆಯ ಸಂಗತಿಗಳನ್ನೆಲ್ಲಾ ಹೇಳಿಬಿಡು. ನಾವು ಬಹು ದಿನಗಳಿಂದ ನಿನ್ನ ಬೆನ್ನು ಹತ್ತಿದ್ದೇವೆ. ಸುಳ್ಳು ಹೇಳುವುದು ಪ್ರಯೋಜನವಿಲ್ಲ" ಎಂದನು.

ಚಿನ್ ತಲೆಯೆತ್ತಿ ತನ್ನನ್ನು ಪ್ರಶ್ನಿಸುತ್ತಿದ್ದವನನ್ನು ನೋಡಿದನು. ಚಿನ್‌ನ ಕಣ್ಣಿಗೆ ಅಧಿಕಾರಿ ಒಳ್ಳೆ ಕಳ್ಳನಂತೆ ಕಂಡನು. "ನಾನು ವಿದ್ಯಾರ್ಥಿ, ಯಾವ ಸಂಸ್ಥೆಯ ಸಮಾಚಾರವೂ ನನಗೆ ತಿಳಿಯದು" ಎಂದನು.

"ತಿಳಿಯದೆ?" ಎಂದು ಅಧಿಕಾರಿ ಗರ್ಜಿಸಿದನು. ಆ ಧ್ವನಿ ಬೇಟೆಯ ಮೇಲೆ ಎರಗುವ ರಣಹದ್ದಿನ ಧ್ವನಿಯಂತೆ ಭಯಂಕರವಾಗಿತ್ತು. ಅಧಿಕಾರಿಯು 'ಇದನ್ನು ನೋಡು' ಎಂದು ಒಂದು ಹಸ್ತಪತ್ರಿಕೆಯನ್ನು ತೋರಿಸಿದನು. ಅದು ಈ ರೀತಿ ಇತ್ತು: "ದೇಶಬಾಂಧವರೇ ಆಕ್ರಮಣಕಾರರಿಗೆ ಎದುರಾಗಿ ದಂಗೆ ಏಳಿ." ಆ ಹಸ್ತಪತ್ರಿಕೆಯ ಕೊನೆಯಲ್ಲಿ ಅದನ್ನು ಹೊರಡಿಸಿದವರ ರುಜು ಇತ್ತು. "ಅಖಿಲ ಚೀಣಿ ದೇಶಭಕ್ತ ಯುವಕರ ಪೀಪಿಂಗ್ ಶಾಖೆ."

ಚಿನ್ ಮಾತನಾಡದೆ ಆ ಚೀಟಿಯನ್ನು ನೋಡಿದನು. ತನಗೆ ಅದು ಅರ್ಥವಾಗುವುದೇ ಇಲ್ಲವೇನೋ ಎಂಬಷ್ಟು, ಮಂಕಿನಿಂದ ನಿರಪರಾಧಿ ದೃಷ್ಟಿಯಿಂದ, ಅದನ್ನು ನೋಡಿದನು. ಸಂಸ್ಥೆಯ ಕಾರ್ಯದರ್ಶಿ ಲಿಲ್ಲಿಯ ಕಾರ್ಯ ಅದು ಎಂಬುದು ಅವನಿಗೆ ಚೆನ್ನಾಗಿ ಗೊತ್ತಿತ್ತು. ಆ ಹುಡುಗಿ ಎಷ್ಟು ಜಾಣೆ! ಚೀಣದ ಪ್ರಾಚೀನವಾದ, ಶಾಂತವಾದ, ಕಲಾಪೂರಿತವಾದ ಸಾಧುಭಾಷೆಯನ್ನು ರಾಷ್ಟ್ರದ ಬಿಡುಗಡೆಗಾಗಿ ಎಂತಹ ತೀಕ್ಷ್ಣವಾದ ಆಯುಧವನ್ನಾಗಿ ಮಾರ್ಪಡಿಸಿಕೊಂಡಿದ್ದಾಳೆ ಎಂದುಕೊಂಡನು. ಹಸ್ತಪತ್ರಿಕೆಯ ಶೈಲಿಯನ್ನು ತಾನೇ ಒಪ್ಪಿದ್ದನು. ಅದರಲ್ಲಿ ಕಂಡ ಯುದ್ಧಮನೋಭಾವ ಅವನಿಗೂ ಇಷ್ಟವಾಗಿತ್ತು ಅಧಿಕಾರಿಯ ಕೈಯಲ್ಲಿದ್ದ ಚೀಟಿಯನ್ನು ನೋಡಿ ತನ್ನನ್ನು ಬಂಧಿಸಿದುದೇಕೆಂಬುದು ಅವನಿಗೆ ತತ್‌ಕ್ಷಣ ಗೊತ್ತಾಯಿತು. ನಿನ್ನೆ ದಿನ ನಡೆದ ಸಂಗತಿ ಅವನ ಜ್ಞಾಪಕಕ್ಕೆ ಬಂದಿತು. ಅವನು ಟ್ರಾಮಿನಲ್ಲಿ ಕುಳಿತು ಪಾಠಶಾಲೆಗೆ ಹೊರಟಿದ್ದನು; ಜೇಬಿನಲ್ಲಿ ತುರುಕಿದ್ದ ಹಸ್ತಪತ್ರಿಕೆ ಜೇಬಿನಿಂದ ಈಚೆಗೆ ತಲೆಹಾಕಿತ್ತು ಟ್ರಾಂ ಕಂಡಕ್ಟರಿಗೆ ಕೊಡಲು ಅವನು ಜೇಬಿನಲ್ಲಿ ಚಿಲ್ಲರೆಯನ್ನು ಹುಡುಕುತ್ತಿದ್ದನು. ಆಗ ಮತ್ತೊಬ್ಬ ಪ್ರಯಾಣಿಕನ ಕಣ್ಣಿಗೆ ಆ ಹಸ್ತಪತ್ರಿಕೆ ಬಿತ್ತು. ಆತ ಅದನ್ನು ಕುರಿತು ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿದ್ದನು. ತನ್ನ ಮೇಲೆ ಸಂಶಯ ಬಾರದಿರಲೆಂದು ಚಿನ್ ಆ ಕಾಗದವನ್ನು ಚೆಂಡಿನಂತೆ ಸುತ್ತಿ ಕಿಟಕಿಯಿಂದ ಹೊರಕ್ಕೆ ಬೀದಿಗೆ ಎಸೆದಿದ್ದನು. ಈಗ ನೋಡಿದರೆ ಆ ಪ್ರಯಾಣಿಕ ಆ ಕಾಗದವನ್ನು ಅನಂತರ ತೆಗೆದುಕೊಂಡನೆಂಬುದು ಸ್ಪಷ್ಟವಾಗಿತ್ತು. ನಿನ್ನೆ ಆ ಪ್ರಯಾಣಿಕನನ್ನು ನೋಡಿಯೇ ಚಿನ್‌ಗೆ ಸ್ವಲ್ಪ ಗಾಬರಿಯಾಗಿತ್ತು. ಅವನು ತನ್ನ ಪರಿಚಿತರಿಗೆ ಗೊತ್ತಿದ್ದ ಹಾಸ್ಟಲ್‌ಗೆ ಪಾಠಶಾಲೆಯಿಂದ ಹಿಂದಿರುಗಲಿಲ್ಲ. ರಾತ್ರಿಯನ್ನು ಒಂದು ಹೋಟಲಿನಲ್ಲಿ ಕಳೆದಿದ್ದನು.

ಅಧಿಕಾರಿ ಹಸ್ತಪತ್ರಿಕೆಯನ್ನು ಚಿನ್‌ನ ಕಣ್ಣಿನ ಮುಂದೆ ಹಿಡಿದು "ಇದನ್ನು ಬರೆದವರಾರು? ನಿನಗೆ ಜ್ಞಾಪಕವಿರಬೇಕು, ನಿಜವನ್ನು ಹೇಳು" ಎಂದನು ಅವನ ಧ್ವನಿ ಕೀರಲು ಧ್ವನಿಯಾಗಿತ್ತು. ಹಸ್ತಪತ್ರಿಕೆಯ ಮೇಲೆ ಅವನು ಇಟ್ಟಿದ್ದ ಬೆರಳು ಕೆಂಪು ಮೂಲಂಗಿಯಂತೆ ಇತ್ತು. ಆತನ ಧ್ವನಿ ಇದ್ದಕಿದ್ದಂತೆ, ಮೃದುವೂ ಅಸ್ವಾಭಾವಿಕವೂ ಆಯಿತು. "ಮಗು, ನೀನು ನಿರಪರಾಧಿ, ಪಾಪ, ಅದು ನನಗೆ ಗೊತ್ತು. ನೀನು ಕಣ್ಣು ಮುಚ್ಚಿಕೊಂಡು ಅವರನ್ನು ಹಿಂಬಾಲಿಸುತ್ತಿದೀಯೆ,

ಅದನ್ನು ಬರೆದವರು ಯಾರು ಹೇಳು, ನಿನ್ನನ್ನು ಮನೆಗೆ ಕಳುಹಿಸಿಬಿಡುತ್ತೇನೆ" ಎಂದನು.

ಶತ್ರುವಿನಲ್ಲಿ ದಯೆಯನ್ನು ಬೇಡುವುದು ಪ್ರಯೋಜನವಿಲ್ಲವೆಂದು ಚಿನ್‌ಗೆ ಗೊತ್ತಾಗಿದ್ದಿತು. ಅವನು "ನನಗೆ ಗೊತ್ತಿಲ್ಲ" ಎಂದನು.

ಅಧಿಕಾರಿಗೆ ಬಹಳ ಕೋಪ ಬಂತು. ಅವನು "ಗೊತ್ತಿಲ್ಲವೆ? ನಿಮ್ಮ ಮುಖಂಡನನ್ನು ಸೆರೆಹಿಡಿದಿದ್ದೇವೆ. ಅವನು ಎಲ್ಲವನ್ನೂ ಹೇಳಿದ್ದಾನೆ" ಎಂದು ಗರ್ಜಿಸಿದನು.

ಚಿನ್‌ಗೆ ಗಟ್ಟಿಯಾಗಿ ನಗು ಬಂದುಬಿಟ್ಟಿತು. ಆದರೆ ಅವನು ನಗುವನ್ನು ತಡೆದುಕೊಂಡನು. 'ಜಪಾನ ಹೇಳುತ್ತಿದ್ದುದು ಸುಳ್ಳು. ನಿಜವಾದ ಸುಳ್ಳು' ಎಂಬುದು ಅವನಿಗೆ ಗೊತ್ತಿತ್ತು. ಯಾಕೆಂದರೆ ಅವನು ತಾನೇ ಮುಖಂಡನಾಗಿದ್ದನು. ಆದರೆ ಜಪಾನನ ಮಾತನ್ನು ಕೇಳಿ ಅವನಿಗೆ ತುಂಬ ಸಂತೋಷವಾಯಿತು. ಅದರಿಂದ ತನ್ನ ಹೊರತು ಮತ್ತಾವ ತನ್ನ ಮಿತ್ರರೂ ಜಪಾನರ ಕೈಗೆ ಸಿಕ್ಕಿರಲಿಲ್ಲವೆಂಬುದು ಸ್ಪಷ್ಟವಾಯಿತು. ಅವನು ಶಾಂತನಾಗಿ "ನನಗೆ ಗೊತ್ತಿಲ್ಲ" ಎಂದನು.

ಜಪಾನನು ಬಾಗಿಲಲ್ಲಿ ನಿಂತಿದ್ದ ಟೊಣಪನನ್ನು ಕರೆದನು. "ಸಬ್ರೋ, ಇವನು ಒಪ್ಪಿಕೊಳ್ಳುವಂತೆ ಮಾಡುವ ಮಾರ್ಗ ನಿನಗೆ ಗೊತ್ತು" ಎಂದನು.

ಮೈಯೆಲ್ಲ ಕೂದಲು ತುಂಬಿದ್ದ ಟೊಣಪ ಮುಂದಕ್ಕೆ ಬಂದನು. ಅವನನ್ನು ನೋಡಿದರೆ ಅವನು ಜುಜುಟ್ಸು (ಜಪಾನಿ ಕುಸ್ತಿಯ ಪ್ರಕಾರ) ನಿಪುಣನಂತೆ ಕಾಣುತ್ತಿದ್ದನು. ಅವನು ಚಿನ್‌ನ ಮುಂದೆ ಒಂದು ಗಳಿಗೆ ನಿಂತು ನೋಡಿದನು. ಎದುರಿಗೆ ಯಾರೂ ಇಲ್ಲ ಎಂಬಂತಿತ್ತು ಆ ನೋಟ. ಅನಂತರ ಟೊಣಪ ಹಲ್ಲನ್ನು ಕಡಿದು ತನ್ನ ಮುಷ್ಟಿಯಿಂದ ಚಿನ್‌ನ [illegible] ಮೇಲೆ ಬಿಡತೊಡಗಿದನು. ಆ ಏಟುಗಳು ಚರ್ಚ ಗಂಟೆಗೆ ಸುತ್ತಿಗೆಯಿಂದ ಬಿಡುವ ಬಡಿತಗಳಂತಿದ್ದುವು. ಟೊಣಪನು ಹೀಗೆ ಅಸಂಖ್ಯಾತ ಬಡಿತಗಳನ್ನು ಬಡಿದನು. ಕೊನೆಗೆ ಚಿನ್‌ಗೆ ಜ್ಞಾನ ತಪ್ಪಿತು ಅವನು ನೆಲದ ಮೇಲೆ ಬಿದ್ದು ನಾಯಿಯಂತೆ ಮುದುರಿಕೊಂಡನು. ಟೊಣಪನು ಕಬ್ಬಿಣದ [illegible] ಬೂಟ್ಸಿನಿಂದ ಚಿನ್‌ನನ್ನು ಚೆನ್ನಾಗಿ ಒದ್ದನು. ಒದೆಯುವಾಗ ಅವನಿಗೂ ಮೈಮೇಲೆ ಜ್ಞಾನವಿರಲಿಲ್ಲ. ಅವನೂ ಬೆವರುತ್ತಿದ್ದನು.

ಅನಂತರ ಟೊಣಪನು ಹಲ್ಲು ಕಡಿಯುತ್ತಾ 'ಈಗ ಇಷ್ಟು ಸಾಕು' ಎಂದನು. ಮೂಲೆಯಲ್ಲಿ ನಿಲ್ಲಿಸಿದ್ದ ಮಂಜುಗಡ್ಡೆಯ ಪೆಟ್ಟಿಗೆಯಿಂದ ತಣ್ಣೀರನ್ನು ತೆಗೆದು ಅದನ್ನು ಚಿನ್‌ನ ಮೇಲೆ ಎರಚಿದನು. ಹೀಗೆ ಚಿನ್‌ನ ದೇಹವೆಲ್ಲ ತಣ್ಣೀರಿನಿಂದ ತೊಯ್ದನಂತರ ಅವನು ನಿಜವಾಗಿಯೂ ನೀರಿನಿಂದ ಮೇಲಕ್ಕೇಳದೆ ತೇಲಿ ಹೋಗುತ್ತಿದ್ದ ನಾಯಿಯಂತೆ ಕಂಡನು.

ಚಿನ್‌ನು ನಿಧಾನವಾಗಿ ಚೇತರಿಸಿಕೊಂಡು ಕಣ್ಣು ಬಿಟ್ಟು ನೋಡಿದಾಗ 'ಜಾಪ್' ಅಧಿಕಾರಿ ಅವನ ಕಣ್ಣಿಗೆ ಬಿದ್ದನು.

ಅಧಿಕಾರಿಯು ಒಂದು ವಿಧವಾದ ತೃಪ್ತಿಯ ನಗುವಿನಿಂದ "ಎಲ್ಲಿ, ಈಗ ನಿಜವನ್ನು ಹೇಳು" ಎಂದನು.

ಚಿನ್ "ನನಗೆ ಏನೂ ತಿಳಿಯದು" ಎಂದನು. ತಾನು ಏನು ಹೇಳುತ್ತಿರುವೆನೆಂಬುದು ಅವನಿಗೇ ಅರ್ಥವಾಗಿರಲಿಲ್ಲ. ಅವನ ತುಟಿಗಳು ಮಾತ್ರ ಉಚ್ಚರಿಸುತ್ತಿದ್ದವು.

ಜಪಾನ ಅಧಿಕಾರಿಯು 'ಹಾಗೊ—' ಎಂದು ಒಂದು ಸಲ ಅರ್ಥವತ್ತಾದ ದೃಷ್ಟಿಯಿಂದ ಟೊಣಪನನ್ನು ನೋಡಿದನು.

ಟೊಣಪನು ತುಂಬಾ ಸುವಾಸನೆಯಾಗಿದ್ದ ಸುಗಂಧಕಡ್ಡಿಗಳನ್ನು ಹಚ್ಚಿ ಅದರ ಮನೋಹರವಾದ ಧೂಪವನ್ನು ನಿಧಾನವಾಗಿ ಚಿನ್‌ನ ಮುಖದ ಮೇಲೆ ಊದಿದನು. ದೇವರು, ತಾನು ಮಣ್ಣಿನಿಂದ ಬಹಳ ಜಾಗರೂಕತೆಯಿಂದ ಮಾಡಿದ ವಿಗ್ರಹಕ್ಕೆ, ಪ್ರಾಣವನ್ನು ತುಂಬುವಷ್ಟು ಎಚ್ಚರಿಕೆಯಿಂದ ಊದಿದನು. ಮೊದಲು ಚಿನ್‌ಗೆ ಹೊಸ ಜೀವ ಬಂದಂತಾಯಿತು. ಗಟ್ಟಿಯಾಗಿ ಸೀನು ಬಿಟ್ಟನು. ಆದರೆ ಒಂದೆರಡು ಗಳಿಗೆ ನಂತರ ಅವನು ಗೊಂಬೆಯಂತೆ ಮಂಕಾದನು.... ಅವನ ಆತ್ಮ ಒಂದು ಹೊಸ ಪ್ರಪಂಚದಲ್ಲಿ ವಿಹರಿಸುತ್ತಿತ್ತು. ಅಲ್ಲಿ ಮನುಷ್ಯರು ಇರಲಿಲ್ಲ. ಬರಿಯ ಅಚ್ಚ ಹಸಿರು ಬಯಲುಗಳು, ಮರಗಳು, ಹವಳ–ಸರಸ್ಸುಗಳು; ಅವುಗಳಲ್ಲಿ ಕೆಳಕ್ಕೂ ಮೇಲಕ್ಕೂ ಈಜಾಡುತ್ತಿದ್ದ ಮೀನುಗಳು. ಇದ್ದಕ್ಕಿದ್ದಂತೆ ಬಿದರಿನ ಪೆಳೆಯ ಕಡೆಯಿಂದ ಅಲ್ಲಿಗೆ ಯಾರೋ ನಡೆದುಕೊಂಡು ಬರುತ್ತಿರುವದು ಕಂಡಿತು. ಅವಳು ತನ್ನ ಬಾಲ್ಯದ ಗೆಳತಿ ಲಿಲ್ಲಿ. ಅವಳೊಂದಿಗೆ ಚಿನ್‌ನು ಈಗಲೂ ಹೈಸ್ಕೂಲಿಗೆ ಹೋಗುತ್ತಿದ್ದನು. ಒಳ್ಳೆ ಗೆಲುವಿನ ಹುಡುಗಿ; ಯಾವಾಗಲೂ ನಗುತ್ತಲೇ ಇರುತ್ತಿದ್ದಳು. ದುಃಖ ಆಕೆಯನ್ನು ಸೋಂಕುತ್ತಿರಲಿಲ್ಲ.

ಚಿನ್‌ನ ಕೈಯನ್ನು ಹಿಡಿದುಕೊಂಡು ಆಕೆ 'ಚಿನ್ ಇಂದು ನಮಗೆ ಬಿಡುವು. ಗಣಿತದ ಅಧ್ಯಾಪಕರಿಗೆ ಕಾಯಿಲೆ, ನಾವು ತರಗತಿಗೆ ಹೋಗಿ ಒಣ ಪಾಠಕ್ಕೆ ಕೂಡಬೇಕಾಗುವುದಿಲ್ಲ. ಚಿನ್ ನೋಡು ಪ್ರಾತಃಸೂರ್ಯ!' ಎಂದಳು. ಸೂರ್ಯ ಪೂರ್ವದಿಗಂತದಲ್ಲಿ ಅರ್ಧ ಕಿತ್ತಳೆ ಹಣ್ಣಿನಂತೆ ಜನಿಸಿ, ಅನಂತರ ಬೆಂಕಿಯ ಚೆಂಡಾಗಿ ಜಗತ್ತನ್ನೆಲ್ಲ ಬೆಳಗಿ ಎಲ್ಲಕ್ಕೂ ಪ್ರಾಣಚೇತನವನ್ನು ತುಂಬಿ ಎಳೆಬಿಸಿಲಿನಲ್ಲಿ ತೊಯ್ಯಿಸುತ್ತಿದ್ದುದನ್ನು ನೋಡಿ ಲಿಲ್ಲಿ ಆನಂದದಿಂದ ಹಸಿರು ಗರಿಕೆಯ ಬಯಲಿನಲ್ಲಿ ನೆಗೆದಾಡಿದಳು. ಒಂದು ಜಂಕೆ ಪೊದೆಯಿಂದ ಈಚೆಗೆ ಜಿಂಗನೆ ಹಾರಿತು. ಮೀನುಗಳು ನೀರಿನಿಂದ ಮೇಲಕ್ಕೆ ನೆಗೆದುವು. ಕೋಗಿಲೆ ಹಾಡಿತು. 'ಚಿನ್, ಬಾ, ನಾವೂ ಕುಣಿದು ಹಾಡೋಣ. ಚಿನ್ ಯಾಕೆ ಅಳುತ್ತಿದ್ದೀಯೆ? ಇವತ್ತು ನಮಗೆ ಬಿಡುವು. ಆ ಒಣ ಪಾಠಗಳಿಲ್ಲ." ಲಿಲ್ಲಿಯು ಸೀಲಿ ಬಣ್ಣ...

ಕಸೂತಿ ಮಾಡಿದ್ದ ಕರವಸ್ತ್ರದಿಂದ ಚಿನ್‌ನ ಕಣ್ಣಿನಲ್ಲಿ ಸುರಿಯುತ್ತಿದ್ದ ನೀರನ್ನು ಒರಸಿದಳು.—

ಚಿನ್‌ಗೆ ಎಚ್ಚರಾಯಿತು. ನಿಜವಾಗಿಯೂ ಅವನ ಕೆನ್ನೆಯ ಮೇಲೆ ಕಣ್ಣೀರು ಹರಿದಿತ್ತು. ಆದರೆ ಅವನು ಹಸಿರು ಹಚ್ಚನೆಯ ತೋಟದಲ್ಲಿರಲಿಲ್ಲ, ಸೆರೆಮನೆಯ ಕೆಳ ಅಂತಸ್ತಿನ ಕೊಠಡಿ (ಸೆಲ್)ಯೊಂದರಲ್ಲಿದ್ದನು. ಅದಕ್ಕೆ ಒಂದು ಸಣ್ಣ ಕಿಟಕಿ ಇತ್ತು. ಕಿಟಕಿಯಿಂದ, ಹೊರಗೆ ಮೇಲಕ್ಕೆ ಎದ್ದ ಎತ್ತರವಾದ ಗೋಡೆಗಳು ಕ್ರೂರವೂ, ಭಯಂಕರವೂ ಆಗಿ ತೋರುತ್ತಿದ್ದುವು.

ಅವನನ್ನು ತಣ್ಣಗೆ ಒರಟಾಗಿದ್ದ ಸಿಮೆಂಟ ನೆಲದ ಚಾಪೆಯಲ್ಲಿ ಮಲಗಿಸಿದ್ದರು. ಅವನ ಅವಯವಗಳು ನೋವಿನಿಂದ ಒರಟಾಗಿ ನಿಮಿರಿ ನಿಂತಿದ್ದವು. ಹಾಗೆಯೇ ಅವು ಬಹಳ ಸಡಿಲವಾಗಿಯೂ ಇದ್ದಂತೆ ತೋರಿದವು. ಮೂಳೆಗಳನ್ನೆಲ್ಲ ಮುರಿದು ಅವನ್ನು ಒಂದು ಸಣ್ಣ ಸೂತ್ರದಿಂದ ಸ್ವಲ್ಪಮಟ್ಟಿಗೆ ಬಂಧಿಸಿದ್ದಂತೆ ಅವನಿಗೆ ಭಾಸ ವಾಯಿತು. ಅವನ ಶ್ವಾಸಕೋಶ ಯಾವ ಗಳಿಗೆಗೆ ಬೇಕಾದರೂ ಒಡೆದು ಹೋಗು ವಷ್ಟು ಬಿಗಿಯಾಗಿ ತೋರಿತು. ಮೂಗಿನ ಸೊಳ್ಳೆಗಳು ಒಣಗಿ ಅದರಲ್ಲಿ ರಕ್ತ ಹೆಪ್ಪು ಗಟ್ಟಿತ್ತು. ಅವನು ಏಳಲು ಪ್ರಯತ್ನಿಸಿದನು. ನಿಶ್ಶಕ್ತಿಯಿಂದ ಸಾಧ್ಯವಾಗಲಿಲ್ಲ. ತನ್ನ ಒರಟುತನ ಅವನಿಗೆ ಬೇಸರಿಕೆಯನ್ನುಂಟುಮಾಡತೊಡಗಿತು.

ನಿಶ್ಶಬ್ದತೆಯನ್ನು ಭೇದಿಸುತ್ತಿದ್ದುದು ಹೊರಗಡೆ ತಿರುಗುತ್ತಿದ್ದ ಜಪಾನ್ ವಾರ್ಡರನ ಹೆಜ್ಜೆಯ ಸದ್ದು ಮಾತ್ರ. ಸೆರೆಮನೆಯಲ್ಲಿ ಅನೇಕ ಕೊಠಡಿಗಳಿದ್ದುವು. ಅವುಗಳ ಬಾಗಿಲು ತಿರುಗಾಡುವ ದಾರಿಯ ಕಡೆಗಿತ್ತು. ಸೆರೆಯಾಳುಗಳೆಲ್ಲ ಶಾಂತ ರಾಗಿದ್ದರು. ವಿಚಿತ್ರ ಪ್ರಾಣಿಗಳು! ನೆಲಮಾಳಿಗೆಯ ಸೆರೆಕೊಠಡಿಯಲ್ಲಿ ಪ್ರವೇಶಿಸಿದ ಕೂಡಲೆ ಅವರ ಧ್ವನಿ ಉಡುಗಿಹೋದಂತೆ ತೋರುತ್ತಿದ್ದಿತು. ಯಾರೊಂದಿಗಾದರೂ ಮಾತನಾಡೋಣ ಎಂದು ಚಿನ್ ಬಯಸಿದ್ದನು. ಆದರೆ ಅಲ್ಲಿಯ ಮುಖವೂ ಆ ಬಾಲ್ಯದಂತೆಯೇ ಕಣ್ಮರೆಯಾಗಿಹೋಗಿತ್ತು. ಕಿಟಕಿಯ ಸಂದಿನಿಂದ, ಒಂದು ಚೂರು ಕಪ್ಪು ಆಕಾಶದ ಎದುರಿಗೆ....

ಇದ್ದಕಿದ್ದಂತೆ ಚಿನ್ನನ ನೈ ನಡುಗಿತು. ಈ ಸ್ಥಳ ಯಾವುದೆಂಬುದು ಅವನಿಗೆ ಹೊಳೆಯತೊಡಗಿತು. ನಾವಿರಾರು ಯುವಕರು ತಮ್ಮ ಜೀವಿತವನ್ನು ಗೋರಿಮಾಡಿ ಕೊಂಡ ಸ್ಥಳ ಅದು. ಅವರೊಂದಿಗೆ 'ತಮ್ಮ ನಾಡು ಸ್ವತಂತ್ರವಾಗಬೇಕು. ಜಗತ್ತಿನ ಭವಿಷ್ಯ ಮಂಗಳವಾಗಬೇಕು' ಎಂಬ ಅಸ್ಪಷ್ಟವಾದರೂ ಸುಂದರವಾದ ಭಾವನೆಗಳೆಲ್ಲ ಮಣ್ಣುಗೂಡಿದ ಸ್ಥಳ ಅದು. ಅವನೂ ಇಲ್ಲಿಯೇ ತನ್ನ ಜೀವಿತವನ್ನು ಹೂಳಿಕೊಳ್ಳಲು ಬಂದಿದ್ದನು. ಆದರೆ ಅವನು ಈಗ ತಾನೆ ಯೌವನದಲ್ಲಿ ಕಾಲಿಟ್ಟು ತನ್ನ ಬಾಳನ್ನು ಬಾಳಲು ಪ್ರಾರಂಭಿಸಿದ್ದನು. ಆ ಬಾಳು ಸುಖದ ಆಸೆಗಳಿಗೆ ಆಗರವಾಗಿತ್ತು. ಆದರೆ ಈ ತಣ್ಣಗಿರುವ ನೆಲಮಾಳಿಗೆಯೋ! ಆದರೆ ತಪ್ಪಿಸಿಕೊಳ್ಳಲು ಅವನಿಗೆ ಒಂದು ದಾರಿ ಇತ್ತು. ತನ್ನವರನ್ನು ಬಿಟ್ಟುಕೊಟ್ಟು ಜಪಾನರಿಗೆ ತನ್ನ ಆತ್ಮವನ್ನು ಮಾರಿಕೊಳ್ಳು

ವುದು ! ಆದರೆ ಹಾಗೆ ಮಾಡಿದಮೇಲೆ ಇನ್ನ ಜೀವಿತವೇನು? ಅನಂತರ ಯಾತಕ್ಕಾಗಿ ಬಾಳಬೇಕು? ಚಿನ್ ಮೂಕವಾದ ಆ ಕಬ್ಬಿಣ ಸಲಾಕೆಗಳನ್ನು ನೋಡಿದನು ಅವನ ಉತ್ಸಾಹಪೂರಿತ ಜೀವನದಲ್ಲಿ ಅದೇ ಮೊದಲನೆಯ ಸಲುವಾಗಿ ಆತನ ಹೃದಯ ಭಾರವಾಯಿತು ಕಣ್ಣುಗಳಲ್ಲಿ ನೀರು ತುಂಬಿತು.

ಅವನ ತಂದೆ ಸತ್ತಾಗ ಅವನು ಇನ್ನೂ ಮಗು. ತಂದೆಯ ಕೊನೆಯ ಮಾತುಗಳನ್ನು ತಾಯಿಯು ಅವನಿಗೆ ಹೇಳಿದುದು ಚೆನ್ನಾಗಿ ಜ್ಞಾಪಕಕ್ಕೆ ಬಂದಿತು. ಆ ವೃದ್ಧ ವೀರ, ಚೀಣದ ಪ್ರಜಾಧಿಪತ್ಯದ ಸ್ಥಾಪನೆಗಾಗಿ ತನ್ನ ಯೌವನವನ್ನೆಲ್ಲ ಧಾರೆಯಾಗಿ ಎರೆದಿದ್ದನು. ಅವನು ಆಯುಸ್ಸಿನ ಹೆಚ್ಚು ಭಾಗವನ್ನು ಸೆರೆಯಲ್ಲಿಯೇ ಕಳೆದು ಹೊರಕ್ಕೆ ಬಂದ ಅತ್ಯಲ್ಪ ಕಾಲದಲ್ಲಿಯೇ ಮಡಿದಿದ್ದನು. ಸಾಯುವಾಗ ಆತ ಹೆಂಡತಿಯ ಕೈ ಹಿಡಿದುಕೊಂಡು "ನಾನು ಸಾಯುತ್ತಿದ್ದೇನೆ, ಆದರೆ ಅನೇಕರು ನನ್ನ ಬಾಳನ್ನು ಮುಂದಕ್ಕೂ ಬಾಳುತ್ತಾರೆ" ಎಂದು ಹೇಳಿದ್ದನು.

"ಹೌದು, ಬಾಳು ಸೃಷ್ಟಿಯ ಪುನರಾವರ್ತನೆ" ಎಂದು ಚಿನ್‌ಗೆ ತತ್‌ಕ್ಷಣ ತೋರಿತು. ಅದರಿಂದ ಅವನಿಗೆ ಒಂದು ಹೊಸ ಸತ್ಯ ಹೊಳೆದಂತೆ ಆಯಿತು. "ಈ ಸಾಮಾಜಿಕ ಜೀವನದಲ್ಲಿ ನಾನೊಂದು ಸಣ್ಣ ಕಣ ಆದರೆ, ನನ್ನ ಶಕ್ತಿ ಇದ್ದಷ್ಟು ನನ್ನ ಭಾರವನ್ನು ನಿರ್ವಹಿಸಿದ್ದೇನೆ" ಎಂದುಕೊಂಡನು ಸಂಸ್ಥೆಯ ಕಾರ್ಯದರ್ಶಿ ಲಿಲ್ಲಿ ಸೃಷ್ಟಿಕಾರ್ಯವನ್ನು ಮುಂದುವರಿಸುವಳು. ಮಿತ್ರರು ಖಂಡಿತ ಆಕೆಯನ್ನೇ ತನ್ನ ಸ್ಥಳಕ್ಕೆ ಚುನಾಯಿಸುವರು. ಆಕೆ ಎಷ್ಟು ಶಕ್ತಳಾದ ಹುಡುಗಿ! ಆಕೆಯ ಚುರುಕು ಬುದ್ಧಿ, ಶಿಸ್ತು, ಶತ್ರುಗಳ ಮೇಲೆ ಕೋಪ, ಸ್ನೇಹಿತರ ಆ ಸಹಾನುಭೂತಿ, ಎಲ್ಲಕ್ಕಿಂತ ಹೆಚ್ಚಾಗಿ ದುಃಖಿತರಾದ ತನ್ನ ದೇಶದವರಲ್ಲಿ ಆಕೆಯ ಪ್ರೇಮ, ಉತ್ಸಾಹ ಇವನ್ನೆಲ್ಲಾ ಅವನು ಯೋಚಿಸಿದನು. ಅವಳು ಆನಂದಸಮಯದಲ್ಲಿ ನಗುತ್ತಿದ್ದ ನಗುವನ್ನು ಅವನು ಜ್ಞಾಪಿಸಿಕೊಂಡನು. ವಸಂತಕಾಲದ ಸೂರ್ಯನಂತೆ ಗೆಲುವಾಗಿದ್ದ, ದೇಶದ ಆತ್ಮದ ಆಶಾಪೂರಿತವಾಗಿದ್ದ ಆ ಉತ್ಸಾಹದ ಎದ್ದ ನಗು....

ಸೆರೆಮನೆಯ ಬಾಗಿಲು ತೆರೆದುದರಿಂದ ಅವನ ಸಮಾಧಿ ಭಂಗವಾಯಿತು. ಇಬ್ಬರು ಸಿಪಾಯಿಗಳು ಒಳಕ್ಕೆ ಪ್ರವೇಶಿಸಿದರು. ಅವರ ತೋಳುಗಳ ಮೇಲೆ ಕೆಂಪು ಪಟ್ಟಿಗಳಿದ್ದವು. ಎರಡು ಕೋಠಡಿಗಳಲ್ಲಿದ್ದ ಇಬ್ಬರು ಯುವಕರನ್ನು ಅವರು ಎಳೆದುಕೊಂಡು ಹೋದರು. ಬಾಗಿಲು ಮತ್ತೆ ಹಾಕಿತು ಕತ್ತಲೆಯಾಗುತ್ತಿತ್ತು. ಸಂದಿಯಲ್ಲಿ ಕಾಣುತ್ತಿದ್ದ ಅಂತರಿಕ್ಷ ಸಹ ಚಿನ್‌ಗೆ ಈಗ ಕಾಣುತ್ತಿರಲಿಲ್ಲ. ಹೊರಗಡೆ 'ಗುಂಡು ಹಾರಿಸಿ' ಎಂದು ಕೂಗಿದ ಶಬ್ದವಾಯಿತು. ಕೂಡಲೆ ಅನೇಕ ತುಪಾಕಿಗಳು ಏಕಕಾಲದಲ್ಲಿ ಹಾರಿದುವು. ಅನಂತರ ದೊಪ್ಪನೆ ಬಿದ್ದ ಸದ್ದು. ಅದು ಆ ಇಬ್ಬರು ಬಿದ್ದ ಸದ್ದು ! ಆ ಎರಡು ಜೀವಗಳು ಹಾರಿದ ಸೂಚನೆ ಎಂದು ಅವನಿಗೆ ಗೊತ್ತಾಯಿತು. ಚಿನ್ ಗಾಬರಿಯಿಂದ ತನ್ನ ಜೇಬಿನಲ್ಲಿದ್ದ ನೋಟುಬುಕ್ಕಿನೊಳಗಿಂದ, ಒಂದು ಹಾಳೆ ಹರಿದು ಅದರ ಮೇಲೆ ಬೇಗ ಬೇಗ ಏನನ್ನೋ ಬರೆದನು. ಮುಂದಲ

ಗಳಿಗೆಯಲ್ಲಿಯೇ ಬರೆಯುವ ಶಕ್ತಿ ತನ್ನಿಂದ ಮಾಯವಾಗುವದೋ ಎಂಬಷ್ಟು ಆತುರದಿಂದ ಅವನು ಬರೆದನು; 'ಲಿಲ್ಲಿ! ನನ್ನ ಜೀವದೊಂದಿಗೆ ಅಂಟಿಕೊಂಡಿರು, ಲಿಲ್ಲಿ! ನನ್ನ ಜೀವದೊಂದಿಗೆ ಅಂಟಿಕೊಂಡಿರು!' ಎಂದು. ಅನಂತರ ''ದೇವರೇ! ಬಿರುಗಾಳಿಯನ್ನು ಕಳುಹಿಸಿಕೊಡು, ಅದು ಈ ಕಾಗದವನ್ನು ಲಿಲ್ಲಿ ಇರುವ ಬೀದಿಗೆ ಹಾರಿಸಿಕೊಂಡು ಹೋಗಲಿ'' ಎಂದು ಪ್ರಾರ್ಥಿಸಿದನು.

ಆದರೆ ಆ ರಾತ್ರಿಯೆಲ್ಲಾ ಗಾಳಿ ಬೀಸಲಿಲ್ಲ. ಬೆಳಗಾಯಿತು. ಸೂರ್ಯನು ಪ್ರಕಾಶಿಸಿದನು. ಹಕ್ಕಿಗಳು ಹಾಡಿದವು. ಮೊದಲದಿನದ ಕರಿಯ ಟೊಣಪ ಅವನನ್ನು ಹಿಂಸಾಗಾರಕ್ಕೆ ಕರೆದುಕೊಂಡು ಹೋಗಲು ಬಂದನು.

ಅವನನ್ನು ಕರೆದುಕೊಂಡು ಹೋಗಿ ಮತ್ತೆ ಮೊದಲ ದಿನದಂತೆ ಆ ಅಧಿಕಾರಿಯ ಎದುರಿಗೆ ಕೂರಿಸಿದನು. ಅಧಿಕಾರಿ ಚಿನ್‌ನನ್ನು ಕಂಡು ವಿಕಾರವಾಗಿ ನಕ್ಕನು. ಚಿನ್‌ಗೆ ಅವನ ವಿಕಾರವಾದ ಹಳದಿಯ ಹಲ್ಲುಗಳು ಕಂಡವು. ಅಧಿಕಾರಿಯು "ಮಗು! ಹೇಗಿತ್ತು! ಹೇಗಿತ್ತು ರಾತ್ರಿ? ಸುಖವಾಗಿತ್ತೆ? ಇಲ್ಲಿ, ನಿಮ್ಮ ಸಂಸ್ಥೆಯ ವೃತ್ತಾಂತವನೆಲ್ಲಾ ನನಗೆ ಪೂರಾ ಹೇಳಿಬಿಡು. ನಿನ್ನನ್ನು ಬಿಡುಗಡೆ ಮಾಡುತ್ತೇನೆ. ಯುವಕರಾದ ನೀವು ಒಂದೊಂದು ವೇಳೆ ಭಾವನಾಪ್ರಧಾನರೆಂಬುದು ನನಗೆ ಗೊತ್ತು! ಚಕ್ರವರ್ತಿ ಮಿಕಾಡೋವಿನ ಸಾಮ್ರಾಜ್ಯಕ್ಕೆ ಎದುರಾಗಿ ಹೋರಾಡುವುದು ನಿಮ್ಮ ಗುರಿಯಲ್ಲ ಎಂಬುದನ್ನು ನಾವು ಅರಿತಿದ್ದೇವೆ'' ಎಂದನು.

ಚಿನ್ ಆ ಕುಚೇಷ್ಟೆಯ ಪ್ರಶ್ನೆಯ ಅಧಿಕಾರಿಯನ್ನು ನೋಡಿದನು. ಬಾಗಿಲಿನಲ್ಲಿ ನಿಂತಿದ್ದ ಕರಿಯ ಕೂದಲಿನ ಟೊಣಪನನ್ನು ನೋಡಿದನು. ಅವನಿಗೆ ಸಿರುಸ್ಸಾಹವೂ, ಕೋಪವೂ, ದುಃಖವೂ ಉಂಟಾಯಿತು. ಇವೂ ಜೀವಕೋಶಗಳೇ, ಆದರೆ ವಿಧ್ವಂಸಕ ಕೋಶಗಳು ಎಂದು ಅವನು ಯೋಚಿಸಿದನು.

ಅಧಿಕಾರಿಯ ಪ್ರಶ್ನೆಗೆ ಉತ್ತರವಾಗಿ ಅವನು 'ನಾನು ದೇಶಭಕ್ತನೇನೋ ಹೌದು, ಆದರೆ ನನಗೆ ಉಳಿದ ಸಂಗತಿಗಳೇನೋ ತಿಳಿಯದು' ಎಂದನು.

ಅಧಿಕಾರಿಯು ಮತ್ತೆ " ಹಾಗಾದರೆ ನೀನು ಏನನ್ನೂ ಹೇಳುವುದಿಲ್ಲ. ನಮಗೆ ಕೈತುಂಬ ಕೆಲಸ. ನಿನ್ನನ್ನು ಹಚ್ಚಿಕೊಂಡು ಕುಳಿತಿರಲು ವಿರಾಮವಿಲ್ಲ. ಜೋಕೆ!'' ಎಂದನು.

ಚಿನ್‌ನು ''ನಾನು ಹೇಳುವುದು ಏನೂ ಇಲ್ಲ" ಎಂದನು. ಅವನಿಗೆ ತನ್ನ ಅದೃಷ್ಟ ತೀರ್ಮಾನವಾದಂತೆ ತೋರಿತು. ಒಂದು ಸಲ ಜಪಾನದ ಕೈಗೆ ಸಿಕ್ಕಿದ ಮೇಲೆ ಬಿಡುಗಡೆ ಇಲ್ಲವೆಂದು ಅವನಿಗೆ ಚೆನ್ನಾಗಿ ಗೊತ್ತಾಗಿತ್ತು. "ನನ್ನ ತಂದೆ ತನ್ನ ಬಾಳನ್ನು ಹೊಸ ಬಾಳಿಗಾಗಿ ಅಂದರೆ ಜನರ ದಬ್ಬಾಳಿಕೆಗಾಗಿ ಬಲಿಕೊಟ್ಟರು. ನಾನು ಅದನ್ನೇ ಮಾಡಬಲ್ಲೆ." ಎಂದುಕೊಂಡನು.

ಅವನ ಧ್ವನಿಯು ಹೆಚ್ಚು ದೃಢವೂ ಖಂಡಿತವೂ ಆಯಿತು; 'ನಾನು ಏನನ್ನೂ ಹೇಳಲಾರೆ' ಎಂದನು.

ಜುಜುಟ್ಸು ನಿಪುಣನು ಕೊಠಡಿಯ ಕಪಾಟಿನಲ್ಲಿದ್ದ ಉದ್ದವಾದ ಚರ್ಮದ ಚಾವಟಿಯನ್ನು ತೆಗೆದುಕೊಂಡನು. ಅದಕ್ಕೆ ಉದ್ದವಾದ ಎರಡು ನಾಲಗೆಗಳಿದ್ದವು. ಅವನು ಅದನ್ನು ಚಿನ್‌ನ ತಲೆಗೆ ಪ್ರಯೋಗಿಸಿದನು. ಅವನ ಕೈಚಳಕ ಹಾಗೆ ಇತ್ತು. ಚಿನ್ ತತ್‌ಕ್ಷಣ ಮರದ ತುಂಡಿನಂತೆ ನೆಲಕ್ಕೆ ಬಿದ್ದನು. ಅವನ ಮುಖ ಮೇಲಕ್ಕೆ ಆಯಿತು. ಪೆಟ್ಟಿನ ಅತಿಶಯದಿಂದ ಚಿನ್‌ಗೆ ತನಗಾದ ನೋವು ಸಹ ತಿಳಿಯಲಿಲ್ಲ. ಅವನು ನಿಶ್ಶಬ್ದನಾಗಿ ಬಿದ್ದಿದ್ದನು. ಟೊಣಪನು ಅವನ ಮುಖದ ಮೇಲೆ ಚರ್ಮದ ಚಾವಟಿಯಿಂದ ಒಂದೇ ಸಮನೆ ಅಸಂಖ್ಯಾತ ಹೊಡೆತಗಳನ್ನು ಬಾರಿಸಿದನು. ಚಿನ್‌ನ ಮುಖವೆಲ್ಲ ಹಳದಿ, ನೀಲಿ, ಕೆಂಪು ಬಾಸುಂಡೆ ರಕ್ತಮಯ ವಾಯಿತು.

ಅಧಿಕಾರಿಯು ಒಂದು ಸಿಗರೇಟನ್ನು ಹೊತ್ತಿಸುತ್ತ "ಇನ್ನು ಸಾಕು, ಇವನಿಂದ ಸದ್ಯಕ್ಕೆ ಪ್ರಯೋಜನವಿಲ್ಲ" ಎಂದನು.

ಚಿನ್‌ಗೆ ಅರಿವು ಬಂದು ಅವನು ನೋವಿನ ಬಾಧೆಯಿಂದ ನರಳುತ್ತ ಕಣ್ಣು ಬಿಟ್ಟು ನೋಡಿದಾಗ ಸುತ್ತಲೂ ಅವನಿಗೇನೂ ಕಾಣಲಿಲ್ಲ. ಅವನೀಗ ಮತ್ತೆ ಸೆರೆಮನೆಯ ಕೊಠಡಿಯಲ್ಲಿ! ಆಗಲೇ ಸಾಯಂಕಾಲವಾಗಿತ್ತು. ಅವನ ತಲೆ ಅತಿ ಭಾರವಾಗಿತ್ತು. ಹೊತ್ತು ಎಷ್ಟು ಎಂಬುದರ ಜ್ಞಾನವೂ ಅವನಿಗೆ ಇರಲಿಲ್ಲ. ತಲೆಯ ವೇದನೆ ಅಸಹ್ಯವಾಗಿತ್ತು. ಅಂತರಿಕ್ಷದಲ್ಲಿ ಮೋಡಗಳ ನಡುವೆ ಹಾರು ತ್ತಿರುವಂತೆ, ಪಾತಾಳ ಲೋಕದ ಉದ್ಯಾನ ವನಗಳಲ್ಲಿ ಅಲೆದಾಡುತ್ತಿರುವಂತೆ, ಮನುಷ್ಯಲೋಕವನ್ನೂ ದೇವಲೋಕವನ್ನೂ ಬೇರೆ ಮಾಡಿದ ನದಿಯಲ್ಲಿ ತೇಲಾಡು ತ್ತಿರುವಂತೆ ಅವನಿಗೆ ತೋರಿತು. ಅವನು ತನ್ನನ್ನೇ ತಾನು "ನಾನು ಸತ್ತು ಹೋದೆನೆ?" ಎಂದು ಕೇಳಿಕೊಂಡನು. ಆದರೆ ಜೀವದ ದನಿ ಏನೋ ಒಂದು ಅವನಿಗೆ ಕೇಳಿಸಿದಂತೆ ತೋರಿತು. ಅಲ್ಲಿಯ ಗೋಡೆಯ ಬಿರುಕಿನಲ್ಲಿ ಮಿಡತೆಯ ಜಿರ್‌ದನಿ ಯೊಂದು. ಹೊರಗಡೆ ಸಿಪಾಯಿಗಳ ಹೆಜ್ಜೆ ಸಪ್ಪಳ ಭಯಂಕರವಾಗಿ ಕೇಳು ತ್ತಿತ್ತು. ಹೌದು ಅದು ಸೆರೆಮನೆ. ಈ ಕೊಠಡಿಯನ್ನು ಹೊರಗಿನ ಪ್ರಪಂಚ ದೊಂದಿಗೆ ಸಂಬಂಧಿಸಿದ ಆ ಸೂರಿನ ಕಿಂಡಿ ಎಲ್ಲಿ? ಚಿನ್ ತಲೆಯೆತ್ತಿ ನೋಡಿದನು. ಮೇಲಿನ ಸಂದಿನಲ್ಲಿ ಒಂದು ಕಿರುತಾರೆ ನಗುತ್ತಿತ್ತು. ಬಾಳು! ನಾನು ಇನ್ನೂ ಬದುಕಿದ್ದೇನೆ' ಎಂದು ಅವನು ಯೋಚಿಸಿದನು. ತಾನು ಲಿಲ್ಲಿಗೆ ಬರೆದಿದ್ದ ಆ ಕಾಗದದ ಚೂರನ್ನು ಜ್ಞಾಪಿಸಿಕೊಂಡನು. "ಲಿಲ್ಲಿ ನನ್ನ ಜೀವನದೊಂದಿಗೆ ಅಂಟಿಕೋ, ನನ್ನ ಪ್ರಾಣಕ್ಕೆ ಅಂಟಿಕೋ! ಓ ಲಿಲ್ಲಿ, ನೀನು ಈ ಕೊನೆಯ ಮಾತು ಗಳನ್ನು ಓದಬೇಕು.". ಬಿರುಗಾಳಿ ಬಂದು ಈ ಕಾಗದದ ಚೂರನ್ನು ಅವಳ ಹತ್ತಿರಕ್ಕೆ ಹಾರಿಸಿಕೊಂಡು ಹೋಗಲೆಂದು ಅವನು ಮತ್ತೆ ಪ್ರಾರ್ಥಿಸಿದನು. ಆದರೆ ರಾತ್ರಿ ಯೆಲ್ಲಾ ನಿಶ್ಶಬ್ದವಾಗಿತ್ತು.

ಮೂವರು ಸಿಪಾಯಿಗಳು ಒಂದು ದೀಪದೊಂದಿಗೆ ಒಳಕ್ಕೆ ಬಂದರು. ಒಬ್ಬನು ಚಿನ್‌ಗೆ "ನಡೆ—ಪೋರಾ, ನಿನ್ನ ಕಷ್ಟವನ್ನು ಬಿಡಿಸುತ್ತೇನೆ" ಎಂದನು.

ಮುಂದೇನಾಗುವುದೆಂಬುದು ಚಿನ್‌ಗೆ ಗೊತ್ತಾಯಿತು. ಅವನು ನಗಲು ಪ್ರಯತ್ನಿಸಿ ಧೈರ್ಯವಾಗಿಯೇ ನಿಂತುಕೊಂಡನು. ಆದರೆ ಹೊರತು ಮಾಡಬಹುದಾದುದೇನೂ ಇಲ್ಲವೆಂದು ಅವನಿಗೆ ಗೊತ್ತಾಯಿತು. ಕೋಠಡಿಯನ್ನು ಬಿಟ್ಟು ಆ ಮೂವರೊಂದಿಗೆ ಹೊರ ಅಂಗಳಕ್ಕೆ ಹೋಗುತ್ತಿರುವಾಗ ಅವನು ನಿಸ್ಸಹಾಯಕನಾಗಿ ತನಗೇ ಕೇಳದಷ್ಟು ಮೆಲ್ಲನೆ 'ಅಯ್ಯೋ ಬಿರುಗಾಳಿ ಇಲ್ಲವಲ್ಲ' ಎಂದುಕೊಂಡನು !

—ಗೊರೂರು ರಾಮಸ್ವಾಮಿ ಅಯ್ಯಂಗಾರ

## ಅಭ್ಯಸನಗಳು

**ಪ್ರಶ್ನೆಗಳು:—**

೧. ಚಿನ್‌ನನ್ನು ಕೈದು ಮಾಡಲು ಕಾರಣವೇನು ?

೨. ಜಪಾನೀಯರು ಕೊಡುವ ಶಿಕ್ಷೆಯ ಮಾದರಿಗಳಾವುವು.

೩. ಚಿನ್‌ನ ತಂದೆಯು ಹಾಕಿದ ಉಜ್ವಲ ಪರಂಪರೆಯು ಯಾವುದು ?

೪. 'ಬಲಿದಾನ' ಎಂಬ ಹೆಸರಿನ ಔಚಿತ್ಯವೇನು ? ಇದರಂತೆ ಸಮರ್ಪಕವಾಗಬಹುದಾದಂಥ ಬೇರೆ ಹೆಸರನ್ನು ಹೇಳಿರಿ.

೫. ಚಿನ್‌ನು ಎಡೆಗೆಡದೆ ಕೊನೆಯವರೆಗೂ ಕಷ್ಟಸಹಿಸುವಂತೆ ಆತನಿಗೆ ಉತ್ಸಾಹವನ್ನಿತ್ತ ಸಂಗತಿಗಳಾವುವು?

**ಭಾಷಾಭ್ಯಾಸ.**

(೧) ಈ ಕೆಳಗಿನ ವಾಕ್ಯಗಳ ಸೌಂದರ್ಯವನ್ನು ವಿವರಿಸಿರಿ.

೧. ಅವನ ಹೃದಯ ತಮಟೆಯಂತೆ ಡವಡವ ಹೊಡೆದುಕೊಳ್ಳುತ್ತಿತ್ತು.

೨. ಅವನ ಹಲ್ಲುಗಳು ಕರಾಳದುಸ್ವಪ್ನಗಳಂತೆ ಕಾಣುತ್ತಿದ್ದವು.

೩. ಆ ಏಟುಗಳು ಚರ್ಚಗಂಟೆಗೆ ಸುತ್ತಿಗೆಯಿಂದ ಬಿಡುವ ಬಡಿತಗಳಂತಿದ್ದವು.

೪. ದೇವರು ತಾನು ಮಣ್ಣಿನಿಂದ ಬಹಳ ಜಾಗರೂಕತೆಯಿಂದ ಮಾಡಿದ ವಿಗ್ರಹಕ್ಕೆ ಪ್ರಾಣವನ್ನು ತುಂಬುವಷ್ಟು ಎಚ್ಚರಿಕೆಯಿಂದ ಊದಿದನು.

(೨) ಅನುಕೂಲ ಹಾಗು ಪ್ರತಿಕೂಲ ಭಾವನೆಗಳಿಗೆ ಪೋಷಕವಾಗುವಂತೆ ಈ ಕಥೆಯಲ್ಲಿ ಬಂದ ಪಾತ್ರ ಹಾಗು ಸನ್ನಿವೇಶದ ವರ್ಣನಾಶೈಲಿಯನ್ನು ನಿರೀಕ್ಷಿಸಿರಿ.

i ಚಿನ್, ಲಿಲ್ಲಿ, ಜಪಾನಿ ಅಧಿಕಾರಿ, ಮತ್ತು ಚಿನ್ನನಿಗೆ ಕೊಟ್ಟ ಪೀಡೆಗಳ ಪ್ರಕಾರಗಳು.

ii ಚಿನ್‌ನ ಮನಃಸ್ಥಿತಿಯ ವರ್ಣನೆಗಳು.

೧. 'ಸಾಯು' ಎಂಬ ಅರ್ಥವನ್ನು ಹೇಳುವ ಇತರ ಶಬ್ದಗಳನ್ನು ಕೊಡಿರಿ.

೨. ಯೌವನ, ಚಮ್ಮಟಿಕೆ, ವಿದ್ಯಾ, ಸ್ವರ್ಗ ಇವುಗಳ ತತ್ಸಮ ತದ್ಭವಗಳನ್ನು

೩. ರಾಮನ ವಿಷಯದಲ್ಲಿ ನನಗೆ ಸಹಾನುಭೂತಿಯಿದೆ. ರಾಮನಲ್ಲಿ ನನ್ನ ಪ್ರೇಮವಿದೆ. ರಾವಣನನ್ನು ಕಂಡು ಕರುಣೆಯುಂಟಾಗುತ್ತದೆ. ಇಲ್ಲಿ ಸಹಾನುಭೂತಿ, ಪ್ರೇಮ ಮತ್ತು ಕರುಣೆ ಈ ಶಬ್ದಗಳ ಅರ್ಥದಲ್ಲಿರುವ ವ್ಯತ್ಯಾಸ ವಿವರಿಸಿರಿ.

**ವಾಕ್-ಶಿಕ್ಷಣ**

ಚಿನ್ನಸಾಮಿ ಕ್ಷಮೆ ಬೇಡಿ, ಬಿಡುಗಡೆಯಾಗಿ ಬಂದನೆಂದು ಊಹಿಸಿ, ಅವನಿಗೂ ಲಿಲ್ಲಿಗೂ ಆಗುವ ವಾಗ್ವಿವಾದವನ್ನು ಅಭಿನಯಿಸಿರಿ.

**ಚರ್ಚೆ :**

ಪರಕೀಯರ ಆಕ್ರಮಣದಂತಹ ಆಘಾತಗಳಿಂದ ದೇಶದಲ್ಲಿ ನವಚೈತನ್ಯವು ಸ್ಫುರಿಸುತ್ತಿದೆ. ಆದುದರಿಂದ ಇಂತಹ ಸಂಕಟಗಳು ಉಪಕಾರಕ, ಆವಶ್ಯಕ—ಈ ಅಭಿಪ್ರಾಯದ ಯುಕ್ತಾಯುಕ್ತತೆಯನ್ನು ಚರ್ಚಿಸಿರಿ.

**ಬರೆಹ :**

I ಮೇಘದೂತ ಕಾವ್ಯದಲ್ಲಿ ಮೇಘದ ಮುಖಾಂತರ ಸಂದೇಶ ಕಳಿಸಿದ ರೀತಿಯಲ್ಲಿ ಇಲ್ಲಿ ಚಿನ್ನಸಾಮಿ ಚೀಟಿಯ ಬದಲು ಗಾಳಿಗೇ ತನ್ನ ದೂತನೆಂದು ಭಾವಿಸಿ ಲಿಲ್ಲಿಗೆ ಕಳಿಸಿದ ಸಂದೇಶವನ್ನು ವರ್ಣಿಸಿರಿ.

II ನಿಜವಾದ ಪ್ರೇಮವು ಎಂತಹ ತ್ಯಾಗಕ್ಕೂ ಉತ್ಸಾಹವನ್ನೀಯುತ್ತದೆ ಎಂಬ ಮಾತನ್ನು ಚಿನ್[illegible] ಕಥೆಯಿಂದ ಸ್ಪಷ್ಟೀಕರಿಸಿ

## ೩. ಇಜಾರ

[ಇದೊಂದು ವಿನೋದಪೂರ್ಣ ಹರಟೆ. ಹರಟೆಗೆ ಇಂತಹದೇ ವಿಷಯವಿರಬೇಕೆಂಬ ನಿಯಮವಿಲ್ಲ. ಇಜಾರದಂತಹ ಸಾಮಾನ್ಯ ಉಡುಪಿನ ಮುಖಾಂತರ ಜನಜೀವನ ರೀತಿನೀತಿಗಳನ್ನು ಲೇಖಕರು ಬಹು ಮಾರ್ಮಿಕವಾಗಿ ವಿವೇಚಿಸಿದ್ದಾರೆ.]

ಮಾನವನ ವಸ್ತ್ರದ ವೈಖರಿಯಲ್ಲಿ ಇಜಾರಿನಷ್ಟು ಸರ್ವವ್ಯಾಪಿಯಾದುದು ಬೇರೊಂದಿಲ್ಲ. ಹಿಂದುಳಿದ ಹಿಂದುಗಳೊಬ್ಬರನ್ನು ಬಿಡಿ. ಪ್ರಪಂಚದ ಉಳಿದ ಎಲ್ಲ ಜನಾಂಗಗಳಲ್ಲಿಯೂ ಮಾನವನ ಅಧೋಭಾಗವು ಇಜಾರಿನಿಂದಲೇ ಆವರಿಸಲ್ಪಡುವುದು. ಪೂರ್ವ ಕಾಲದಲ್ಲಿ ಹೀಗಿರಲಿಲ್ಲ. ಆ ಕಾಲದಲ್ಲಿ ಹೊಲಿಗೆಯ ಬಟ್ಟೆಗಳು ಕಡಿಮೆಯೇ. ಪುರಾತನ ಗ್ರೀಕರೂ, ರೋಮನರೂ ಉದ್ದವಾದ ವಸ್ತ್ರವನ್ನು ಮೈಗೆ ಸುತ್ತಿಕೊಳ್ಳುತ್ತಿದ್ದರು. ಉಷ್ಣವಲಯದಲ್ಲಿದ್ದ ಇತರ ನಾಗರಿಕ ಜನಾಂಗಗಳಂತೂ ಸಾಮಾನ್ಯವಾಗಿ ಬಟ್ಟೆಗಳಿಗೆ ಅಷ್ಟು ಮಹತ್ವವನ್ನೇ ಕೊಟ್ಟಿಲ್ಲ. (ಹೆಚ್ಚು ಬಟ್ಟೆಗಳನ್ನು ಹಾಕಿಕೊಳ್ಳುವವನೇ ಹೆಚ್ಚು ನಾಗರಿಕನೆಂಬ ಸಿದ್ಧಾಂತವು ಆ ಕಾಲದಲ್ಲಿ ರೂಢಿಯಲ್ಲಿರಲಿಲ್ಲ.) ಆದರೆ ಈ ಆಧುನಿಕ ಕಾಲದಲ್ಲಿ ಇಜಾರವನ್ನು ಧರಿಸದ ಜನಾಂಗವೇ ಇಲ್ಲ. ಅಮೇರಿಕಾದ ತಾಮ್ರವರ್ಣದ ಇಂಡಿಯನ್ನರ ಮೊದಲುಗೊಂಡು ಇಂಡಿಯಾದ ಇಂಡಿಯನ್ನರ ವರೆಗೂ ಚೀನಾದಿಂದ ಚೀಲಿದೇಶದ ವರೆಗೂ ಸರ್ವರೂ ಇಜಾರವನ್ನೇ ಉಪಯೋಗಿಸುವರು. ದಕ್ಷಿಣ ಹಿಂದುಸ್ಥಾನದ ನಿವಾಸಿಗಳು ಇದಕ್ಕೆ

ಜನರು. ನವನಾಗರಿಕತೆಯಿಂದ ಶೋಭಿಸುವ ಈ ಯುಗಕ್ಕೆ ಇಜಾರಿನ ಯುಗವೆಂದೇ ಹೇಳಬಹುದಾಗಿದೆ.

ದಕ್ಷಿಣ ದೇಶದಲ್ಲಿ ಇಜಾರಿನವರನ್ನು ಕಂಡರೆ 'ಇವನೇನು ಮುಸಲ್ಮಾನನೋ?' ಎಂದು ಕೇಳುವುದುಂಟು. ಈ ವೇಷ ಮುಸಲ್ಮಾನರ ವಸ್ತ್ರವಿಶೇಷವೆಂದು ಒಂದು ಭಾವನೆಯಿದೆ. ಆದರೆ ಇಂದಿಗೂ ಮಕ್ಕಾಪಟ್ಟಣಕ್ಕೆ ಹೋಗುವ ಮುಸಲ್ಮಾನಿ ಯಾತ್ರಿಕರು ಧರಿಸುವ ಉಡುಪು ಇಜಾರ ಅಲ್ಲ. ಕೇವಲ ಎರಡು ಲುಂಗಿ. ಆದರೂ ಮುಸಲ್ಮಾನರೇನೋ ಇಜಾರಕ್ಕೆ ಒಂದು ಪ್ರಾಶಸ್ತ್ಯವನ್ನು ಕೊಟ್ಟು ಏಶಿಯಾ ಖಂಡದಲ್ಲಿ (ಫರಂಗಿಯವರೂ, ಅವರ ಪರಿವಾರದವರೂ ಪರಿಚಾರಕರೂ ಈ ದೇಶದಲ್ಲಿ ಕಾಲಿಡುವದಕ್ಕಿಂತ ಪೂರ್ವದಲ್ಲಿ) ಇದರ ಪ್ರಚಾರವನ್ನು ನಡೆಸಿರುವದು ನಿಜ. ಇದಕ್ಕೆ ಕಾರಣವೇನೆಂದರೆ ಮಹಮ್ಮದ ಪೈಗಂಬರರ ಮತವು ಅರಬ್ಬಿ ದೇಶದಿಂದ ಅನ್ಯದೇಶಗಳಿಗೆ ವೇಗವಾಗಿ ಹರಡುವ ಪ್ರಸಂಗ ಒದಗಿದಾಗ ತೀವ್ರಗಾಮಿಗಳಾಗಿ ನುಗ್ಗಬೇಕಾಗಿದ್ದ ಜನರು ತಮ್ಮ ಗಮನಕ್ಕೆ ಅನುಕೂಲವಾಗುವದೆಂದು ಈ ಇಜಾರವನ್ನು ಮಾಡಿಕೊಂಡರು. ಹೆಚ್ಚಾದ ಬಟ್ಟೆಬರೆಗಳನ್ನು ತಲೆಗೆ ಬಿಗಿದು ಕಟ್ಟಿಕೊಂಡು ಮುಂದಕ್ಕೆ ನುಗ್ಗಿದರು. ಹಿಂದುಸ್ಥಾನದಲ್ಲಿಯೂ ಪೂರ್ವಕಾಲದಲ್ಲಿ ಉಡುವ ಪಂಜೆಯನ್ನು 'ವೀರಕಚ್ಚೆ'ಯನ್ನಾಗಿ ಮಾಡಿಕೊಂಡು ಯುದ್ಧಕ್ಕೆ ಹೋಗುತ್ತಿದ್ದರಂತೆ (ಇದಕ್ಕೆ ಈಗ 'ಸಾಯಕಲ್ ಕಚ್ಚೆ'ಯೆನ್ನುವರು.) ಹೆಚ್ಚು ಓಡಾಟ ಒದಗಿದಾಗಲೂ ಪ್ರವಾಸದಲ್ಲಿ ನಿತ್ಯವೂ ಒಗೆಯಲು ಅನುಕೂಲವಿಲ್ಲದಿರುವಾಗಲೂ, ಕುದುರೆ, ಕತ್ತೆ, ಹೇಸರಗತ್ತೆ, ಒಂಟೆ ಮುಂತಾದವುಗಳನ್ನು ಸವಾರಿ ಮಾಡುವಾಗಲೂ ಇಜಾರವೇ ಚೆನ್ನಾಗಿ ಒಗ್ಗುವದೆಂಬುದನ್ನು ಬೇರೆ ಹೇಳಬೇಕಾಗಿದ್ದಿಲ್ಲ. ನಿತ್ಯ ಒಗೆದು ಉಡುವ ಧೋತ್ರಕ್ಕೂ ಸುಮ್ಮನೆ ಝಾಡಿಸಿ ಮತ್ತೆ ಧರಿಸಬಹುದಾದ ಇಜಾರಕ್ಕೂ ಇರುವ ವ್ಯತ್ಯಾಸವು ಊರೂರಿಗೆ ಪ್ರಯಾಣ ಮಾಡಿ ಸ್ನಾನ ಪಾನಾದಿಗಳಿಗಾದರೂ ಇಷ್ಟು ನೀರು ಸಿಕ್ಕಿದರೆ ಸಾಕೆಂದು ತವಕಪಟ್ಟವರಿಗೆ ಗೊತ್ತು. ಒಟ್ಟಿನಲ್ಲಿ ನೋಡುವದಾದರೆ ವೇಗವಾಗಿ ನಡೆಸುವ ಜೀವನಕ್ಕೆ, ಚಟುವಟಿಕೆಯ ನಡವಳಿಕೆಗೆ ಇಜಾರು ಒಂದು ಚಿಹ್ನ ಮಾತ್ರವಲ್ಲ—ಆವಶ್ಯಕವಾದ ಸಾಧನೆ. ತ್ರಿಕಚ್ಚೆ, ಪಂಚಕಚ್ಚೆ, ಅಷ್ಟಕಚ್ಚೆಗಳು ಹೊಟ್ಟೆಯನ್ನು ಬೆಳೆಸಿಕೊಂಡು ಒಂದು ಕಡೆ ಕೂಡುವ ಸ್ಥಾವರ ಜೀವಿಗಳಿಗೆ ಸರಿಹೋಗಬಹುದೇ ಹೊರತು ಚೆನ್ನಾಗಿ ಕಾಲುಬೀಸಿ ಬದುಕುವವರಿಗೆ ಸಾಧ್ಯವಿಲ್ಲ.

ಚಟುವಟಿಕೆಯನ್ನು ಪ್ರೇರಿಸುವ ಶಕ್ತಿ ಇಜಾರಿನಲ್ಲಿಯೇ ಇರುವುದೋ ಅಥವಾ ಇಂತಹ ಶಕ್ತಿಯುಳ್ಳ ಮನುಷ್ಯರೇ ವಸ್ತ್ರಗಳನ್ನು ಒತ್ತಟ್ಟಿಗಿಟ್ಟು ಇಜಾರವನ್ನು ಹೊಲಿಸುವರೋ ಹೇಳುವುದು ಕಷ್ಟ. ಆದರೆ ಸದಾ ಪಂಜೆಯನುಟ್ಟು ಸಾಧು ಪುನಸ್ಥರು ಕೂಡ ಇಜಾರವನ್ನುಟ್ಟಮೇಲೆ ಅವರ ಕಾಲುಗಳಲ್ಲಿ ಕಂಡುಬರುವ ಹೊಸ ಹುರುಪನ್ನೂ ನೋಡಿದರೆ, ಈ ವೇಷದಲ್ಲಿಯೇ ಏನೋ ವಿಶೇಷ ಮಹಿಮೆ ಇದೆ ಎಂದು ಊಹಿಸಬಹುದಾಗಿದೆ. ಇಜಾರವನ್ನು ಹಾಕಿಕೊಂಡರೆ ಕಾಲುಗಳು ಸ್ವಲ್ಪವೂ

ಅಡ್ಡಿಯಿಲ್ಲದೆ ಜೋರಿನಿಂದ ಹಾಯುತ್ತವೆ. ಕಾಲಿನ ಆಟವೂ ಓಟವೂ ವೇಗಗೊಳ್ಳುತ್ತವೆ ಕಾಲಿನ ಮಾಟವೂ ಹೊರಬೀಳುತ್ತದೆ. ಪಂಚೆಯನ್ನುಟ್ಟವರು ಕೋಪ ಬಂದಾಗ ಕೈಯನ್ನು ಮಾತ್ರ ಉಪಯೋಗಿಸಬಲ್ಲರು. ಇಜಾರವನ್ನುಟ್ಟವರು ಹಾಗಲ್ಲ. ಎರಡು ಕೈಗಳ ಬಲವು ಒಂದು ಕಾಲಿನಲ್ಲಿರುವದು; ಎರಡು ಕಾಲುಗಳಿಂದ ಅವರು ದೇವತೆಗಳಂತೆ ಚತುರ್ಭುಜ ಬಲವನ್ನುಳ್ಳವರಾಗಿರುವರು. ದೇಹದ ಪೂರ್ಣ ವಿಕಾಸಕ್ಕೆ ಇಜಾರೇ ಸಾಧನೆಯಾಗಿದೆ! ಆಟಪಾಟಗಳನ್ನಾಡುವವರನ್ನು ನೋಡಿ—ಇಜಾರನ್ನೋ 'ನಿಕ್ಕರ'ನ್ನೋ ಧರಿಸುವರು. ನಿಕ್ಕರೆಂದರೇನು? ಇಜಾರಿನ ಮರಿ. ಇದಕ್ಕಾಗಿಯೇ ಪಂಚೆಯನ್ನುಡುವವರೂ ಕೂಡ ಕೆಲಸ ಬಿದ್ದಾಗ ಪಂಚೆಯನ್ನೆತ್ತಿ ಕಟ್ಟುವರು.—ಅಂದರೆ ಪಂಚೆಯನ್ನು ನಿಕ್ಕರಿನ ರೂಪಕ್ಕೆ ತರುವರು.

ಇಜಾರಿನಲ್ಲಿ ಅನೇಕ ವಿಧಗಳುಂಟು. ಎರಡು ಕಾಲುಗಳಿಗೂ ಎರಡು ಪ್ರತ್ಯೇಕವಾಗಿ ಇಳಿದು ಬಂದಿರುವುದು ಸರ್ವಸಾಮಾನ್ಯ ಲಕ್ಷಣ. ಇವುಗಳಲ್ಲಿ ಟ್ರೌಜರ್ಸ್, ಪೈಜಾಮಾ, ಪ್ಯಾಂಟ್ಸ್, ಬ್ರೀಚೆಸ್, ಸುರುವಾಲ್, ಪುರಾಣರ 'ದೊಗಳೆ'—ಇತ್ಯಾದಿಯಾಗಿ ಪಾದಪರ್ಯಂತ ಇಳಿದು ಬರುವುಗಳಲ್ಲಿ ಜಾತಿಭೇದಗಳುಂಟು. ಮೊಣಕಾಲಿಗೆ ನಿಲ್ಲುವವು ಬೇರೆ. ಅವಕ್ಕೆ ಷಾರ್ಟ್ಸ್, ನಿಕ್ಕರ್ಸ್, ಡ್ರಾಯರ್ಸ್, ಚಡ್ಡಿ, ಚೆಲ್ಲಣ - ಮುಂತಾದ ಹೆಸರುಗಳು ಬಂದಿವೆ. ಈ ಸಂಕ್ಷೇಪ ರೂಪಗಳು ಸ್ವಯಂಭೂತವಾಗಿಯೂ ಆಗಬಹುದು. ಅಂದರೆ ಹಾಗೆಯೇ ಹೊಲಿಗೆಯವರಿಂದ ನಿರ್ಮಿಸಲ್ಪಡಬಹುದು. ಅಥವಾ ಬೃಹದ್ರೂಪದಿಂದ ಕಾಲಾಂತರದಲ್ಲಿ ಕಾರಣಾಂತರಗಳಿಂದ ಜನ್ಯವಾಗಿರಬಹುದು. ಈ ಪ್ರಕರಣವನ್ನು ಇಲ್ಲಿ ಪ್ರಸ್ತಾಪಿಸಬೇಕಾಗಿಲ್ಲ.

ಇವುಗಳನ್ನು ದೇಹಕ್ಕೆ ಬಿಗಿದು ನಿಲ್ಲಿಸುವುದಕ್ಕೆ ಅನೇಕ ಸಾಧನಸಾಮಗ್ರಿಗಳಿವೆ. ಗುಂಡಿ, ಲಾಡಿ, ಹಿಂದೆ ಕಟ್ಟುವದು, ಭುಜಕ್ಕೆ ಎತ್ತಿ ನಿಲ್ಲಿಸುವದು ಈ ರೀತಿಯಾಗಿ ಉಂಟು. ಆದರೆ ಈ ಬಂಧನವಿಶೇಷಗಳು ಅಂತರ್ಗಾಮಿಗಳಾಗಿರುವುದರಿಂದ ಯಾವ ನಿರ್ದಿಷ್ಟವಾದ ನಿಯಮಕ್ಕೂ ಒಳಪಡದೆ ಸಂದರ್ಭಾನುಸಾರ, ಶಕ್ತ್ಯನುಸಾರ ಇಜಾರುಗಳ 'ಸ್ಥಿತಿ'ಯ ಕೆಲಸವು ಜರುಗುವುದು.

ಇವುಗಳಲ್ಲಿ ಟ್ರೌಜರ್ಸ್ ಎನ್ನುವುದು ಉತ್ತಮ ಕುಲಕ್ಕೆ ಸೇರಿದ್ದೆಂದು ಹೇಳಬಹುದು. (ದೇಹದ ಮಧ್ಯಭಾಗದಿಂದ ಎರಡು ಶಾಖೆಯಾಗಿ ಹೊರಡುವುದರಿಂದ ಎಲ್ಲವೂ 'ದ್ವಿಜ' ಜಾತಿಯವಾದರೂ, ಸಾಂಪ್ರದಾಯಿಕವಾಗಿ ಟ್ರೌಜರ್ಸೇ ಅಗ್ರಮರ್ಯಾದೆಗೆ ಯೋಗ್ಯವಾಗಿದೆ) ಇದರ ಉಪಯೋಗವು ಪಂಚಕಚ್ಚೆಯಂತೆಯೇ ವಿಧಾನಪೂರ್ವಕವಾಗಿದೆ. ವಿಶೇಷವಾದ ನಿಯಮವೇನೆಂದರೆ, ಕೆಳಗಿನ ಭಾಗದ ಮುಂದಿರುವ ಮಡತೆಯು ಸದಾ ಗೋಚರವಾಗಿಯೂ, ಚೂಪಾಗಿಯೂ, ಪಾದದ ಮೇಲಿನ ಭಾಗದ ಸರಿಮಧ್ಯಕ್ಕೆ ನಿಲ್ಲುವಂತೆಯೂ ಇರಬೇಕು. ಇದನ್ನು ಕಾಪಾಡಿಕೊಳ್ಳಲು ಯಂತ್ರಸಾಧನಗಳಿವೆ. ಈ ಯಂತ್ರವನ್ನು ಉಪಯೋಗಿಸಲಾಗದವರು ಬೇರೆ ಉಪಾಯಗಳನ್ನು ಮಾಡುವುದುಂಟು. ಮತ್ತು ಟ್ರೌಜರಿನ ಸುತ್ತಳತೆಯು

ವಿಷಯದಲ್ಲಿಯೂ (ಕಾಲಾನುಸಾರವಾದ) ನಿಯಮಗಳಿವೆ. ಕೆಲವು ವರ್ಷಗಳ ಹಿಂದೆ ಇಂಗ್ಲಂಡಿನಲ್ಲಿ ಒಟ್ಟಿಯ ಉತ್ಕ್ರಾಂತಿ ಹೆಚ್ಚಿದಾಗ ಈ ಸುತ್ತಳತೆಯು ಬಹಳ ಪ್ರಬಲಿಸಿತ್ತು. ಆಕ್ಸ್‌ಫರ್ಡ್ ವಾದುಯೆಂದು ಹೆಸರುಗೊಂಡು ಇದರಲ್ಲಿ ನಾಯಿಮರಿಯನ್ನೇ ಬಚ್ಚಿಟ್ಟುಕೊಳ್ಳುವಷ್ಟು ಅವಕಾಶವಿದ್ದಿತು. ಅದನ್ನು ಧರಿಸುವವರ ಕಾಲುಗಳು ಆನೆಯ ಕಾಲುಗಳೇನೋ ಎಂಬಂತೆ ತೋರುತ್ತಿದ್ದುವು. ಈಚೆಗೆ ಇದು ಸಂಕ್ಷೇಪಿಸಲ್ಪಟ್ಟಿದೆ.

ಸಮುದ್ರದ ಜಹಜುಗಳಲ್ಲಿ ಕೆಲಸ ಮಾಡುವ ನಾವಿಕರ ಇಜಾರು ಬೃಹದಾಕಾರದವು. ಕೆಳಭಾಗದಲ್ಲಿ ದೊಡ್ಡ ರುಂಡಾಕಾರವನ್ನು ತಾಳಿ, ಮಡತೆ ಎಂಬ ನಿಯಮಗಳಿಗೆ ಒಳಪಡವೆ ಕೇವಲ ಸ್ವೇಚ್ಛಾವೃತ್ತಗಳವು ಇಜಾರಿನ 'ವಿಶ್ವರೂಪ'ವನ್ನು ಕಾಣಬೇಕಾದರೆ, ಪಠಾಣರು ಧರಿಸುವ 'ಜೊಗಳೆ'ಯನ್ನು ನೋಡಬೇಕು. ದರ್ಜಿಯೋ (ಸಿಂಪಿಗ) ಒಂದು ಬಟ್ಟೆಯ ಥಾನನ್ನು ತೆಗೆದು, ನಿಂತ ಮನುಷ್ಯರಿಗೆ ಹಾಗೆಯೇ ಹೊಲಿಯುವನೆಂದೂ, ಇದು ಪ್ರಳಯಕಾಲದಲ್ಲಿ ತಾನಾಗಿಯೇ ಕುಸಿದು ಬೀಳುವುದೆಂದೂ, ಈ ಮಧ್ಯ ಪಂಚಭೂತಗಳ ವಶಕ್ಕೆ ಸಿಕ್ಕದೆ ಆ ದೇಹವನ್ನು ಬಿಟ್ಟು ಕ್ಷಣಮಾತ್ರವೂ ಅಲುಗದಿರುವದೆಂದೂ ಒಂದು ಪ್ರತೀತಿಯುಂಟು. ಪಠಾಣರು ನಡೆಯುವಾಗ ಕ್ಷೀರಾಬ್ಧಿಯ ತರಂಗಗಳನ್ನೇ ನಾವು ನೋಡುತ್ತಿರುವೆವೊ ಎನ್ನುವಷ್ಟು ಭ್ರಮೆ ಉಂಟಾಗುವುದು.

ಸಾಧಾರಣ ಜಾತಿಯ ಇಜಾರುಗಳು ಯಾವ ನಿಯಮಕ್ಕೂ ಒಳಪಟ್ಟವಲ್ಲ. ಚಪ್ಪರದವರೆಕಾಯಿಬಳ್ಳಿಯನ್ನು ಹಬ್ಬಿಸಲು ಹಾಕುವ ಹಂದರವು ಹೇಗೋ ಹಾಗೆ ಎರಡು ರುಂಡಾಕಾರದ ಭಾಗಗಳನ್ನು ಮಾಡಿ ಪೈಜಾಮಾಯೆಂದು ಧರಿಸಬಹುದು. ಉತ್ತಮ ಜಾತಿಗೆ ಸೇರಿದ ಟ್ರೌಜರ್ಸುಗಳೂ ಕೆಲವು ಕಾಲವಾದನಂತರ ಜಾತಿಭ್ರಷ್ಟವಾಗಿ ಇದೇ ದರ್ಜೆಗೆ ಬರುವವು. ಈ ಪೈಜಾಮಾಗಳು ಇಷ್ಟು ರೂಢಿಯಲ್ಲಿರುವುದಕ್ಕೆ ಕಾರಣವೇನೆಂದರೆ ಇದು ಅಗ್ಗವೂ ಅಹುದು, ಬಾಳಿಕೆಗೂ ಹೆಚ್ಚುಕಾಲವೂ ಬರುವುದು. ಸ್ವಲ್ಪ ಮಡಿಸಿದರೆ ಅಣ್ಣನದು ತಮ್ಮನಿಗಾಗಬಹುದು; ಅಜ್ಜನದು ಮೊಮ್ಮಗನಿಗಾಗಬಹುದು. ಒಂದು ಪಂಜೆಯ ಬೆಲೆಗೆ ಮೂರು ಪೈಜಾಮಗಳನ್ನು ಒದಗಿಸಿಕೊಳ್ಳಬಹುದು.

ಉತ್ತರ ಹಿಂದುಸ್ಥಾನದಲ್ಲಿ ಸುರುವಾಲೆನ್ನುವುದು ಉತ್ತಮ ವರ್ಗದ ಪೋಷಾಕು. ಇದರಲ್ಲಿ ಅಡಕವಾಗಿರುವ ಕೆಲವು ಮನುಷ್ಯರನ್ನು ಕಂಡರೆ ಅದರಲ್ಲಿ ಅವರು ಹೇಗೆ ಅವತರಿಸಿದರೆಂಬ ಪ್ರಬಲವಾದ ಶಂಕೆ ತೋರುವುದು. ಸುರುವಾಲನ್ನು ಹಾಕಿಕೊಳ್ಳುವುದೇ ಒಂದು ವಿಧವಾದ ವ್ಯಾಯಾಮ. ಹಾಗೆಯೇ ಅದರ ವಿಸರ್ಜನೆಯೂ ಇಬ್ಬರು ಮೂವರು ಸಹಕರಿಸಿ ಈ ವ್ಯಾಯಾಮವನ್ನು ಮಾಡಬೇಕಾಗುವುದು. (ಧರಿಸುವವನು ಬೃಹಚ್ಛರೀರನಾಗಿದ್ದರಂತೂ ದೇವರೇ ಗತಿ.) ಲುಂಗಿಯನ್ನು ಕ್ಷಣಮಾತ್ರದಲ್ಲಿ ಸುತ್ತಿಕೊಂಡು ಅರ್ಧಕ್ಷಣದಲ್ಲಿ ಕಳಚುವವರಿಗೆ ಈ ಮರ್ಮವು ಅಭೇದ್ಯವೇ ಸರಿ. ಇದನ್ನು ಹೋಲುವ ಐರೋಪ್ಯರ ಬ್ರೀಜೆಸ್ ಇದು

ಬಿಗಿಯಲ್ಲ. ಅಲ್ಲದೆ ಸಣ್ಣ ಶುಷ್ಕವಾದ ಕಾಲನ್ನುಳ್ಳವರು ಬ್ರೀಚೆಸ್ ಸಹಾಯದಿಂದ ಪುಷ್ಟವಾಗಿ ಕಾಣಲೂಬಹುದು. ಆದರೆ ಸುರುವಾಲುಗಳು ತೆಳ್ಳನಾದ ಬಟ್ಟೆಯಲ್ಲಿರುವುದರಿಂದ ಕಾಲಿನೊಂದಿಗೆ ತಾದಾತ್ಮ್ಯವನ್ನು ತಾಳಿ ತದ್ರೂಪವನ್ನು ನಿಷ್ಪಕ್ಷಪಾತವಾಗಿ ತೋರಿಸಿಕೊಡುವವು.

ದಕ್ಷಿಣ ಹಿಂದುಸ್ಥಾನದವರು ಮಾತ್ರವೇ ಇಜಾರಿನ ಬಲೆಗೆ ಬೀಳದ ಜನತೆ. ದೇಶದ ವಾಯುಗುಣವೂ ಮತ್ತು ಮುಸಲ್ಮಾನೀ ರಾಜ್ಯಗಳು ದಕ್ಷಿಣ ತುದಿಯವರೆಗೆ ವ್ಯಾಪಿಸದೇ ಹೋದದ್ದೂ ಇದಕ್ಕೆ ಕಾರಣ. ಆದರೆ ಇತ್ತೀಚೆಗೆ ಇಜಾರಿನ ವ್ಯಾಪ್ತಿಯು ಇಲ್ಲಿಯೂ ಕಂಡುಬರುತ್ತಿರುವುದು. ಇದು ಖರ್ಚಿಲ್ಲದ ವಿಷಯವೆಂದು ಜನತೆಗೆ ಚೆನ್ನಾಗಿ ಮನವರಿಕೆಯಾಗಿರಲಿಲ್ಲ. ಈ ಅಂಶವು ಚೆನ್ನಾಗಿ ಪ್ರಚಾರವಾದಲ್ಲಿ ದಾಕ್ಷಿಣಾತ್ಯರೂ ನಿರ್ದಾಕ್ಷಿಣ್ಯರಾಗಿ ಇದನ್ನು ಕೈಕೊಳ್ಳ(ಕಾಲುಕೊಳ್ಳ)ಬಹುದು.

— ಕೆ. ಸಂಪದ್ಗಿರಿರಾಯರು

## ಅಭ್ಯಸನಗಳು:

**ಪ್ರಶ್ನೆಗಳು:—**

೧. ಇಜಾರುಗಳು ಪ್ರಚಾರದಲ್ಲಿ ಬಂದ ಕಾರಣಗಳೇನು ?

೨. ಇಜಾರಿನ ಪರ್ಯಾಯಗಳನ್ನು ಹೇಳಿರಿ.

೩. i ಒಟ್ಟಿನಲ್ಲಿ ನೋಡುವುದಾದರೆ .. ..........ಬದುಕುವವರಿಗೆ ಇದು ಆವಶ್ಯಕವಾದ ಸಾಧನ . . ... ...

ii ದಕ್ಷಿಣ ಹಿಂದುಸ್ಥಾನದವರು ಮಾತ್ರ ಇಜಾರಿನ ಬಲೆಗೆ ಬೀಳದ ಜನತೆ.

ತಮ್ಮ ಅಭಿಪ್ರಾಯವನ್ನು ಸೂಚಿಸುವ ಇಂತಹ ಬೇರೆ ಬೇರೆ ವಾಕ್ಯಗಳಿಂದ ಲೇಖಕರ ಒಲವು ಎತ್ತಕಡೆಗೆ ಇದೆಯೆಂದು ನಿಮಗೆ ಎನಿಸುತ್ತದೆ?

೪. 'ಇಂಡಿಯನ್' ಎಂದು ಅಮೇರಿಕೆಯ (ತಾಮ್ರವರ್ಣದ)ವರಿಗೂ ನಾಮಾಭಿಧಾನವು ಏಕೆ ಬಂದಿತು"

೫. ಈ ಯುಗಕ್ಕೆ 'ಇಜಾರಿನ ಯುಗ' ಎನ್ನಬಹುದಾದಂತೆ, ಇನ್ನೂ ಬೇರೆ ಬೇರೆ ವಿಧದಿಂದಲೂ ಇಂತಹ ಯುಗವೆಂದು ಕರೆಯಬಹುದಲ್ಲವೇ ? ಅಂತಹ ಕೆಲವು ಹೆಸರುಗಳನ್ನು ಸೂಚಿಸಿ ಕಾರಣಗಳನ್ನು ಹೇಳಿರಿ.

**ಭಾಷಾಭ್ಯಾಸ:—**

೧. ರೂಢ ಶಬ್ದಗಳನ್ನೇ ಸ್ವಲ್ಪ ಬೇರೆ ಸಂದರ್ಭಗಳಲ್ಲಿ ಬಳಸುತ್ತಲೆ ವಿನೋದವು ನಿರ್ಮಾಣವಾಗುವ ಶೈಲಿಯ ಬಗೆಯನ್ನು ಇಲ್ಲಿ ನಿರೀಕ್ಷಿಸಿರಿ.

i 'ಅವುಗಳಲ್ಲಿ ಜಾತಿಭೇದಗಳುಂಟು.'

ii ಎಲ್ಲವು 'ದ್ವಿಜ' ಜಾತಿಯವಾದರೂ ಸಾಂಪ್ರದಾಯಿಕವಾಗಿ ಬ್ರೀಚಸ್ ಅಗ್ರಮರ್ಯಾದೆಗೆ ಯೋಗ್ಯ.

iii ಇಜಾರಿನ 'ವಿಶ್ವರೂಪ'

೨. ದಕ್ಷಿಣ ಹಿಂದುಸ್ಥಾನದ ನಿವಾಸಿಗಳು ಇದಕ್ಕೆ ಅಪವಾದವೆನ್ನಬಹುದು. ಆದರೆ ಇನ್ನೆಷ್ಟೋ ಅಪವಾದಗಳನ್ನು ಹೊತ್ತಿರುವ ಜನ ಇವರು.

ಈ ವಾಕ್ಯದಲ್ಲಿ ವಿನೋದವುಂಟಾಗುವ ಕಾರಣವೇನು?

೩. 'ಉತ್ತರ-ಕುಮಾರ' ಎಂಬ ಮಾತನ್ನು ಬಳಸಿ 'ದಕ್ಷಿಣಾತ್ಯರು ಆರಂಭಶೂರರು' ಎಂಬ ಹೇಳಿಕೆಯನ್ನು ಪ್ರತಿಭಟಿಸುವಲ್ಲಿ ನಗೆಯುಂಟಾಗುವ ಕಾರಣವೇನು?

೪. ಜನರ ನಡೆನುಡಿಗಳ 'ಅಳತೆಗೋಲಾಗಿರುವ' ಪೌರಾಣಿಕ ಹಾಗೂ ಐತಿಹಾಸಿಕ ಐದು ವ್ಯಕ್ತಿಗಳನ್ನು ಹೇಳಿ ಅವುಗಳಿಂದ ಯಾವ ಬಗೆಯ ಸ್ವಭಾವವಿಶೇಷಗಳು ತಿಳಿದು ಬರುವುವು ಎಂಬುದನ್ನು ವಿವರಿಸಿರಿ

**ಶಬ್ದ ವಿಚಾರ:—**

ಶಬ್ದಗಳಿಂದ ಅದರ ಅರ್ಥವಲ್ಲದೆ ಇನ್ನೂ ಕೆಲವು ಹೆಚ್ಚಿನ ಸಂಗತಿಗಳು ತಿಳಿಯ ಬಲ್ಲವು. ಅವನ್ನು ಅರಿತುಕೊಂಡಷ್ಟು ತಿಳುವಳಿಕೆಯು ಬೆಳೆಯುವುದು ಉದಾ:

೧. i ಧೋತ್ರ ಧೌತವಸ್ತ್ರ' ಎಂಬ ಮೂಲಪದದ ಸಂಕ್ಷಿಪ್ತ ರೂಪ. ಇದರಿಂದ ಈ ವಸ್ತ್ರವು ಮೊದಲು ಬಳಕೆಗೆ ಎಂತು ಬಂದಿತು ಎಂಬುದು ತಿಳಿಯುವುದು,

ii ಧೋತ್ರ ಶಬ್ದವು ಸುಮಾರು ೧೩ನೆಯ ಶತಮಾನಕ್ಕೆ ಹಿಂದಿನ ಕನ್ನಡ ಸಾಹಿತ್ಯದಲ್ಲಿ ಸಿಕ್ಕುವುದಿಲ್ಲ.

iii ಭಾಷೆಯಲ್ಲಿರುವ ಪರಕೀಯ ಶಬ್ದಗಳಿಂದ ಯಾವ ಯಾವ ಜನಾಂಗದ ಪ್ರಭಾವಕ್ಕೆ ತನ್ನ ಭಾಷೆಯು ಒಳಗಾಗಿದ್ದಿತು, ಅಥವಾ ಯಾರಾರೊಡನೆ ಒಳಕೆಯಿದ್ದಿತು ಎಂಬುದು ತಿಳಿದುಬರುತ್ತದೆ ಇಜಾರ-ಪ್ಯಾಂಟಗಳು ಮುಸಲ್ಮಾನಿ, ಇಂಗ್ಲಿಷ ಜನಗಳ ಸಂಪರ್ಕದ ಸೂಚಕಗಳಾಗಿವೆ.

೨. ಜಹಜು, ಡೋಣಿ, ನೌಕೆ, ನಾವೆ, ಹರಗೋಲು, ಕೊಪ್ಪರಿಗೆ. ಹಡಗ, ತೆಪ್ಪ ಈ ಶಬ್ದಗಳನ್ನು ಉಚಿತರೀತಿಯಲ್ಲಿ ಬಳಸಿ ಒಂದೊಂದು ವಾಕ್ಯ ಬರೆಯಿರಿ.

**ವಾಕ್-ಶಿಕ್ಷಣ:—**

೧. ಓದಿರಿ, ನಿರೀಕ್ಷಿಸಿರಿ:

i 'Indian Costume' ಎಂಬ ಗ್ರಂಥದಲ್ಲಿ ಪುರಾತನಕಾಲದಿಂದ ಇಂದಿನ ವರೆಗೆ ನಮ್ಮ ಉಡುಪುಗಳಲ್ಲಾದ ಮಾರ್ಪಾಟಗಳನ್ನು ಸಚಿತ್ರವಾಗಿ ವಿವರಿಸಲಾಗಿದೆ. ಕೇವಲ ಚಿತ್ರಗಳಿಂದಲೂ ಕಳೆದ ೨೦೦೦ ವರುಷಗಳಲ್ಲಿ ನಮ್ಮ ಬಟ್ಟೆಗಳಲ್ಲಿ ಆಗಿರುವ ಬದಲಾವಣೆಗಳು ನಮ್ಮ ಕಣ್ಣೆದುರು ನಿಲ್ಲುವವು.

ii ಪ್ರಾಚೀನ ಮೂರ್ತಿ ಮತ್ತು ಚಿತ್ರಗಳನ್ನು ನೋಡುವ ಸಂಧಿಯು ದೊರೆತಾಗೆಲ್ಲ ಅಲ್ಲಿ ಚಿತ್ರಿತವಾದ ಬಟ್ಟೆಗಳ ಪ್ರಕಾರಗಳನ್ನು ನಿರೀಕ್ಷಿಸಿರಿ. ಅಜಂತಾ, ಎಲ್ಲೂರ, ಬಾದಾಮಿ ಮತ್ತು ಹಳೇಬೀಡಿನ ಚಿತ್ರಮೂರ್ತಿಗಳನ್ನು ಈ ಬಗೆಯಾಗಿ ಅಭ್ಯಸಿಸ ಬಹುದು.

iii ವಿಜಯನಗರದ ಚಿತ್ರಗಳಲ್ಲಿ ಹೆಣ್ಣುಮಕ್ಕಳು ನತ್ತು ಇಟ್ಟುಕೊಂಡಿರುವುದು ಕಂಡುಬರುತ್ತದೆ. ೧೦-೧೨ ನೆಯ ಶತಮಾನಕ್ಕೆ ಮೊದಲು ಮೂಗಿನ ಅಲಂಕಾರ ವನ್ನಿಟ್ಟುಕೊಂಡಂಥ ಚಿತ್ರ ಅಥವಾ ಮೂರ್ತಿಗಳು ದೊರೆಯುವುದಿಲ್ಲ.

ಇಂತಹ ಸೂಕ್ಷ್ಮ ನಿರೀಕ್ಷಣದಿಂದ ನಮ್ಮ ವಸ್ತ್ರಾಲಂಕಾರಗಳ ರೂಢಿ ಸಂಪ್ರದಾಯಗಳು ಕಾಲಕಾಲಕ್ಕೆ ಹೇಗೆ ಬದಲಾದುವೆಂಬುದರ ಇತಿಹಾಸವು ಗೊತ್ತಾಗಿ ವೃಥಾಭಿಮಾನವು ಅಳಿಯುವುದು.

ಹಳೆಯ ಪದ್ಧತಿಯ ವಸ್ತ್ರಾಲಂಕಾರಗಳ ಪಕ್ಷವನ್ನು ವಹಿಸಿ, ಅದರ ಅನುಕೂಲತೆ, ಸೊಗಸು ಎತ್ತಿ ಹೇಳಬೇಕು. ಇನ್ನೊಂದು ಗುಂಪಿನವರು ಆ ಮಾತುಗಳನ್ನು ಅಲ್ಲಗಳೆದು ಅದರ ಬದಲು ಇಂದಿನ ರೀತಿಗಳು ಲೇಸೆಂದು ಪ್ರತಿಪಾದಿಸಬೇಕು. ಇದರಲ್ಲಿ ಎರಡೂ ಪಕ್ಷದ ವಿದ್ಯಾರ್ಥಿನಿಯರು ಹೆಣ್ಣುಮಕ್ಕಳ ವಸ್ತ್ರಾಲಂಕಾರ, ಜಡೆ ಹಾಕಿಕೊಳ್ಳುವರೀತಿಗಳನ್ನು ಕುರಿತು ಮಾತನಾಡಬೇಕು.

೨. "ಸೂಚಿಯ ಶೋಧವಾಗಿ ಮಾನವರ ನೈಸರ್ಗಿಕ ಶರೀರ ಸೌಷ್ಠವವು ಮರೆ ಮಾಚಿತು. ಗಾಳಿಬೆಳಕಿಗೆ ಎರವಾಗಬೇಕಾದುದರಿಂದ ಆರೋಗ್ಯವು ಕುಂದಿತು." ಎಂಬ ಅಭಿಪ್ರಾಯವನ್ನು ಚರ್ಚಿಸಿರಿ.

**ಬರೆಹ:—**

೧. ಪಂಜಾಬ, ಬಂಗಾಳ, ಕರ್ನಾಟಕ ಮತ್ತು ತಮಿಳ ದೇಶದ ಉಡುಪುಗಳನ್ನು ಕುರಿತು ವಿನೋದ ಪ್ರಬಂಧ ಬರೆಯಿರಿ.

೨. ನಮ್ಮ ರಾಷ್ಟ್ರೀಯ ಉಡುಪು ಇರಬೇಕೆ? ಇದ್ದರೆ ಎಂತಹದಿರಬೇಕು? ಬರೆದು ತೋರಿಸಿರಿ.

# ೪. ಹನಿಗಳು

## ೧. ಸರಿ ಮತ್ತೆ !

[ಇಬ್ಬರಲ್ಲಿಯೂ ಪರಸ್ಪರರ ವಿಷಯಕ್ಕೆ ಸ್ನೇಹಭಾವವಿದ್ದರೂ ನಿಷ್ಕಾರಣವಾಗಿ ತಪ್ಪು ತಿಳುವಳಿಕೆಗಳು ತಲೆದೋರಿ ಗೆಳೆತನದಲ್ಲಿ ಹೇಗೆ ಅಡೆತಡೆಗಳು ಉಂಟಾಗುತ್ತವೆ ಎಂಬುದನ್ನು ಸೂಚಿಸುವ ಒಂದು ಹನಿ.]

ದಾದಾ ಪಾಪರನೂ ಶ್ರೀನಾಥನೂ ಕಾಲೇಜಿನಲ್ಲಿ ಓದುತ್ತಿರುವಾಗ ಇಬ್ಬರ ಹೃದಯಗಳೂ ಹೆಣೆದುಕೊಂಡವು. ಕಾಲೇಜಿನ ವಿದ್ಯಾಭ್ಯಾಸವು ಮುಗಿದ ಮೇಲೆ ಪಾಪರನು ಮಲಯ ದ್ವೀಪದಲ್ಲಿ "ಇಸ್ಟೇಟ ಏಜೆಂಟ" ಆಗಿ ತಿಂಗಳಿಗೆ ನಾನೂರು ರೂಪಾಯಿ ಸಂಬಳದ ಮೇಲೆ ಹೋದ. ಶ್ರೀನಾಥನು ಮೈಸೂರಿನಲ್ಲಿ ತಿಂಗಳಿಗೆ ನಾಲ್ವತ್ತು ರೂಪಾಯಿನ ಗುಮಾಸ್ತನಾದ.

ಇದಾದ ಎಂಟು ವರುಷಗಳ ಮೇಲೆ ಪಾಪರನು ಮತ್ತೆ ಕಾರ್ಯಾರ್ಥವಾಗಿ ಮೈಸೂರಿಗೆ ಬಂದ. ಎಂಟು ವರುಷಗಳಿಂ. ಸ್ನೇಹಿತರು ಒಬ್ಬರನ್ನೊಬ್ಬರು ಕಾಣ ದಿದ್ದರೂ ಪತ್ರವ್ಯವಹಾರವಿಟ್ಟಿದ್ದರು. ದಾದಾ ಪಾಪರನು ಮೈಸೂರಿಗೆ ಬಂದ ಸುದ್ದಿ ಶ್ರೀನಾಥನಿಗೆ ತಿಳಿಯಿತು. ಆದಿತ್ಯವಾರ ಬೆಳಿಗೆ ಎಂಟೂವರೆ ಗಂಟೆಗೆ ಪಾಪರನನ್ನು ಕಾಣಲು ಹೋಗಬೇಕೆಂದು ಶ್ರೀನಾಥನೂ, ಶ್ರೀನಾಥನನ್ನು ಕಾಣಲು

ಈ ಸಮಾಗಮಕ್ಕೆ ಅವರಿಬ್ಬರ ಸಂಭ್ರಮವಷ್ಟಿಷ್ಟಲ್ಲ!

ಶ್ರೀನಾಥನು "ಪಾಪರನಂತಹ ದೊಡ್ಡ ಮನುಷ್ಯನನ್ನು ಕಾಣಲು ಹೋಗುವಾಗ—ಸ್ನೇಹಿತನಾದರೇನಂತೆ—ಹರಿದ ಪಂಚೆ ಹರಿದ ಷರಟು ಹಾಕಿಕೊಂಡು ಹೋದರೆ ಚೆನ್ನಾಗಿರುತ್ತದೆಯೆ!" ಎಂದು ಅಸಾಧ್ಯ ಪ್ರಯತ್ನಮಾಡಿ ಎಂಟು ಹತ್ತು ಮಂದಿಯಲ್ಲಿ ತಿರುಪೆ ಬೇಡಿ ಎರವಾಗಿ ಕೆಲವು ವಸ್ತುಗಳನ್ನು ಉಡಲೂ ತೊಡಲೂ ತಂದ.

ಪಾಪರನು "ಪಾಪ! ಶ್ರೀನಾಥನು ತೀರ ಬಡವ. ಅವನ ಕಡೆ ಹೋಗುವಾಗ ನಾನು ಈ ಭಾರಿ ಬಟ್ಟೆಗಳನ್ನು ಹಾಕಿದರೆ ಅವನನ್ನು ಹಂಗಿಸಿದ ಹಾಗಾಗುತ್ತದೆ" ಎಂದು ಕೆಲವು ಬಟ್ಟೆಗಳನ್ನು ಹೊಸದಾಗಿ ಮಿಲ್ಸ್ ಬಟ್ಟೆಯಲ್ಲಿ ಹೊಲಿಯಿಸಿದ.

ಆದಿತ್ಯವಾರ ಬೆಳಿಗ್ಗೆ! ಶ್ರೀನಾಥನ ಅವಾಂತರವೋ ಅವಾಂತರ! ಗರಿಹಿಡಿದು ಬಿಗಿದುಟ್ಟ ಜರತಾರಿ ಅಂಚಿನ ಪಂಚೆ...ಸಿಲ್ಕ್ ಷರಟು...ಬ್ಲೇಸರ್ ಕೋಟು... ಕೋರಾ ಪೇಟ... ಕಾಲಿಗೆ ಬೂಟ್ಸು... ಎದೆ ಮೇಲೆ ಗಡಿಯಾರದ ಚಿನ್ನದ ಸರಪಣಿ.... ಸಾಲದುದಕ್ಕೆ ಏರಿ ಹೋಗಲು ಒಂದು ಟಾಂಗಾ! ಪಾಪರನು ತಾನು ಹೊಲಿಸಿದ್ದ ಮಿಲ್ಸ್ ಬಟ್ಟೆಗಳನ್ನು ಹಾಕಿಕೊಂಡು ನಡಿಗೆಯಲ್ಲಿ ಹೊರಟ.

ಚೌಕದಲ್ಲಿ ಸ್ನೇಹಿತರಿಬ್ಬರೂ ಕಲೆತಾಗ ಶ್ರೀನಾಥನೇ ಮುಂಚೆ ಪಾಪರನನ್ನು ಗುರುತಿಸಿದನು. ಇಬ್ಬರೂ ಕೈಕುಲಕಿ ಒಬ್ಬರನ್ನೊಬ್ಬರು ರೆಪ್ಪೆಹುಯ್ಯದೆ ನಖಶಿಖಾಂತವಾಗಿ ನೋಡಿದರು.

"ಅಲ್ಲ! ಬರುವ ನಾಲ್ವತ್ತು ರೂಪಾಯಿಗಳಲ್ಲಿ ಈ ಜರತಾರಿ ಜರುಬು ಮಾಡುತ್ತಿದ್ದರೆ ಇವನಿಗೆ ಬಡತನ ಹೇಗೆ ಬಿಡುತ್ತದೆ? ಸರಿ ಮತ್ತೆ!" ಎಂದು ಪಾಪರನು ತನ್ನಲ್ಲಿಯೇ ತಾನೆಂದುಕೊಂಡ.

ಮೂತ್ರದಲ್ಲಿ ಮೀನು ಹಿಡಿಯುವ ಮನುಷ್ಯ ಇವನು! ನಾನು ಹತ್ತು ತಿಂಗಳು ಸಂಪಾದಿಸುವುದನ್ನು ಇವನು ಒಂದು ತಿಂಗಳಿಗೇ ಗಿಟ್ಟಿಸುತ್ತಾನೆ. ಆದರೂ ಇವನು ಹಾಕಿರುವ ಬಟ್ಟೆ ನೋಡು! ಹೀಗೆ ಜಿಪುಣತನ ಮಾಡದಿದ್ದರೆ ಹೇಗೆ ದುಡ್ಡು ಕೂಡಿ ಹಾಕುತ್ತಿದ್ದನೆ ಇವನು! ಸರಿ ಮತ್ತೆ!" ಎಂದು ಶ್ರೀನಾಥನೂ ಮನಸ್ಸಿನಲ್ಲಿಯೇ ಅಂದುಕೊಂಡ.

ಒಬ್ಬರನ್ನೊಬ್ಬರು ಚೆನ್ನಾಗಿ ಅರ್ಥಮಾಡಿಕೊಂಡರು!

—ಜಿ. ಪಿ. ರಾಜರತ್ನಂ

(ಹಣಿಗಳು ಎಂಬ ಸಂಗ್ರಹದಿಂದ)

## ೨. ಹುಚ್ಚು ಹುಡುಗ

[ ಸಮಸ್ಯಾತ್ಮಕವಾದ ಒಂದು ಹನಿ. ಇದರೊಳಗಿನ ಸೂಕ್ಷ್ಮ ವಿನೋದವು ಮಾರ್ಮಿಕವಾಗಿದೆ. ಪ್ರತಿಯೊಬ್ಬನೂ ತಾನು ಜಾಣ, ಇನ್ನೊಬ್ಬನು ಹುಚ್ಚ ಎಂಬುದು ವಾಡಿಕೆ. ಆದರದೆ

ಒಮ್ಮೆ ಹುಚ್ಚರ ಆಸ್ಪತ್ರೆಯೊಂದರ ಕೈತೋಟದಲ್ಲಿ ಒಬ್ಬ ತರುಣನನ್ನು ನೋಡಿದೆ. ಅವನ ಮುಖವು ಕಳೆಗುಂದಿದುದಾಗಿದ್ದರೂ ಮತ್ತೆ ಮತ್ತೆ ನೋಡಬೇಕೆಂಬ ಕುತೂಹಲವನ್ನುಂಟುಮಾಡುವಂತಹದಾಗಿತ್ತು. ನಾನು ಅವನ ಬಳಿಯಲ್ಲಿಯೇ ಬೆಂಚಿನ ಮೇಲೆ ಕುಳಿತು "ನೀನೇತಕ್ಕಯ್ಯಾ ಇಲ್ಲಿ?" ಎಂದು ಕೇಳಿದೆ.

ಅವನು ಬೆರಗುಗಣ್ಣುಗಳಿಂದ ನನ್ನನ್ನು ನೋಡಿದ. ಮಾತನಾಡಲು ತೊಡಗಿದ. "ಎಂತಹ ಮಾತನ್ನು ಕೇಳುತ್ತಿದ್ದೀರಿ ನೀವು? ಹೀಗೆ ಯಾರೂ ಕೇಳುತ್ತಿರುವುದಿಲ್ಲ. ಆದರೂ ತಮ್ಮ ಪ್ರಶ್ನೆಗೆ ನಾನು ಉತ್ತರವನ್ನು ಕೊಡುತ್ತೇನೆ. ಇಲ್ಲಿ ಕೇಳಿ' ನನ್ನ ತಂದೆಯ ಇಚ್ಛೆಯೆಂದರೆ ನಾನು ಸಂಪೂರ್ಣವಾಗಿ ತನ್ನಂತಾಗಬೇಕೆಂದು; ನನ್ನ ಚಿಕ್ಕಪ್ಪನ ಬಯಕೆಯೇನೆಂದರೆ ನನ್ನನ್ನು ತನ್ನಂತೆಯೇ ಪಳಗಿಸಬೇಕೆಂದು; ಹೆಸರು ಗಳಿಸಿ ತನ್ನ ತಂದೆಯ ಪಡಿಯಚ್ಚು ನಾನಾಗಬೇಕೆಂದು ನನ್ನ ತಾಯಿಯ ಪ್ರಯತ್ನ. "ನೋಡು, ನಾವಿಕ ಕರ್ಮವನ್ನು ಮಾಡುವ ನನ್ನ ಗಂಡನನ್ನು ನೋಡು!...... ಹೇಗೆ ಹಗಲಿರುಳೂ ಕಡಲಪಯಣ ಮಾಡುತ್ತಿರುತ್ತಾನೆ. ಅವನಂತೆಯೆ ನೀನೂ ಏತಕ್ಕೆ ಆಗಬಾರದು?" ಎಂದು ನನ್ನ ಅಕ್ಕನ ಉಪದೇಶ. ಇನ್ನು ನಮ್ಮ ಅಣ್ಣನ ಅಪೇಕ್ಷೆಯೆಂದರೆ ಆತನಂತೆಯೆ ನಾನೂ 'ಗರಡಿಯಾಳು' ಆಗಬೇಕೆಂದು.

ಹೀಗೆಯೆ ನನ್ನ ಶಿಕ್ಷಕರು, ಸಂಗೀತಾಚಾರ್ಯರು, ಶಾಸ್ತ್ರಿಗಳು, ತರ್ಕತೀರ್ಥರು, ವ್ಯಾಕರಣತೀರ್ಥರು, ವೇದಾಂತಶಿರೋಮಣಿಗಳು, ಇವರೆಲ್ಲರೂ ನನ್ನನ್ನು ತಮ್ಮ ತಮ್ಮ ಪ್ರತಿಬಿಂಬವನ್ನಾಗಿಸಬೇಕೆಂದು ಸೊಂಟ ಬಿಗಿದೇ ಹೊರಟಿದ್ದರು.

ಕೊನೆಗೆ ನಾನು ಇಲ್ಲಿಗೆ ಬಂದೆ! ಇಲ್ಲಿ ಮಾತ್ರ ಸ್ವಲ್ಪ ಜಾಣತನಕ್ಕೆ ಆಸ್ಪದವಿದ್ದಂತೆ ಎನಿಸುತ್ತದೆ. ಏತಕ್ಕೆಂದರೆ ಇಲ್ಲಿ ಕನಿಷ್ಠ ಪಕ್ಷ ನಾನು ನಾನೇ ಆಗಿ ಉಳಿಯುಲಿಕ್ಕೆ ಬರುವಂತಿದೆ ನನಗೆ."

ಇಷ್ಟು ಮಾತನಾಡಿ ತರುಣನು ಸುಮ್ಮನಾದನು; ಹಠಾತ್ತಾಗಿ ನನ್ನ ಕಡೆಗೆ ಹೊರಳಿ ಕೇಳಿದನು. "ನಾನೊಂದು ಮಾತನ್ನು ಕೇಳಲೆ? ತಾವು ಇಲ್ಲಿಗೆ ಬಂದುದಕ್ಕೆ ಕಾರಣವೇನು? ಶಿಕ್ಷಣವೋ? ಹಿತಚಿಂತಕರ ಉಪದೇಶವೋ?"

"ನಾನು ಬಂದುದಕ್ಕೆ ಇನ್ನಾವ ಕಾರಣವೂ ಇಲ್ಲ. ಬರೀ ಇವನ್ನು ನೋಡಿ ಹೋಗುವುದಕ್ಕೆಂದು ಬಂದಿದ್ದೇನೆ" ಎಂದು ನಾನು ಹೇಳಿದೆ.

ಬಳಿಕ ತರುಣನು ಮಾತನಾಡಿದ.

ಓಹೋ! ಹೀಗೆಯೇನು? ಸರಿ ಸರಿ! ಈ ಗೋಡೆಯಿಂದಾಚೆಗಿರುವ ಹುಚ್ಚರ ಆಸ್ಪತ್ರೆಯಲ್ಲಿ ಇರುವವರೆಂದು ಕಾಣುತ್ತದೆ ನೀವು!"

--ಖಲೀಲ ಗಿಬ್ರಾನ್

## ಅಭ್ಯಾಸಗಳು

**ಪ್ರಶ್ನೆಗಳು:—**

ಎಳೆತನದ ಗೆಳೆತನದಲ್ಲಿ ಮುಂದಿನ ಕಾಲದ ಸ್ನೇಹಕ್ಕಿಂತ ಹೆಚ್ಚು ಆಕರ್ಷಣವು ಇರುವ ಕಾರಣವೇನು?

೨. ಗೆಳೆಯರಿಬ್ಬರಲ್ಲಿ ತಪ್ಪು ತಿಳುವಳಿಕೆಯು ಬೆಳೆಯಲು ಕಾರಣವೇನು?

**ಭಾಷಾಭ್ಯಾಸ:—**

೧. ಹನಿಯಲ್ಲಿ ಸಂಕ್ಷೇಪಕ್ಕೆ ಮಹತ್ವವು ಹೆಚ್ಚು.

'ಈ ಸಮಾಗಮಕ್ಕೆ ಅವರಿಬ್ಬರ ಸಂಭ್ರಮವು ಅಷ್ಟಿಷ್ಟಲ್ಲ'

ಈ ಒಂದೇ ವಾಕ್ಯದಲ್ಲಿ ಅವರ ಮನಸ್ಸಿನ ಸ್ಥಿತಿಯನ್ನು ಸೂಚಿಸಿದ್ದಾರೆ. ನೀವು ಅವರಲ್ಲಿ ಪ್ರತಿಯೊಬ್ಬರಲ್ಲೂ ಅವರ ಚಿಕ್ಕಂದಿನ ಗೆಳೆತನದ ಕೆಲವು ಸವಿನೆನಪುಗಳು ಒಬ್ಬರೊಬ್ಬರನ್ನು ಭೆಟ್ಟಿಯಾಗುವ ಉತ್ಸಾಹವನ್ನು ಹೇಗೆ ಹೆಚ್ಚಿಸುತ್ತಿದ್ದವೆಂಬುದನ್ನು ವಿಸ್ತರಿಸಿ ಬರೆಯಿರಿ.

೨. 'ಸರಿ ಮತ್ತೆ' ಎಂದು ಕಥೆಯಲ್ಲಿ ಎರಡು ಬಾರಿ ಬಂದ ಮಾತು ಪ್ರತಿಯೊಂದು ಸಂದರ್ಭದಲ್ಲಿಯೂ ಒಂದೊಂದು ಬೇರೆ ಅರ್ಥವನ್ನು ಧ್ವನಿತ ಮಾಡುವುದು. ಅದನ್ನು ವಿವರಿಸಿ ಹೇಳಿರಿ.

ಆಡಿದ ಅಥವಾ ಬರೆದ ಮಾತುಗಳಿಗೆ ಸಾಮಾನ್ಯವಾಗಿ ಇರುವ ಅರ್ಥವಲ್ಲದೆ ಅದರೊಳಗಿಂದ ಇನ್ನೂ ಹೆಚ್ಚಿನ ಅರ್ಥವು ಹೊರಹೊಮ್ಮುವಂತೆ ಮಾಡುವಲ್ಲಿಯು ಬರೆಹಗಾರನ ಚಾತುರ್ಯವು ಕಂಡುಬರುತ್ತಿರುತ್ತದೆ. ಹೂವಿನ ನರುಗಂಪು ಮನಸ್ಸಿನ ಅನುಭವಕ್ಕೆ ಮಾತ್ರ ಬರುವಂತೆ ಶ್ರೇಷ್ಠ ಕಲಾವಿದರ ಕೃತಿಯಲ್ಲಿ ಹೊರಹೊಮ್ಮುವ ಇಂತಹ ಹೆಚ್ಚಿನ ಅರ್ಥಕ್ಕೆ ವ್ಯಂಗ್ಯ ಅಥವಾ ಧ್ವನಿ ಎಂದು ಹೇಳುವುದುಂಟು.

**ಶಬ್ದ ವಿಚಾರ:—**

೧. ಕೈಗಡ, ಸಾಲ, ಎರವಲು ಈ ಶಬ್ದಗಳನ್ನು ಬಳಸಿ ಅರ್ಥಭೇದ ಸೂಚಿಸುವ ಒಂದೊಂದು ವಾಕ್ಯ ಬರೆಯಿರಿ.

೨. ದೊಡ್ಡ ಮನೆತನ, ಹಿರಿಯ ಮನೆತನ ಮತ್ತು ದೊಡ್ಡವರು, ಹಿರಿಯರು ಎಂಬಲ್ಲಿ ದೊಡ್ಡ ಹಾಗು ಹಿರಿಯ ಈ ಪದಗಳಲ್ಲಿರುವ ಅರ್ಥಭೇದವೇನು? ವಿವರಿಸಿರಿ.

**ವಾಕ್–ಶಿಕ್ಷಣ:—**

ಮೂಕಾಭಿನಯದಿಂದ ಆಶ್ಚರ್ಯ, ಕರುಣೆ, ಸಿಡುಕು, ಅಸಮ್ಮತಿ ಸೂಚಿಸುವ ಮುಖ-ಮುದ್ರೆ ಹಾಗೂ ಅಂಗವಿನ್ಯಾಸಗಳನ್ನು ತೋರ್ಪಡಿಸಿರಿ.

**ಚರ್ಚೆ:—**

"ಗೆಳೆತನ-ಪ್ರೀತಿ ಎಂಬುದು ಕೇವಲ ಭ್ರಮೆ. ಅದನ್ನು ಅಪೇಕ್ಷಿಸಿ ಬಾಳುವವನಿಗೆ ನಿರಾಶೆ ಕಟ್ಟಿಟ್ಟದ್ದೇ!" ಎಂಬ ಅಭಿಪ್ರಾಯವು ಸಾಧುವೇ?

**ಬರೆಹ:—**

೧. ಶ್ರೀನಾಥ ಮತ್ತು ಅವನ ಗೆಳೆಯನಲ್ಲಿ ಉಂಟಾದ ತಪ್ಪು ತಿಳುವಳಿಕೆಯನ್ನು ಹೋಗಲಾಡಿಸುವ ಒಂದು ಸಂದರ್ಭವನ್ನು ಕಲ್ಪಿಸಿಕೊಂಡು ಅವರು ಮುಂದೆ ಪರಮಸ್ನೇಹಿತರಾಗುವ ಸಂಧಿಯೊದಗಿದುದನ್ನು ಚಿತ್ರಿಸಿರಿ. ಕಥೆಯನ್ನು ಪೂರ್ಣ ಮಾಡಿರಿ

೨. ಗೆಳೆತನದಲ್ಲಿ ಬರುವ ಅಡ್ಡಿ ಆತಂಕಗಳು ಯಾವುವು? ಮತ್ತು ಅವನ್ನು ಹೇಗೆ ನಿವಾರಿಸಿಕೊಳ್ಳುತ್ತಿರಬೇಕು ಎಂಬುದನ್ನು ವಿವರಿಸಿರಿ.

---

## ಅಭ್ಯಾಸನಗಳು

**ಪ್ರಶ್ನೆಗಳು.—**

೧) ತಮ್ಮಂತೆ ಆಗಬೇಕೆಂದು ಪ್ರಾಮಾಣಿಕವಾಗಿ ಉಪದೇಶಿಸುವುದು ತಪ್ಪೇ ?

೨) ಉಪದೇಶ ಮತ್ತು ಒತ್ತಾಯ ಇವೆರಡರ ಮೇರೆಗಳು ಯಾವವು ?

೩) ತಾನು ಸರಿ, ಹಿತಕರ, ಲಾಭಕರವೆಂದು ಮನಗಂಡುದನ್ನು ಇನ್ನೊಬ್ಬರಿಗೆ ಮಾಡಹಚ್ಚುವುದು—ಒತ್ತಾಯಪಡಿಸುವುದು ಅಯೋಗ್ಯವೋ ? ಏಕೆ ?

೪) ಜನರನ್ನು ಸನ್ಮಾರ್ಗದಲ್ಲಿ ನಡೆಸಿಕೊಂಡು ಹೋಗುವುದಕ್ಕೆ ಕಟ್ಟಳೆ, ಕಾನೂನು ಇರಕೂಡದೇ ?

೫) 'ಆಸ್ಪತ್ರೆ ಆವಾರದ ಹೊರಗಿನ ಜನರೂ ಹುಚ್ಚರು' ಈ ಮಾತಿನಲ್ಲಿರುವ ಸತ್ಯಾಂಶ ವೇನು ?

**ಭಾಷಾಭ್ಯಾಸ:—**

೧) ಸ್ವಲ್ಪದರಲ್ಲಿ ಸ್ವಾರಸ್ಯವನ್ನು ತರುವ ಕೌಶಲವು ಇಲ್ಲಿಯ ಹನಿಯ ಜೀವಾಳ ವಾಗಿದೆ.

(೧) ಹುಚ್ಚರ ಆಸ್ಪತ್ರೆಯ ವರ್ಣನೆಯನ್ನು ಬರೆಯಿರಿ.

(೨) ಅಲ್ಲಿಯ ಕೈತೋಟವು ಹೇಗಿರಬಹುದು ಬಣ್ಣಿಸಿರಿ.

(೩) ಇಲ್ಲಿ ಬಂದಿರುವ, ಪ್ರಶ್ನೆ ಕೇಳುವಂತಹ ಶಿಕ್ಷಣ ಸಂಸ್ಕಾರಗಳುಳ್ಳ ತರುಣ ಹುಚ್ಚನ ಮುಖಭಾವ, ಉಡುಪು ಮೊದಲಾದವುಗಳನ್ನು ಕಲ್ಪಿಸಿ ಹೇಳಿರಿ.

೨) ಜನರಿಂದ ಕಡೆಗಣಿಸಲ್ಪಟ್ಟ ಯಾವುದೊಂದು ಸತ್ಯಾಂಶವನ್ನು ಮತ್ತೆ ಗಮನಕ್ಕೆ ತಂದುಕೊಡುವುದಕ್ಕಾಗಿ ಲೇಖಕನು ಅತಿಶಯೋಕ್ತಿಯನ್ನು ಇಲ್ಲಿ ಉಪಯೋಗಿಸಿ ಕೊಂಡಿದ್ದಾನೆ. ಆಸ್ಪತ್ರೆಯಲ್ಲಿ ಹುಚ್ಚನಲ್ಲಿರುವ ಜಾಣತನದ ಮೂಲವಾವುದು? ಹೊರಗಣ 'ಜಾಣ'ರಲ್ಲಿರುವ ಹುಚ್ಚಿನ ಅಂಶವು ಯಾವುದು ?

**ಶಬ್ದವಿಚಾರ:—**

೧) i ಹುಚ್ಚು ಬೆಳೆ ಜೋಳಕ್ಕೆ. ಈ ಬಾರಿ.

ii ತನ್ನ ಕೈಕೊಂಡ ಕಾರ್ಯದ ಹುಚ್ಚು ಹಿಡಿಯದವರಿಂದ ಯಾವ ಮಹತ್ಕಾರ್ಯವೂ ಆಗಲಾರದು.

ii ತಲೆತಿರುಕ ಹುಚ್ಚ.

ಈ ಮೂರು ಸ್ಥಳಗಳಲ್ಲಿ 'ಹುಚ್ಚ' ಈ ಶಬ್ದದ ಅರ್ಥ ಹೇಳಿರಿ.

೨) ತಂದೆಯ ತಮ್ಮ ಅಥವಾ ಅಣ್ಣ; ತಾಯಿಯ ಅಣ್ಣ ಅಥವಾ ತಮ್ಮ; ತಂಗಿಯ ಗಂಡ, ಅಕ್ಕನ ಗಂಡ. ಈ ಬಳಗ ಸಂಬಂಧ ಜೋಡಿಸುವ ಒಂದೊಂದೇ ಶಬ್ದ ಹೇಳಿರಿ.

**ವಾಕ್-ಶಿಕ್ಷಣ:—**

೧) ಹಲವು ಕುಯುಕ್ತಿಗಳಿಂದ ಹಣ ಕೂಡಿಹಾಕಿ, ದುಡ್ಡು ಇಟ್ಟಬ್ಯಾಂಕು ಮುಳುಗಿದ ಸುದ್ದಿ ಕೇಳಿ ಹುಚ್ಚನಾದ ಒಬ್ಬ ಅಧಿಕಾರಿ, ಸೆಟ್ಟಿ ಅಥವಾ ಮುಂದಾಳು ಇವರಲ್ಲಿ ಒಬ್ಬನ ಆ ಅವಸ್ಥೆಯನ್ನು ಅಭಿನಯಿಸಿರಿ.

**ಚರ್ಚೆ:—**

೧) "ಪ್ರತಿಯೊಬ್ಬರಿಗೂ ಒಂದೊಂದು ಮಾತಿನಲ್ಲಿ ಸ್ವಲ್ಪ ಹೆಚ್ಚುಕಡಿಮೆ ಹುಚ್ಚು.

ಇದೆಯೆಂದೇ ಲೋಕವು ಸುಸೂತ್ರ ನಡೆದಿದೆ' ಎಂಬ ಅಭಿಪ್ರಾಯವನ್ನು ಕುರಿತು ನಿಮ್ಮ ಅಭಿಪ್ರಾಯ ವ್ಯಕ್ತಪಡಿಸಿರಿ.

೨) ಕಾಯಿದೆ ನಿರ್ಬಂಧಗಳನ್ನೆಲ್ಲ ತೆಗೆದುಹಾಕಿ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟಾಗಲೆ ಪ್ರತಿಯೊಬ್ಬರ ಅಂತಃಶಕ್ತಿಯ ವಿಕಾಸವಾಗಬಲ್ಲದು.

# ೫. ಕರ್ನಾಟಕದ ಪುನರುಜ್ಜೀವನ

[ರಮಣೀಯ ಸೃಷ್ಟಿಸೌಂದರ್ಯವನ್ನು ಕಂಡು, ಮನೋಹರ ಸುಮಧುರ ಸಂಗೀತವನ್ನು ಕೇಳಿ, ಭಾವಬುದ್ಧಿಗಳೆರಡನ್ನೂ ಸೆರೆಹಿಡಿದು ದಿವ್ಯಲೋಕಕ್ಕೆ ಒಯ್ವ ಗ್ರಂಥವನ್ನು ಓದಿ ಆಗುವ ಆನಂದವೇ ಶ್ರೇಷ್ಠವಾಗ್ಮಿಯ ಭಾಷಣದಿಂದಲೂ ದೊರೆಯಬಲ್ಲುದು. ಇಂತಹ ರಸನಿಮಿಷಗಳ ಕಾಲದಲ್ಲಿ ಅಮೃತವು ದೊರೆಕೊಂಡಂತೆ ಎನಿಸುವುದು. ಪೂಜ್ಯ ಬಿ. ಎಮ್. ಶ್ರೀ.ಯವರು ನಮ್ಮ ನಾಡಿನ ತರುಣರಿಗೆ ಕೊಟ್ಟ ಅಮರ ಸಂದೇಶವು ಅವರ ಈ ಉಪನ್ಯಾಸದಲ್ಲಿ ಅಡಕವಾಗಿದೆ. ಇದರೊಳಗಿನ ಒಂದೊಂದು ಮಾತಿನ ತೂಕ, ಆ ಮಾತಿನಲ್ಲಿ ಹುದುಗಿಕೊಂಡಿರುವ ಆಳವಾದ ಅರ್ಥ, ಯಾವ ಅಳುಕು ಇಲ್ಲದೆ ಅಪ್ರಿಯ ಸತ್ಯವನ್ನೂ ಹಿತಮಿತವಾಗಿ ಹೇಳಿದ ಮಾರ್ಮಿಕ ರೀತಿ ಮನನೀಯವಾಗಿವೆ.

ಕನ್ನಡ ಸಾಹಿತ್ಯಪರಿಷನ್ಮಂದಿರದಲ್ಲಿ ೧೪-೭-೧೯೪೧ನೆಯ ದಿನ 'ಶ್ರೀ' ಅವರ ೫೭ನೆಯ ಹುಟ್ಟು ಹಬ್ಬವನ್ನಾಚರಿಸಲಾಯಿತು. ಅಂದು 'ಶ್ರೀ' ಅವರು ಮಾಡಿದ ಭಾಷಣದಿಂದ ಈ ಭಾಗವನ್ನು ಆಯ್ದುಕೊಳ್ಳಲಾಗಿದೆ.

ಕನ್ನಡ ಭಾಷೆ ಒಂದು ಪ್ರಾಂತದ ಭಾಷೆಯಾಗಿರಬಹುದು. ಮಹತ್ವದ ಭಾಷೆಗಳ ಮುಂದೆ ಇದೇ? ಎಂಬ ಅದನ್ನು ಕೆಲವರು ಕಡೆಗಣಿಸಬಹುದು. ನಮಗೆ ಅದು ಹೆತ್ತ ತಾಯಿ; ಮಹಾ ವೈಭವದಿಂದ ಬಾಳಿದ ಜನತೆಯ ಉಸಿರು; ಕಣ್ಣು. ಸಣ್ಣದೋ ದೊಡ್ಡದೋ, ಎಲ್ಲಾ ಭಾಷೆ, ಸಾಹಿತ್ಯ, ಸಂಸ್ಕೃತಿ, ಧರ್ಮಗಳನ್ನೂ, ಒಂದು ಕಡೆಯಿಂದ ಒಳಹೊಕ್ಕು ಮತ್ತೊಂದು ಕಡೆಯಿಂದ ಹೊರಹೊರಟು, ಎತ್ತರದಲ್ಲಿ ನಿಂತು, ಒಟ್ಟು ನೋಟಗಳಲ್ಲಿ ಅವುಗಳ ಬೆಲೆ ಏನೆಂದು ತೂಗಬೇಕು. ತೂಗಿ ಮುನ್ನುಗ್ಗಬೇಕು. ಕನ್ನಡ ಬದುಕಿದೆ—ಬೆಳೆಯುತ್ತಿದೆ. ಅದು ಇಂದಿನ ಅವಶ್ಯಕತೆಗಳಿಗೆಲ್ಲ ಒದಗಿ, ಕನ್ನಡಿಗರ ಜೀವಾಳವಾಗಬೇಕು, ಅವರ ಆತ್ಮ ವಿಕಾಸಕ್ಕೆ ಆಧಾರವಾಗಬೇಕು. ಕ್ರಾಂತಿಯಾಗಬೇಕು. ಹಳೆಯ ನುಡಿ ಹೊಸದಾಗಬೇಕು. ಗ್ರಾಮ್ಯವಾಗಿಯೇ ನಿಲ್ಲದೆ, ವ್ಯಾಕರಣ ನಿಯಮಕ್ಕೊಳಪಟ್ಟು, ಶ್ರೇಷ್ಠ ಸಾಹಿತ್ಯ ಸಂಸ್ಕೃತಿಗಳ ಮಟ್ಟಕ್ಕೇರಿ, ಸಾವಿರಾರು ವರ್ಷಗಳಿಂದ ಬೆಳೆದುಬಂದು, ಇನ್ನು ಬೆಳೆಯುವ ಸ್ವಾತಂತ್ರ್ಯ ಜೀವನವುಳ್ಳವೆಲ್ಲಾ 'ಸಂಸ್ಕೃತ'ಗಳೇ. ಅವು ಜನತೆಗಾಗಿ ಹಬ್ಬಿ (ಪಂಡಿತರಿಗೇ ಅಲ್ಲ) ಬ್ರಹ್ಮಾನುಭವಕ್ಕೆ ಒದಗಬೇಕೆಂಬುದೇ ನನ್ನ ಬಯಕೆ.

ಕನ್ನಡ ಹೀಗೆ ಏಳಿಗೆ ಹೊಂದಬೇಕೆಂಬುದೇ ನನ್ನ ದೀಕ್ಷೆ. ಕಲಿಯುವುದೇ ನನ್ನ ಜೀವನದ ಕರೆ; ಕಲಿಯುವುದು, ಕಲಿತದ್ದನ್ನು ತಿಳಿಯದವರಿಗೆ ಕಲಿಸುವುದು. ಇದು ಸಣ್ಣದು, ಅದು ದೊಡ್ಡದು ಎಂಬ ಭಾವನೆ ನನಗೆ ಒಲ್ಲದು. ಈ ಪ್ರಪಂಚದಲ್ಲಿ ನಿರ್ದುಷ್ಟವಾದದ್ದು, ಪರಿಪೂರ್ಣವಾದದ್ದು ಯಾವುದೂ ಇಲ್ಲ. ಎಲ್ಲದರಲ್ಲೂ ಒಂದು ಸತ್ಯವಿದೆ, ಒಂದು ವೈಶಿಷ್ಟ್ಯವಿದೆ, ಹಾಗೆಯೆ ಕೊರತೆಯಿದೆ, ಕಲ್ಮಷವಿದೆ ಎಂದು ನನ್ನ ಭಾವನೆ. ಕನ್ನಡ ಪ್ರಪಂಚ ಚಿಕ್ಕದೆಂದು ನಾವು ನಮ್ಮ ಆವರಣವನ್ನು ಕೊಂಪೆಯಂತೆ ನಿರ್ಮಿಸಿಕೊಂಡು ಕುಳಿತುಕೊಳ್ಳಬಾರದು. ಕನ್ನಡದವರ ದೃಷ್ಟಿ ವಿಶಾಲವಾಗಬೇಕು ಬೆಳಕು ಗಾಳಿ ಎಲ್ಲೆಲ್ಲಿಂದ ಬರುವುದೋ ಅಲ್ಲಿಂದೆಲ್ಲಾ ಅವನ್ನು ನಮ್ರತೆಯಿಂದ, ಭಕ್ತಿಯಿಂದ ಸ್ವಾಗತಿಸಿ, ನಮ್ಮ ಸಂಸ್ಕೃತಿಯನ್ನೂ ತೇಜಸ್ಸನ್ನೂ ಬೆಳೆಸಿಕೊಳ್ಳಬೇಕು. ಒಡಕು ಹುಟ್ಟಿಸುವ ಗೋಡೆಗಳನ್ನು ಒಡೆದು, ಮುಚ್ಚಿದ ಕಿಡಕಿಗಳನ್ನು ತೆರೆದು ಎಲ್ಲ ದಿಕ್ಕುಗಳಿಂದಲೂ ಜೀವವನ್ನೂ ಅಂದವನ್ನೂ ತುಂಬಿಕೊಂಡು ಕನ್ನಡ ಮಹಾಕಾವೇರಿಯಾಗಿ ಹರಿಯಬೇಕು, ಕನ್ನಡಿಗರ ಭಾಗ್ಯ ವಿಧಾತೆಯಾಗಿ ಬೆಳಗಬೇಕು, ಸಂಯುಕ್ತ ಭಾರತಕ್ಕೆ ಚತುರ್ಭುಜವಾಗಿ ನಿಲ್ಲಬೇಕು.

ಈ ಒಂದು ಹೆಗ್ಗುರಿಯನ್ನು ಮುಟ್ಟಬೇಕಾದರೆ ನಮ್ಮ ಮನೋಧರ್ಮ ಹೇಗಿರಬೇಕು? ಮನಸ್ಸು ಕಲ್ಲಾಗಿ ನಿಲ್ಲದೆ ತೆರೆದುಕೊಂಡು ಬೆಳೆಯುತ್ತಿರಬೇಕು. ಏಕಾಂತ ದೃಷ್ಟಿಯಲ್ಲಿ ಸಿಲ್ಕಬಾರದು. ಅಂಧ ಶ್ರದ್ಧೆಯನ್ನು ಬಿಡಬೇಕು. ಗಟ್ಟಿ ಯಾವುದು, ಜಳ್ಳು ಯಾವುದು ಎಂಬುದನ್ನು ಅರಿತು ಶಾಶ್ವತವಾದ ಸತ್ಯವನ್ನು ಹುಡುಕುವುದು ನಮ್ಮ ಪರಮಧರ್ಮವಾಗಬೇಕು ಎಲ್ಲಾ ಸಂಸ್ಕೃತಿಗಳಲ್ಲಿಯೂ, ಎಲ್ಲಾ ಮತಗಳಲ್ಲಿಯೂ ಎಲ್ಲಾ ಸಾಹಿತ್ಯಗಳಲ್ಲಿಯೂ ಚಿನ್ನವೂ ಉಂಟು, ಹಿತ್ತಾಳೆಯೂ ಉಂಟು, ಜೀವರಸವೂ ಉಂಟು. ಬರಿಯ ಭ್ರಾಂತಿಯ ಕಸವೂ ಉಂಟು. ಹಿತ್ತಾಳೆಯಿಂದ ಚಿನ್ನ ಕೆಟ್ಟೀತು; ಕಸದಿಂದ ರಸ ವಿಷವಾದೀತು. ವಿಮರ್ಶೆಯ ಬೆಂಕಿಯಲ್ಲಿ ಶುದ್ಧಿಯಾದರೆ ಚಿನ್ನವೆಲ್ಲಾ ಕೂಡಿ ಒಂದಾಗುವುವು; ರಸವೆಲ್ಲಾ ಪಾದರಸದ ಬಿಂದುಗಳಂತೆ ಕೂಡಿ ಸಮರಸವಾಗುವುವು. ಕಲ್ಮಷಗಳೆಲ್ಲಾ ಬೇರೆಯಾಗುವವು; ಅವನ್ನು ಬೀಸಾಡಬಹುದು. 'ಸತ್ಯಮೇವ ಜಯತೇ' 'ಸತ್ಯಾನ್ನಾಸ್ತಿ ಪರೋ ಧರ್ಮಃ'

ನಮ್ಮ ಬದುಕನ್ನು ಸಂಪದ್ಯುಕ್ತವಾಗಿ ಮಾಡಲು ನಾವು ತುಂಬಿಕೊಳ್ಳಬೇಕಾದ ಅಮೃತಕಲಶಕ್ಕೆ ಬೇಕಾದುದು ಎಂಥ ಧರ್ಮ, ಎಂಥ ಸಾಹಿತ್ಯ, ಎಂಥ ಸಂಸ್ಕೃತಿ ಎಂಬುದನ್ನೂ ನಮ್ಮ ಜನದ ಬದುಕು ನಿಜವಾಗಿ, ರಸಭರಿತವಾಗಿ ಹಿಗ್ಗಬೇಕಾದರೆ, ಹಿಂದಿನಿಂದ ಬಂದದ್ದರಲ್ಲಿ ಸಂಗ್ರಹಿಸಬೇಕಾದದ್ದು ಎಷ್ಟು, ತ್ಯಜಿಸಬೇಕಾದದ್ದು ಎಷ್ಟು ಎಂಬುದನ್ನೂ, ಬುದ್ಧಿ ಸ್ವಾತಂತ್ರ್ಯದಿಂದ, ವಿಮರ್ಶಕ ಬುದ್ಧಿಗೆ ಕಡಿವಾಣ ಹಾಕದೆ, ಚೆನ್ನಾಗಿ ವಿಚಾರ ಮಾಡಿಕೊಳ್ಳಬೇಕು. ಒಳ್ಳೆಯ ತೋಟಗಾರನಂತೆ, ಗಿಡವನ್ನು ಸಾಯಿಸದೆ, ಗಿಡವನ್ನು ನಾಶಮಾಡುವ ಒಣ ಭಾಗಗಳನ್ನು ಕತ್ತರಿಸಿ,

ಗಿಡಕ್ಕೆ ಜೀವರಸ ಬರುವಂತೆ ಕಸಿ ಮಾಡಿ, ಸೊಗಸಾದ ಹೂವು ಹಣ್ಣು ಬಿಡುವಂತೆ ದುಡಿಯಬೇಕು. ಅಪ್ಪ ನೆಟ್ಟ ಮರವೆಂದು ನೇತುಹಾಕಿಕೊಳ್ಳಬೇಕಾದದ್ದಿಲ್ಲ "ವಾಂಸಾಸಿ ಜೀರ್ಣಾನಿ ಯಥಾ ವಿಹಾಯ" ಎಂದಂತೆ, ಉಳಿಯಲಾರದ್ದನ್ನು ಉಳಿಯಬಾರದ್ದನ್ನು ತ್ಯಜಿಸುವ ಧೈರ್ಯ ನಮ್ಮಲ್ಲಿ ಬೆಳೆಯಬೇಕು.

ಈ ಮನೋಧರ್ಮವು ನಮ್ಮ ಬದುಕನ್ನು ಸಂಬಂಧಿಸಿರುವ ಸಾಹಿತ್ಯ, ಧರ್ಮ, ಸಮಾಜರಚನೆ, ರಾಜಕೀಯ ಮುಂತಾದ ಎಲ್ಲ ರಂಗಗಳಿಗೂ ಅನ್ವಯಿಸುತ್ತದೆ. ಪುರಾತನರ ಜ್ಞಾನವನ್ನೂ ನೂತನರ ಜ್ಞಾನವನ್ನೂ ಹೊಂದಿಸಿ ಇಬ್ಬರ ಅವಿವೇಕವನ್ನೂ ದೂರಮಾಡಿ, ಬುದ್ಧಿಯನ್ನು ಪ್ರೇರಿಸುವ ವಿಶಾಲದೃಷ್ಟಿಯನ್ನು ಪಡೆಯುವುದು, ಎಲ್ಲರ ಪರಮ ಕರ್ತವ್ಯವಾಗಿದೆ. ಕಾಲ ಹಿಮ್ಮೆಟ್ಟಲಾರದು; ಹಿಂದಿನ ಪ್ರಪಂಚ ಮರಳಲಾರದು; ಅಲ್ಲಿ ಮತ್ತೆ ಹೋಗಿ, ನಾವು ಉಸಿರಾಡಲಾರೆವು.

'ಅಸತೋಮಾ ಸದ್ಗಮಯ' ಎಂಬ ಋಷಿಗಳ ಪ್ರಾರ್ಥನೆಯಂತೆ, ಕಾರ್ಡಿನಲ್ ನ್ಯೂಮನ್ನನ –Out of the shadows and vain imaginations into the truth' ಎಂಬ ಹೊನ್ನುಡಿಯಂತೆ, ಇಲ್ಲದುದನ್ನು, ಭ್ರಮೆಯನ್ನು, ಕಲ್ಪನಾಪ್ರಪಂಚವನ್ನು ತೊರೆದು, ಇರುವುದನ್ನು, ಸತ್ಯವನ್ನು, ವಾಸ್ತವಿಕ ಲೋಕವನ್ನು ನಾವು ಸೇರಬೇಕು. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು 'ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು' ಎಂದು ಅರ್ಜುನನಿಗೆ ಕೊಟ್ಟ ಬುದ್ಧಿಸ್ವಾತಂತ್ರ್ಯವನ್ನು ನಮ್ಮ ಜೀವನದ ಮೂಲಸೂತ್ರವಾಗಿ ಮಾಡಿಕೊಂಡು, 'ಪ್ರಜ್ಞಾವಾದ'ವನ್ನೇ ಆಡುತ್ತಿರದೆ, ಜಿಜ್ಞಾಸೆ ಮಾಡಿ, ಸತ್ಯಾಸತ್ಯ ವಿವೇಚನೆಯಲ್ಲಿ ತೊಡಗಿ, ನಮ್ಮ ನಾಡನುಡಿಯ ಸರ್ವತೋಮುಖವಾದ ಏಳಿಗೆಗಾಗಿ ಸಂಘಶಕ್ತಿಯನ್ನೂ, ಒಕ್ಕಟ್ಟನ್ನೂ ಬೆಳಸಿಕೊಂಡು ಇಲ್ಲಿಯೇ ಮುಕ್ತಿಯನ್ನು ಪಡೆಯಬೇಕು. ಮುಕ್ತಿಯೆಂದರೆ ಇಷ್ಟು ಸ್ಪಷ್ಟ ಅರ್ಥವನ್ನು ಇಟ್ಟುಕೊಳ್ಳೋಣ: ಬಿಡುಗಡೆ, ಸ್ವಾತಂತ್ರ್ಯ, (Freedom, Liberation): ಅಜ್ಞಾನದಿಂದ, ಅಸತ್ಯದಿಂದ, ಅಧರ್ಮದಿಂದ, ಪಾಪವಾಸನೆಯಿಂದ ಬಿಡುಗಡೆ; ಇದಲ್ಲದೆ ಇನ್ನೂ ಅತಿಶಯದ ಅರ್ಥವಿದ್ದರೆ, ವಿಚಾರ ಮಾಡೋಣ. ಕರ್ಮಯೋಗಕ್ಕೆ ಇಷ್ಟು ಅರ್ಥ ಸಾಕು. ಅಂಧಶ್ರದ್ಧೆಯಿಂದ ಬಿಡುಗಡೆಯನ್ನೂ ಒಂದು ದೊಡ್ಡ ಕೆಲಸಕ್ಕಾಗಿ ಒಕ್ಕಟ್ಟನ್ನೂ, ಧ್ಯೇಯಸಾಧನೆಯಿಂದ ಸೌಖ್ಯವನ್ನೂ ಪಡೆದು, ಸಂಯುಕ್ತ ಸುಖಮಯ ಸ್ವತಂತ್ರ ಭಾರತದಲ್ಲಿ ಬಾಳೋಣ ಎಂಬುದೇ ನನ್ನ ಜೀವನದ ರಹಸ್ಯ; ನನ್ನ ಕನ್ನಡ ಕೆಲಸದ ಗುಟ್ಟು; ನನ್ನ ಮಿಡಿತ, ಕುದಿತ.

—ಶ್ರೀ.

## ಅಭ್ಯಸನಗಳು

ಪ್ರಶ್ನೆಗಳು:—

೧ ಕನ್ನಡವೂ 'ಸಂಸ್ಕೃತ'ವೇ ಆಗಿದೆ ಎಂದು ಹೇಳಲು ಯಾವ ಕಾರಣ?

೨. 'ಕಲಿಯುವುದೂ ಕಲಿಸುವುದೂ ನನ್ನ ಜೀವನದ ಕರೆ' ಎಂಬುದರ ಅರ್ಥವನ್ನು ವಿವರಿಸಿರಿ.

೪. i 'ಯಾವ ವಸ್ತುವೂ ಸಂಪೂರ್ಣ ಒಳಿತಾದುದು ಅಥವಾ ಸಂಪೂರ್ಣ ಕೆಡಕಾದುದು ಇಲ್ಲ.'

ii ಮನಸ್ಸು ಕಲ್ಲಾಗಿ ನಿಲ್ಲದೆ ತೆರೆದುಕೊಂಡು ಬೆಳೆಯಬೇಕು.

iii ವಿಮರ್ಶಕ ಬುದ್ಧಿಗೆ ಕಡಿವಾಣ ಹಾಕಲಾಗದು.

vi ಅಂಧಶ್ರದ್ಧೆಯಿಂದ ಬಿಡುಗಡೆ.

ಈ ವಿಚಾರಗಳನ್ನು ವಿಸ್ತರಿಸಿ ಒಂದೊಂದು ವಾಕ್ಯವೃಂದ ಬರೆಯಿರಿ.

v 'ಅಪ್ಪ ನೆಟ್ಟ ಗಿಡವೆಂದು ನೇತುಹಾಕಿಕೊಳ್ಳಬಹುದೇ?'

ಈ ಗಾದೆಯನ್ನು ಹೇಳಿದ ಕಾರಣವೇನು? ಯಾವ ಯಾವ ಮಾತುಗಳಲ್ಲಿ ನಾವು ಅಪ್ಪನ ಗಿಡಕ್ಕೆ ಉರುಲು ಹಾಕಿಕೊಳ್ಳುತ್ತಿರುವೆವು ಎಂದು ಉಪನ್ಯಾಸಕರು ಸೂಕ್ಷ್ಮವಾಗಿ ಸೂಚಿಸಿದ್ದಾರೆ?

ಅಥವಾ

ಹಳೆಯ ಬಟ್ಟೆಗಳನ್ನು ನಿರುಪಯುಕ್ತವಾಗುತ್ತಲೆ ತೆಗೆದುಹಾಕುತ್ತೇವೆ. ಜಳ್ಳು ಇದ್ದುದನ್ನು ಬಿಸಾಡಬೇಕು ಎಂಬಲ್ಲಿ. ಹೀಗೆ ನಮ್ಮಲ್ಲಿ ಬಿಟ್ಟುಬಿಡಬೇಕಾದ ಸಂಗತಿಗಳು ಯಾವುವು? ಎಂಬುದನ್ನು ಸಕಾರಣವಾಗಿ ಹೇಳಿರಿ.

**ಭಾಷಾಭ್ಯಾಸ:—**

೧. ಇಲ್ಲಿ ಇರುವ ವಕ್ತೃತ್ವದ ಶೈಲಿಯನ್ನು ಇದೇ ಪುಸ್ತಕದಲ್ಲಿರುವ ಪಂ. ಜವಾಹರ ಲಾಲರ 'ಮುಕ್ತಿ' ಎಂಬ ಪ್ರಬಂಧದ ಶೈಲಿಯೊಡನೆ ಹೋಲಿಸಿ ನೋಡಿರಿ.

i ವಕ್ತೃತ್ವದಲ್ಲಿರುವ ಓಟವು ಪ್ರಬಂಧದಲ್ಲಿ ಇರುವುದಿಲ್ಲ ಎಂಬುದನ್ನು ಎರಡೂ ಪಾಠಗಳ ಪ್ರಾರಂಭದ ೧೫-೨೦ ವಾಕ್ಯಗಳನ್ನು ತೂಗಿ ಅವುಗಳಲ್ಲಿರುವ ವ್ಯತ್ಯಾಸವನ್ನು ಹೇಳಿರಿ.

ii ವಾಗ್ಮಿಯು ಕೇಳುವವರ ಮನಸ್ಸಿನ ಮೇಲೆ ಬಿಂಬಿಸುವುದಕ್ಕಾಗಿ ಒಂದು ಮಾತನ್ನು ಮತ್ತೆ ಮತ್ತೆ ಮೂರು ನಾಲ್ಕು ಬಗೆಯಾಗಿ ಹೇಳುವುದುಂಟು. ಇಂತಹ ಸ್ಥಳಗಳನ್ನು ಎತ್ತಿ ತೋರಿಸಿರಿ.

೨. ಈ ಪಾಠದೊಳಗಿನ ವಕ್ತೃತ್ವದ ಭಾಗವನ್ನು ಬಿಟ್ಟು ಇಲ್ಲ ಹೇಳಿದ ಮಾತುಗಳನ್ನು ಪ್ರಬಂಧದ ಶೈಲಿಯಲ್ಲಿ ಮಾರ್ಪಡಿಸಿರಿ.

**ಶಬ್ದ ವಿಚಾರ:—**

೧. ನಿರ್+ದುಷ್ಟ—ಹೀಗೆ ನಿರ್ ಸೇರಿ ಆದ ಐದು ಶಬ್ದಗಳನ್ನು ಹೇಳಿರಿ.

೨. i ಈ ಪುಸ್ತಕದ ಬೆಲೆ ಐದು ರೂಪಾಯಿ.

ii ಅವಿಚಾರಿಯ ಮಾತಿಗೆ ಬೆಲೆಯೇನು?

ಇವೆರಡೂ ವಾಕ್ಯಗಳಲ್ಲಿ ಬಂದಿರುವ 'ಬೆಲೆ' ಶಬ್ದಕ್ಕಿರುವ ಅರ್ಥಭೇದವೇನು?

೩. ಜೀವಾಳ, ಮಟ್ಟ, ಗುಲ್ಲ, ನೆಟ್ಟು ಈ ಶಬ್ದಗಳನ್ನು ಉಪಯೋಗಿಸಿ ಒಂದೊಂದು ವಾಕ್ಯ ಬರೆಯಿರಿ.

**ವಾಕ್-ಶಿಕ್ಷಣ**

ವಾಗ್ಮಿಯಾಗಲಿಚ್ಛಿಸುವವನಿಗೆ ಮುಖಪಾಠ ಮಾಡುವ ಅಭ್ಯಾಸ ಸಾಕಷ್ಟು ಇರಬೇಕು. ಇದರೊಳಗಿನ ಬೇಕಾದ ಒಂದು ವಾಕ್ಯವೃಂದ ಪಾಠ ಮಾಡಿ, ತಕ್ಕ ಹಾವಭಾವ, ಧ್ವನಿಯ ಏರಿಳಿತಗಳೊಂದಿಗೆ ಅದಿ ತೋರಿಸಿರಿ.

**ಚರ್ಚೆ:—**

೧. ಬೇರೆ ಬೇರೆ ಭಾಷೆಗಳ ಸಮ್ಮಿಶ್ರಿತ ಪ್ರದೇಶಗಳುಳ್ಳ ಪ್ರಾಂತಗಳ ನಿರ್ಮಾಣ ದಿಂದಲೇ ಭಾರತದ ಅಖಂಡತ್ವವು ಉಳಿದೀತು, ಐಕ್ಯವು ಬೆಳೆದೀತು.

೨. ಸ್ವಭಾಷಾಭಿಮಾನವು ಅಜ್ಞಾನಕ್ಕೆ ಕಾರಣವಾಗುತ್ತದೆ.

**ಬರೆಹಃ—**

೧. ನನ್ನ ಜೀವನದ ಉಸಿರು.

೨. ಕನ್ನಡದ ಏಳ್ಗೆಗಾಗಿ ನಾನು ಸಲ್ಲಿಸಬೇಕೆಂದಿರುವ ಸೇವೆ.

# ಅಪರಾಧಿ ಯಾರು ?

[ ಕನ್ನಡದೊಳಗಿನ ಒಳ್ಳೆಯ ಕಥೆಗಳಲ್ಲಿ ಇದು ಒಂದು. ಕಥನಪದ್ಧತಿಯೊಳಗಿನ ಸೂಕ್ಷ್ಮ ಕುಶಲತೆಯು ಅಭ್ಯಸನೀಯವಾಗಿದೆ. ಪತ್ರರೂಪದಲ್ಲಿ ನಿರೂಪಿಸಿದ್ದು, ಪ್ರತಿಯೊಂದು ಪತ್ರದಲ್ಲಿಯೂ ಅದನ್ನು ಬರೆದ ವ್ಯಕ್ತಿಯ ಸ್ವರೂಪದರ್ಶನ ಮಾಡಿಕೊಡುವಂತಹ ಆ ಶೈಲಿಯು ಅಸಾಧಾರಣವಾಗಿದೆ; ಮನನೀಯವಾಗಿದೆ, ಈ ಕಥೆಯು ನೆವದಿಂದ ಸಮಾಜದ ಎದುರಿಗೆ ಇರಿಸಿದ ಸಮಸ್ಯೆಯನ್ನು ಬಿಡಿಸಲು ಹಿಂದೆಗೆದರೆ ಹಿಂದೂ ಸಮಾಜವು ಅಳಿಯುವುದೊ ಉಳಿಯುವುದೊ ಹೇಳಲು ಅಸಾಧ್ಯ. ನಿದ್ದೆಹೋದ ಜನರನ್ನು ಎಚ್ಚರಿಸುವಲ್ಲಿ ಜನರ ಹೃದಯವನ್ನು ಸೂರೆಗೊಂಡು, ಕಥೆ, ಕಾದಂಬರಿ, ನಾಟಕಗಳು ಹೇಗೆ ಪರಿಣಾಮಕಾರಿಯಾದ ಕಾರ್ಯ ಮಾಡಬಲ್ಲವೆಂಬುದಕ್ಕೆ ಈ ಕಥೆಯನ್ನೋದಿದ ಬಳಿಕ ಮನಸ್ಸಿನ ಮೇಲೆ ಆಗುವ ಪರಿಣಾಮವೇ ಸಾಕ್ಷಿ. ]

(೧)

ಅಣ್ಣ,

ನಾನು ಬರೆದ ಹಿಂದಿನ ಕಾಗದವು ತಲುಪಿರಬಹುದು. ಅದಕ್ಕೆ ನೀನು ಪ್ರತ್ಯುತ್ತರವನ್ನು ಬರೆಯುವ ಮೊದಲೇ ಈ ಕಾಗದವನ್ನು ನೋಡಿ ನಿನಗೆ ಆಶ್ಚರ್ಯವಾಗಲೂ ಬಹುದು ಆಶ್ಚರ್ಯದ ವಿಷಯವೇ ಇರುವುದರಿಂದ ನಿನಗಿದನ್ನು ಬರೆಯುತ್ತಿರುವೆನು.

ನಮ್ಮ ಮನೆಯ ಪಕ್ಕದ ಮನೆಯಲ್ಲಿದ್ದ ನಾಗೇಶರಾಯರದು ನಿನಗೆ ಗೊತ್ತಿದೆ. ಗೊತ್ತಿದೆ ಎಂದರೆ, ನಿನಗೆ ಅವರ ಗುಣಗಳೆಲ್ಲಾ ಗೊತ್ತಿರಲಾರದು. ಈ ಮನೆಗೆ ನಾವು ಮೊದಲು ಬಂದ ಸುರುವಿನಲ್ಲಿ ಅವರನ್ನು ನೋಡಿ 'ಕ್ರೂರಿಯ ಕಣ್ಣುಗಳಂತಿವೆ ರಾಯರ ಕಣ್ಣುಗಳು' ಎಂದು ಹೇಳಿಕೊಂಡು ನಗುತ್ತಿದ್ದುದು ನಿನಗೆ ಮರೆತುಹೋಗಿರಲಾರದು. ಚಿಕ್ಕತನದ ತಂಟೆಯಲ್ಲಿ ತಮಾಷೆಗಾಗಿ ನಾವಾಡಿದ ಮಾತುಗಳು ಈಗ ನಿಜವಾಗಿ ಪರಿಣಮಿಸಿವೆ. ನಾವು ಊಹಿಸಿದುದಕ್ಕಿಂತಲೂ ಹೆಚ್ಚಿನ ನೀಚರವರು. ನಾನೇಕೆ ಅವರ ಗುಣವರ್ಣನೆ ಮಾಡುತ್ತಿರುವೆನೆಂದು

ನೀನು ಹುಬ್ಬು ಗಂಟಿಕ್ಕಬಹುದು. ಸ್ವಲ್ಪ ಸಮಾಧಾನ ತಾಳಿಕೋ; ನಾನೀ ಕಾಗದ ಬರೆಯುತ್ತಿರುವುದೇ ಅವರ ನೀಚತನಕ್ಕೆ ಬಲಿಯಾಗಿ ಜಾತಿಯಿಂದ ಬಹಿಷ್ಕರಿಸಲ್ಪಟ್ಟಿರುವ ಪಾರ್ವತಿಗಾಗಿ; ಪಾರ್ವತಿ ಯಾರೆಂದು ಗೊತ್ತೇ ? ನಮಗೆ ಕನ್ನಡವನ್ನು ಕಲಿಸುತ್ತಿದ್ದರಲ್ಲಾ— ಆ ಪಂಡಿತರ ಮಗಳು. ಪಂಡಿತರು ಪಾರ್ವತಿಯನ್ನು ಮದುವೆ ಮಾಡಿದ ವರ್ಷವೇ ಸತ್ತು ಹೋದದ್ದು ನಿನಗೆ ತಿಳಿದಿದೆ. ಕಳೆದ ವರ್ಷ ಅವಳ ಪತಿಯೂ ಬೇಕಾದಷ್ಟು ಸಾಲ ಮಾಡಿಟ್ಟು ಅವರ ದಾರಿ ಹಿಡಿದ. ಅಂದಿನಿಂದ ಅನಾಥೆ ಪಾರ್ವತಿ. ಅವಳ ಚಿಕ್ಕಮಗುವನ್ನು ಸಾಕುವುದಕ್ಕೆ ಬೇರೇನೂ ಉಪಾಯ ತೋರದೆ ನಾಗೇಶರಾಯರ ಮನೆಯಲ್ಲಿ ಅಡಿಗೆಯ ಕೆಲಸಕ್ಕೆ ನಿಂತಳು. ಇದು ಒಂದು ವರ್ಷದ ಹಿಂದಿನ ಮಾತು.

ಮಗುವಿಗೋಸ್ಕರವಾಗಿ ರಾಯರ ಅತ್ಯಾಚಾರವನ್ನು ಸಹಿಸಿಕೊಂಡಿದ್ದ ಪಾರ್ವತಿಯನ್ನು ರಾಯರು ಅಪವಾದದ ಹೊರೆಯೊಡನೆ ಬಹಿಷ್ಕಾರವನ್ನೂ ಹಾಕಿಸಿ ಮೊನ್ನೆ ಮನೆಯಿಂದ ಹೊರದೂಡಿರುವರು. ನಿನ್ನೆ ರಾತ್ರಿ ಆತ್ಮಹತ್ಯೆಯನ್ನು ಮಾಡಿಕೊಳ್ಳುವ ಉದ್ದೇಶದಿಂದ ಮಗುವಿನೊಡನೆ ಬಾವಿಯ ಹತ್ತಿರ ನಿಂತಿದ್ದಳಂತೆ. ನಮ್ಮ ಗೈಬಿ, ತಪ್ಪಿಸಿಕೊಂಡು ಹೋದ ದನವನ್ನು ಹಿಡಿದುಕೊಂಡು ಬರುವುದಕ್ಕೆ ಹೋದಾಗ ಅವಳನ್ನು ಕಂಡು ಬಲಾತ್ಕಾರದಿಂದ ಇಲ್ಲಿಗೆ ಕರೆದುಕೊಂಡು ಬಂದಿದ್ದಾಳೆ. ಬಲಾತ್ಕಾರದಿಂದ ಗೈಬಿ ಅವಳನ್ನು ಕರೆದುಕೊಂಡು ಬಾರದಿದ್ದರೆ, ಈ ದಿನ ತಾಯಿ ಮಗುವಿನ ಶವಗಳನ್ನು ಬಾವಿಯಿಂದ ತೆಗೆಯಬೇಕಾಗುತ್ತಿತ್ತು. ನೋಡಿದೊಡನೆಯೇ ನನಗವಳ ಗುರುತು ಸಿಕ್ಕಿತು.

ನನ್ನನ್ನು ನೋಡಿ ಪಾಪ ಮುಖವನ್ನು ಮುಚ್ಚಿಕೊಂಡು ಅಳತೊಡಗಿದಳು. ರಾತ್ರಿ ನಿದ್ರೆಯೇ ಮಾಡಲಿಲ್ಲ. ಹಸಿದಿದ್ದ ಮಗುವಿಗೆ ಸ್ವಲ್ಪ ಹಾಲು ಕುಡಿಸಿದ್ದಾಳೆ. ಎಷ್ಟು ಹೇಳಿದರೂ ತಾನೇನೂ ಮುಟ್ಟುವದಿಲ್ಲ. ನಿನ್ನೆಯಿಂದಲೂ ಉಪವಾಸ. ನಿನಗೆದೆಲ್ಲಾ. ಏಕೆ ಬರೆಯುತ್ತಿರುವೆನೆಂದರೆ ಈ ವಿಷಯದಲ್ಲಿ ನಿನ್ನ ಸಹಾಯವು ಅತ್ಯಗತ್ಯವಾದುದರಿಂದ ಎಲ್ಲಿ ಹೋಗುವುದು, ಏನು ಮಾಡುವುದು ಎಂದು ಅವಳಿಗೆ ತಿಳಿಯದಾಗಿದೆ. ಜಾತಿಯವರು ಸೇರುವಂತಿಲ್ಲ. ಇಲ್ಲಿಂದ ನಾವು ಕಳುಹಿಸಿದರೆ ಬಾವಿಯೇ ಅವಳಿಗೆ ಗತಿಯಾಗುವುದು. ಏನು ಮಾಡುವಿ ಎಂದು ಕೇಳಿದರೆ, "ಇಲ್ಲೇ ಇದ್ದು ಬಿಡುತ್ತೇನೆ: ಈ ಮಗುವಿನ ಸಲುವಾಗಿ ನೀವಾದರೂ ಆಶ್ರಯ ಕೊಡಿ" ಎಂದು ಅಳುತ್ತಾಳೆ. ಆದುದರಿಂದ ನೀನು ಇಲ್ಲಿಗೆ ಬಂದರೆ ಅವಳನ್ನು ಶಾಸ್ತ್ರೋಕ್ತವಾಗಿ ನಮ್ಮ ಜಾತಿಗೆ ಸೇರಿಸಿ ಅವಳ ಮುಂದಿನ ಜೀವನಕ್ಕೆ ದಾರಿ ಮಾಡಬಹುದು.

ಅಣ್ಣಾ, ಅವಳ ತಂದೆ ಪಂಡಿತರು; ತಮ್ಮ ಜಾತಿಯನ್ನು ಹೊಗಳಿಕೊಳ್ಳುತ್ತಿದ್ದುದು ನಿನಗೆ ಜ್ಞಾಪಕವಿರಬಹುದು. ಅನಾಥ ಅಬಲೆಯರು, ಅತ್ಯಾಚಾರಿಯ

ಯಾದರೆ ನಮಗಾಜಾತಿಯಲ್ಲಿ ಜನ್ಮ ಕೊಡದಿದ್ದುದಕ್ಕಾಗಿ ದೇವರನ್ನು ಎಷ್ಟು ವಂದಿಸಿದರೂ ಸ್ವಲ್ಪವೇ. ಇದನ್ನು ನೋಡುವುದಕ್ಕೆ ಪಂಡಿತರು ಇದ್ದಿದ್ದರೆ ಅವರ ಜಾತಿಯ ವಿಷಯದಲ್ಲಿದ್ದ ಭಾವನೆಯನ್ನವರು ಬದಲುಮಾಡಬೇಕಾಗಿ ಬರುತ್ತಿತ್ತು. ಇರಲಿ, ಈ ಕಾಗದ ನೋಡಿದೊಡನೆ ಬರುವಿಯಾಗಿ ಆಶಿಸುವ,

ನಿನ್ನ ಪ್ರೀತಿಯ ತಂಗಿ,
ಉನ್ನೀಸಾ

(೨)

ಸೀತಮ್ಮನವರೇ,

ಬಹಳ ದಿನಗಳಿಂದಲೂ ನಿಮಗೆ ಕಾಗದ ಬರೆಯಬೇಕೆಂದು ಆಲೋಚಿಸಿ ಕೊಂಡಿದ್ದೇನೆ. ಬರೆಯುವುದಕ್ಕೆ ಮಾತ್ರ ಸ್ವಲ್ಪವೂ ಸಮಯವಾಗುವುದಿಲ್ಲ. ನೋಡಿ; ಈಗಲಾದರೂ ಸಮಯ ಸಿಕ್ಕಿತೇ ಎಂದು ನೀವು ಕೇಳಬಹುದು ನಿಜವನ್ನು ಹೇಳುವುದಾದರೆ ಈಗಲೂ ಇಲ್ಲ. ಕಮಲೆಗೆ ಜ್ವರ; ಅವಳಿಗೆ ಔಷಧಿ ಕುಡಿಸಿಲ್ಲ, ರಘುವನ್ನು ಇನ್ನೂ ಸ್ನಾನ ಮಾಡಿಸಿಲ್ಲ, ಅಡಿಗೆಯೂ ಆಗಿಲ್ಲ, ಆದರೂ ನಿಮಗೊಂದು ವಿಶೇಷದ ಸುದ್ದಿ ತಿಳಿಸಿಬಿಡಬೇಕೆಂದು ಕೆಲಸಗಳನ್ನೆಲ್ಲ ಬಿಟ್ಟು ಬರೆಯುವುದಕ್ಕೆ ಕೂತಿದ್ದೇನೆ.

ಆ ಪಾರ್ವತಿ ನೋಡಿ–ಬೊಂಬೆಯ ಹಾಗೆ ಅಲಂಕಾರ ಮಾಡಿಕೊಂಡು ಶಾಲೆಗೆ ಹೋಗುತ್ತಿದ್ದಳಲ್ಲ–ಆ ಪಂಡಿತರ ಮಗಳು–ಅವಳು ಜಾತಿಕೆಟ್ಟು ತುರುಕರ ಜಾತಿಗೆ ಸೇರಿದ್ದಾಳೆ; ನೋಡಿ–ಅವಳನ್ನು ಅವಳಪ್ಪ ಮುದ್ದು ಮುದ್ದು ಎಂತ ಶಾಲೆಗೆ ಕಳಿಸು ವಾಗಲೇ ನನಗೆ ಗೊತ್ತಿತ್ತು–ಅವಳು ಹೀಗಾಗುವಳೆಂದು! ಇದು ಬೇರೆ ತಮಾಷೆ ನೋಡಿ–ಪಕ್ಕದ ಮನೆ ಲಕ್ಷ್ಮೀ ಇದ್ದಾಳಲ್ಲ–ಈ ಜಾತಿಗೇಡಿ ಜೊತೆಯಲ್ಲೇ ಶಾಲೆಗೆ ಹೋಗುತ್ತಿದ್ದಳು–ಅವಳೆನ್ನುತ್ತಾಳೆ ಕೇಳಿ— "ಸೇರದೇ ಅವಳೇನು ಮಾಡುವುದು? ಸೇರದಂತೆ ಪ್ರಯತ್ನ ಮಾಡುವದರ ಬದಲು ಬಹಿಷ್ಕರಿಸಿ ಅವಳ ಮುಖಕ್ಕೆ ಬಾಗಿಲನ್ನು ಹಾಕಿ ಬಾವಿ ದಾರಿ ತೋರಿಸಿದ ನಿಮಗೆ ಅವಳು ಏನಾದರೇನು?" ಎಂತ. ಬಹಿಷ್ಕಾರ ಹಾಕಿದ್ದು ತಪ್ಪಂತೆ! ಜಾತಿ ಕೆಟ್ಟವಳನ್ನು ಮನೆಯಲ್ಲಿರಿಸಿಕೊಳ್ಳ ಬೇಕಾಗಿತ್ತಂತೆ! ನೋಡಿದಿರಾ ಹೇಗಿದೆ ಎಂತ!

ಹೊತ್ತಾಗಿ ಹೋಯಿತು; ಅಡಿಗೆ ಮಾಡಬೇಕು— ಇನ್ನೊಮ್ಮೆ ಬಿಡುವಿದ್ದಾಗ ಬರೆಯುತ್ತೇನೆ.

ನಿಮ್ಮ
——————

(೩)

ನಲಿನಿ,

ಬಹಳ ದಿವಸಗಳಾದುವು, ನಿನ್ನ ಕಾಗದಗಳೊಂದೂ ಬಾರದೆ; ಏಕೆ ಬರೆಯುವು ದಿಲ್ಲ? ಕಣ್ಮರೆಯಾದೊಡನೆಯೇ ಮರೆತು ಹೋಯಿತೇನು? ಸಹಜ, ಬೇಕಾದಷ್ಟು

ಹೊಸ ಗೆಳತಿಯರು ಸಿಕ್ಕಿರುವಾಗ ಹಳೆಯ ಹಳ್ಳಿಯ ಸ್ನೇಹಿತೆಯೊಬ್ಬಳನ್ನು ಜ್ಞಾಪಿಸಿ ಕೊಳ್ಳುವುದು ಕಷ್ಟ. ಆದರೆ ನೀನೆಷ್ಟು ನನ್ನನ್ನು ಮರೆಯುವುದಕ್ಕೆ ಯತ್ನಿಸಿದರೂ, ಯತ್ನದಲ್ಲಿ ಸಫಲತೆಯನ್ನು ಪಡೆದರೂ, ನಾನು ಮಾತ್ರ ಆಗಾಗ ಕಾಗದಗಳನ್ನು ಬರೆದು ಈ ಪ್ರಪಂಚದಲ್ಲಿ ನಾನೊಬ್ಬಳಿದ್ದೇನೆ; ಎಂಬುದನ್ನು ನಿನಗೆ ಜ್ಞಾಪಿಸದೆ ಬಿಡುವುದಿಲ್ಲ. ನನ್ನ ಹತ್ತು ಕಾಗದಗಳಿಗೆ ನೀನು ಒಂದೇ ಒಂದು ಕಾಗದವನ್ನಾದರೂ ಬರೆಯದಿದ್ದರೆ ನಾನೇ ಅಲ್ಲಿಗೆ ಬಂದು ನಿನ್ನ ಅತ್ಯಮೂಲ್ಯವಾದ ಸಮಯವನ್ನು ನನ್ನೊಡನೆ ಮಾತಿಗಾಗಿ ಉಪಯೋಗಿಸಿಕೊಳ್ಳುತ್ತೇನೆ. ಈ ಬೆದರಿಕೆಗೆ ನೀನು ಹೆದರ ದಿರಲಾರೆ. ಏಕೆಂದರೆ ಚಿಕ್ಕವರಿರುವಾಗ ನಾನು ಕೀಟಲೆ ಮಾಡತೊಡಗಿದರೆ ನೀನೂ ಪಾರ್ವತಿಯೂ ಹೆದರಿ ನಾನು ಕೇಳುವುದನ್ನು ಕೊಡುತ್ತಿದ್ದಿರಿ.

ನೆನಪಿದೆಯೆ ನಲಿನಿ! – ಆಗಿನ ಆಟ, ತಮಾಷೆ, ಆಗಿನ ನಗು ಎಲ್ಲಾ! ಆಗ ನಾವು ಶಾಲೆಯ ಹಿಂದಿನ ದಿಣ್ಣೆಯ ಮೇಲೆ ಕುಳಿತು ನಮ್ಮ ಮುಂದಿನ ಜೀವನವನ್ನು ಚಿತ್ರಿಸಿಕೊಳ್ಳುತ್ತಿದ್ದುದು! ನಾವು ಕಲ್ಪಿಸಿ, ನೋಡಿ, ನಲಿಯುತ್ತಿದ್ದ ಹಗಲುಗನಸುಗಳ ಸ್ಮೃತಿ! ಆಗ ನಾವು ಜೀವನವು ಸುಖಸಂತೋಷಮಯ ಎಂದು ತಿಳಿದಿದ್ದೆವಲ್ಲ, ನಲಿನಿ! ಈಗ ನಮ್ಮಲ್ಲೆಷ್ಟು ಜನರು ಆ ಭಾವನೆಯನ್ನು ಬದಲಾಯಿಸಬೇಕಾಗಿ ಬಂದಿದೆ ನೋಡು! ನಮ್ಮ ಗೆಳತಿ ಸೀತೆಯನ್ನು ನೋಡು—ಅವಳು ಬಯಸುತ್ತಿದ್ದ ಬಯಕೆಗಳೆಲ್ಲಿ? ಈಗವಳನುಭವಿಸುತ್ತಿರುವ ಯಾತನೆಗಳೆಲ್ಲಿ! ನಾವೆಂದಾದರೂ ಅವಳ ಗತಿ ಹೀಗಾಗಬಹುದೆಂದು ಎಣಿಸಿದ್ದೇವೇ? ಕ್ಲಾಸಿನಲ್ಲಿ ಹುಚ್ಚಿ ಎಂದು ನಾವು ಹಾಸ್ಯ ಮಾಡುತ್ತಿದ್ದ ಉಮಾ ಈಗ ನೋಡು— ದೊಡ್ಡ ಸಮಾಜಸುಧಾರಕಳಾಗಿ ಬಿಟ್ಟಿ ದ್ದಾಳೆ. ಅವಳ ಮಾತುಗಳನ್ನು ಕೇಳಲು ಜನರು ಹಾತೊರೆಯುವುದನ್ನು ನೋಡಿದರೆ ಅಂದಿನ ಉಮಾ ಇವಳೇನು? ಎನ್ನಿಸುತ್ತದೆ ಮದುವೆಯಾಗುವದೇ ಇಲ್ಲ' ಎನ್ನುತ್ತಿದ್ದ ಶಾಂತೆಗೆ ಈಗ ಇಬ್ಬರು ಮಕ್ಕಳಿದ್ದಾರೆ. ಕ್ಲಾಸಿನಲ್ಲಿ ಮೊದಲನೆಯವಳಾಗಿ ಬುದ್ಧಿವಂತೆ ಎನ್ನಿಸಿಕೊಳ್ಳುತ್ತಿದ್ದ ಕಮಲೆಗೆ ಅತ್ತೆಯ ಮನೆಯಲ್ಲಿ ದಡ್ಡಿ, ಮಾದೇವಿ ಎಂದು ಬಿರುದುಗಳು ಬಂದಿವೆ.

ಇವೆಲ್ಲವುಗಳಿಗಿಂತಲೂ ವಿಷಾದಕರವಾದ ಇನ್ನೊಂದು ಸುದ್ದಿ ಇದೆ ನಲಿನಾ— ಅದೂ ನಮ್ಮ ಪ್ರೀತಿಯ ಪಾರ್ವತಿಯ ವಿಷಯ—ಹೇಗದನ್ನು ಬರೆಯಲಿ ಹೇಳು?

ಸೌಂದರ್ಯ ಗುಣ ನಡತೆಗಳಲ್ಲಿ ನಮ್ಮೆಲ್ಲರ ಮೆಚ್ಚಿಕೆಯನ್ನು ಪಡೆದಿದ್ದ ಪಾರ್ವತಿ ವಿಧವೆಯಾದದ್ದೂ, ನಾಗೇಶರಾಯನ ಮನೆಯಲ್ಲಿ ಕೆಲಸ ಮಾಡಿಕೊಂಡಿ ದ್ದುದೂ ನಿನಗೆ ಗೊತ್ತಿದೆ. ಅವಳ ಭವಿಷ್ಯವನ್ನು ನಾವು ಚಿತ್ರಿಸಿದಂತೆ ಇನ್ನಾರದನ್ನು ಚಿತ್ರಿಸಿದ್ದೆವು, ನಲಿನಾ! 'ನಮ್ಮ ಸುಂದರಿ, ರಾಜನ ರಾಣಿ— ಕಿರೀಟಧಾರಿಣಿ ಯಾಗುವಳೆಂದು ಹೇಳಿಕೊಂಡು ನಾವು ನಲಿಯುತ್ತಿದ್ದೆವಲ್ಲ! ಅವಳೀಗ ಜಾತಿಯಿಂದ ಬಹಿಷ್ಕರಿಸಲ್ಪಟ್ಟಿರುವಳು, ನಲಿನಾ, ರಾಯರ ಪಾಪದ ಪ್ರತಿಫಲವಾಗಿ ಇದೇ ನೋಡು—ನಮ್ಮ ಸಮಾಜದ ನ್ಯಾಯ. ನಮ್ಮ ಜಾತಿ, ನೀತಿ, ಸಮಾಜ ಉತ್ತಮ

ವೆಂದು ಹೇಳಿಕೊಂಡು ನಾವೆಷ್ಟು ಸಲ ಉನ್ನೀಸಳೊಡನೆ ಜಗಳವಾಡಿಲ್ಲ! ಮುಸಲ್ಮಾನ ಜಾತಿಯವಳೆಂದು ಉನ್ನೀಸಳನ್ನು ಎಷ್ಟು ತಿರಸ್ಕರಿಸಿಲ್ಲ! ಊರು ತುಂಬ ನಮ್ಮವರ ಮನೆಗಳಿದ್ದು ಪಾರ್ವತಿಗೆ ಬಾಗಿಲನ್ನು ತೆರೆಯುವವರಿರಲಿಲ್ಲ! ನಮ್ಮವರ ಹೃದಯದಲ್ಲಿ ಜಾತಿಗಲ್ಲದೆ ದಯೆಗೆ ಎಡೆಯಿಲ್ಲವಲ್ಲ! ಆ ಜಾತಿ ನಿಯಮಗಳೂ ಹೆಂಗಸರಿಗೆ ಮಾತ್ರ! ಗಂಡಸರು ಆ ನಿಯಮಕ್ಕೆ ಒಳಪಡಬೇಕಾಗಿಲ್ಲ. ಇದೇ ನೋಡು ನಮ್ಮ ಜಾತಿಯ ದೊಡ್ಡತನದ ಕುರುಹು.

ಉತ್ತಮ, ಅತ್ಯುತ್ತಮ ಜಾತಿಯ ನಮ್ಮವರು ಪಾರ್ವತಿಗೆ ಅವಳ ಮುದ್ದು ಮಗುವಿನೊಡನೆ ಬಾವಿಯ ದಾರಿಯನ್ನು ತೋರಿಸಿಕೊಟ್ಟಾಗ ಕೈಹಿಡಿದು ಆದರದಿಂದ ಆಶ್ರಯವಿತ್ತವಳು ಯಾರು ಗೊತ್ತೇ? ಉನ್ನೀಸ! ಮ್ಲೇಂಛಳೆಂದು ನಾವು ನಕ್ಕು ತಿರಸ್ಕರಿಸುತ್ತಿದ್ದ ಉನ್ನೀಸ! ಈಗ ಹೇಳು, ನಲಿನಾ, ಉತ್ತಮರು ಯಾರೆಂದು?

ಊರವರೆಲ್ಲರೂ ಪಾರ್ವತಿಯನ್ನು ಮುಸಲ್ಮಾನ ಜಾತಿಗೆ ಸೇರಿದವಳೆಂದು ತಿರಸ್ಕರಿಸುತ್ತಿರುವರು. ಮೊದಲೇ ನಮಗೆ ಅವಳು ಹಾಗಾಗುವಳೆಂದು ಗೊತ್ತಿತ್ತು ಎನ್ನುವರು. ಇಷ್ಟೆಲ್ಲಾ ತಿಳಿದವರು, ಅವಳು ಹಾಗಾಗದಿರುವಂತೆ ಮಾಡಲು ಯಾವ ಯತ್ನವನ್ನೂ ಮಾಡಿಲ್ಲವೇಕೆ?— ಎಂದು ನಾನು ಕೇಳಿದೆ. ಅದಕ್ಕಾಗಿ ಪಾರ್ವತಿಯ ಪಕ್ಷದವಳೆಂದು ನೀರಿಗೆ ಹೋದಲ್ಲಿ ಎಂದಿನಂತೆ ನೆರೆಕೆರೆಯವರು ನನ್ನೊಡನೆ ಮಾತಾಡುವುದಿಲ್ಲ

ಅಪರಾಧಿ ಯಾರು ನಲಿನಾ? ಪಾರ್ವತಿ ರಜಿಯಾ ಆಗುವುದಕ್ಕೆ ಹೊಣೆ ಯಾರು? ಅವಳೇ? ರಾಯರೇ? ಅಥವಾ ನಮ್ಮ ಕ್ರೂರ ಕಠೋರ ಸಮಾಜವೇ?

ಯಾರಾದರೇನು? ಆದುದಾಗಿ ಬಿಟ್ಟಿತು ಪಾರ್ವತಿಯಾಗಿ ಅವಳು ಸುಖದಲ್ಲಿರಲಿಲ್ಲ. ರಜಿಯಾ ಆಗಿಯಾದರೂ ಅವಳ ಜೀವನವು ಸುಖಮಯವಾಗಲೆಂದು ದೇವರಲ್ಲಿ ನನ್ನ ಬೇಡಿಕೆ.

ಸಾಕು; ಇನ್ನೇನು ಬರೆಯಲಿ—

ನಿನ್ನ,
ಲಕ್ಷ್ಮಿ.

ತಾರೀಖು ೮ರ ಸ್ಥಳಿಕ ಪತ್ರಿಕೆಯೊಂದರಲ್ಲಿ ಹೀಗಿತ್ತು.

ಮೊನ್ನೆ ದಿನ ಹಿಂದೂ— ರಮಣಿಯೊಬ್ಬಳು ಮುಸಲ್ಮಾನ ಧರ್ಮ ಸ್ವೀಕರಿಸಿದುದು ಊರಿನ ಹಿಂದುಗಳಿಗೆಲ್ಲ ಬಹಳ ವಿಷಾದವನ್ನುಂಟುಮಾಡಿದೆ. ಇನ್ನು ಮುಂದೆ ಈ ರೀತಿ ಸಂಭವಿಸದಂತೆ ನೋಡಿಕೊಳ್ಳುವುದಕ್ಕಾಗಿ ಊರಿನ ಪ್ರಮುಖ ಹಿಂದುಗಳ ಸಭೆಯೊಂದು ಶ್ರೀಮಾನ್ ನಾಗೇಶರಾಯರ ಅಧ್ಯಕ್ಷತೆಯಲ್ಲಿ ನಡೆಯಿತು. ಸಭೆಯಲ್ಲಿ ಸರ್ವಾನುಮತದಿಂದ ಹಿಂದೂ ಧರ್ಮರಕ್ಷಣೆ ಮಾಡಬೇಕೆಂದು ತೀರ್ಮಾನ

ಗೌರಮ್ಮ
(ಕಂಬನಿ ಎಂಬ ಕಥಾಸಂಗ್ರಹದಿಂದ)

# ಅಭ್ಯಸನಗಳು

**ಪ್ರಶ್ನೆಗಳು:—**

೧) ಪಾರ್ವತಿಯು ಅಡುಗೆಯವಳಾಗಿ ನಿಲ್ಲುವ ಕಾರಣವೇನು ?

೧) ಉನ್ನೀಸಳು ಅವಳಿಗೆ ಆಶ್ರಯವನ್ನೇಕೆ ಕೊಟ್ಟಳು ?

೩) ಸೀತಮ್ಮನವರಿಗೆ ಕಾಗದ ಬರೆದವಳ ಮನಸ್ಸು ಎಂತಹದಿರಬೇಕು? ಅವಳ ಹೆಸರನ್ನೇಕೆ ಹಾಕಿಲ್ಲ ?

೪) ಪಾರ್ವತಿಯ ಸ್ಥಿತಿಯನ್ನು ನೋಡಿ ಲಕ್ಷ್ಮಿಯಲ್ಲಿ ತನ್ನ ಸಮಾಜದ ಬಗೆಗೆ ಯಾವ ಭಾವನೆ ಹುಟ್ಟಿದೆ ?

೫) ಕತೆಯ ಮುಗಿತಾಯದ ಔಚಿತ್ಯವೇನು ?

**ಭಾಷಾಭ್ಯಾಸ:—**

೧) ಈ ಮೂರು ಪತ್ರಗಳಲ್ಲಿಯ ಶೈಲಿಯು ಮತ್ತು ಬರೆದವರ ಸ್ವಭಾವ ಇವೆರಡೂ ಮಾರ್ಮಿಕವಾಗಿ ಹೊಂದಿಕೊಂಡಿವೆ. ಉನ್ನೀಸಳ ಕರುಣೆ ಅವಳ ಶೈಲಿಯಲ್ಲಿ ಹೇಗೆ ವ್ಯಕ್ತವಾಗಿದೆ ಎಂಬುದನ್ನು ಹೇಳಿರಿ. ಇನ್ನೊಬ್ಬರು ದುಃಖದಲ್ಲಿದ್ದಾಗ ಕಂಡು ಹಿಗ್ಗುವ ಹೀನ ಮನೋವೃತ್ತಿಯು ಎರಡನೆಯ ಪತ್ರದಲ್ಲಿ ಹೇಗೆ ವ್ಯಕ್ತವಾಗಿದೆ, ಎಂಬುದನ್ನು ಕಂಡುಹಿಡಿಯಿರಿ.

ಅನೇಕ ದಿನಗಳಲ್ಲಿ ಪತ್ರ ಬರೆಯದವಳು ಈಗಲೂ ಬಿಡುವು ಇಲ್ಲವೆಂದು ಹೇಳಿ ಬರೆಯುತ್ತಿರುವ ಸುದ್ದಿ ಯಾವುದು? ಎರಡನೆಯ ವಾಕ್ಯವೃಂದದಲ್ಲಿ ಅವಳ ಕ್ಷುದ್ರ ದೃಷ್ಟಿ ಹೇಗೆ ವ್ಯಕ್ತವಾಗುತ್ತಿದೆ ಎಂಬುದನ್ನು ನೋಡಿರಿ.

ಮೂರನೆಯ ಪತ್ರದಲ್ಲಿ ಸುಸಂಸ್ಕೃತ ಹೃದಯದ ಮಿಡಿತವು ಚಿತ್ರಿತವಾಗಿದೆ. ಅವಳ ಮನಸ್ಸಿನ ಉದಾತ್ತ ಭಾವನೆಗಳನ್ನು ವಿವರಿಸುವ ವಾಕ್ಯಗಳನ್ನು ಹೇಳಿರಿ.

೨) ಸ್ಪಷ್ಟೀಕರಿಸಿರಿ.

(ಅ) ಸಮ್ಮನವರ ಹೃದಯದಲ್ಲಿ ಜಾತಿಗಲ್ಲದೆ ದಯೆಗೆ ಎಡೆಯಿಲ್ಲ.

(ಬ) ಉನ್ನೀಸ! ಪ್ಲೆಂಛಳೆಂದು ನಾವು ನಕ್ಕು ತಿರಸ್ಕರಿಸುತ್ತಿದ್ದ ಉನ್ನೀಸ! ಈಗ ಹೇಳು ನಲಿನಾ. ಉತ್ತಮರು ಯಾರೆಂದು.

**ಶಬ್ದ ವಿಚಾರ:—**

'ಕೇಡಿ' ಪ್ರತ್ಯಯವನ್ನು ಹಚ್ಚಿ ಮಾನಗೇಡಿ, ಕುಲಗೇಡಿ ಇತ್ಯಾದಿ ಐದು ಶಬ್ದಗಳನ್ನು ಸಿದ್ಧಪಡಿಸಿರಿ.

ದಾರಿ—ತೋರು;—ಕಾಯು;—ಹಿಡಿ;—ಬಿಡು ಇವುಗಳನ್ನು ಅರಿಯಿರಿ.

**ವಾಕ್-ಶಿಕ್ಷಣ:—**

ಶ್ರೀ ಶಂ. ಬಾ. ಜೋಶಿ ಅವರು ಬರೆದ 'ಯಕ್ಷಪ್ರಶ್ನೆ' ಎಂಬ ಪುಸ್ತಕದಲ್ಲಿ ಪುಟ ೧೨ ರಲ್ಲಿ ಕೊಟ್ಟ ಪ್ರಶ್ನೆಗಳನ್ನು ಓದಿ ಉತ್ತರ ಕೊಡಿರಿ.

**ಚರ್ಚೆ:—**

೧) ಪಾರ್ವತಿಯು ರಜಿಯಾ ಆದುದು ಯುಕ್ತವೆ?

**ಬರಹ:—**

೧) ಹಿಂದೂ ಸ್ತ್ರೀಯರಿಗೆ ಪಾರ್ವತಿಯಂತಹ ಸ್ಥಿತಿಯು ಬರಬಾರದಾಗಿದ್ದರೆ ನಮ್ಮ ಸಮಾಜದಲ್ಲಿ ಆಗಬೇಕಾದ ಸುಧಾರಣೆಗಳು ಯಾವುವು, ಎಂಬುದನ್ನು ಕುರಿತು ಬರೆಯಿರಿ.

# ೭. ವೈಣಿಕ-ಶಿಖಾಮಣಿ ಶೇಷಣ್ಣನವರು

[ಕರ್ನಾಟಕದ ಕೀರ್ತಿಯನ್ನು ಭಾರತದ ಇನ್ನುಳಿದ ಪ್ರಾಂತಗಳಲ್ಲಿಯೂ ಸಾರಿ ಎಲ್ಲರಿಂದ ಮನ್ನಣೆ ಪಡೆದ ವೀಣೆಯ ಶೇಷಣ್ಣನವರ ಪುಣ್ಯಸ್ಮರಣವು ಅನಂತ ಕಾಲವೂ ತರುಣರಿಗೆಲ್ಲ ಉದಾತ್ತ ಆದರ್ಶ ಸ್ಫೂರ್ತಿಯನ್ನು ನೀಡುವಂತಹದಾಗಿದೆ. ಕೀರ್ತಿಶೇಷ ವೈಣಿಕ-ಶಿಖಾಮಣಿಗಳ ಹೆಸರು ಭಾರತದ ಸಂಗೀತದ ಅರ್ವಾಚೀನ ಇತಿಹಾಸದಲ್ಲಿ ಅಜರಾಮರವಾಗಿ ನಿಂತಿದೆ.]

ನಾನು ಕಂಡ ಸಂಗೀತ ವಿದ್ವಾಂಸರುಗಳಲ್ಲೆಲ್ಲಾ ಕೀರ್ತಿಶೇಷರಾದ ವೀಣೆ ಶೇಷಣ್ಣನವರೂ ಬಿಡಾರದ ಕೃಷ್ಣಪ್ಪನವರೂ ಮಹಾಪುರುಷರು. ಶೇಷಣ್ಣನವರು 'ವೈಣಿಕ-ಶಿಖಾಮಣಿ' ಎಂದು ಮೈಸೂರ ಅರಮನೆಯ ದರ್ಬಾರಿನಲ್ಲಿ ಬಿರುದನ್ನು ಗಳಿಸಿದವರು. ಈ ಬಿರುದು 'ರಾವಬಹಾದ್ದೂರ' ಮುಂತಾದವುಗಳ ಹಾಗೆ ಬರೀ ಸಂಕೇತವಾಗದೆ ಅವರ ವಿಷಯದಲ್ಲಿ ಸಾರ್ಥಕವಾಗಿದ್ದಿತು.



ಶ್ರೀ. ವೀಣೆ ಶೇಷಣ್ಣನವರು

ಇವರು ಲಾಕ್ಷಣಿಕರಲ್ಲ; ಎಂದರೆ ಸಂಗೀತ ಲಕ್ಷಣ ಗ್ರಂಥಗಳನ್ನು ಬಾಯಿಪಾಠ ಮಾಡಿ ಪ್ರತಿ ವಿಷಯಕ್ಕೂ ಒಂದು ಶ್ಲೋಕವನ್ನುದಾಹರಿಸಬಲ್ಲವರಲ್ಲ. ಅವರು ಕಲಿತದ್ದು, ಸಾಧಿಸಿದ್ದು ಶಬ್ದಾರ್ಥ ವಿದ್ಯೆಯಲ್ಲ, ನಾದಲಯವಿದ್ಯೆ. ಇವರಿಗೆ ಸರ್ವಸಾಮಾನ್ಯವಾದ ಕನ್ನಡದ ಓದು ಬರಹಗಳ ಮಟ್ಟವೂ ಬಹಳ ಸಾಮಾನ್ಯವಾಗಿತ್ತು. ಪ್ರಾಯಿಕವಾಗಿ ಸಂಸ್ಕೃತ ಭಾಷೆಯಲ್ಲೇ ಬರೆದ ಲಕ್ಷಣ ಗ್ರಂಥಗಳೆಲ್ಲಾ ಇವರ ಪಾಲಿಗೆ ಇಲ್ಲದ ಹಾಗೆಯೇ ಆಗಿದ್ದವು. ಆದ್ದರಿಂದಲೇ ಚಾರಿತ್ರಿಕವಾಗಿ ಸಂಗೀತ ವಿದ್ಯೆಯಲ್ಲಿ ಉಂಟಾದ ಏರಿಳಿತಗಳೂ ಮಾರ್ಪಾಡುಗಳೂ ಇವರಿಗೆ ತಿಳಿದಿರಲಿಲ್ಲ. ಅವರು ಅರಿತದ್ದೆಲ್ಲಾ ಸಮಕಾಲಿಕವಾದ ಸಂಗೀತ ಲಕ್ಷಣವೇ. ಅದಕ್ಕನುಸಾರವಾಗಿ ವೀಣೆ ಬಾರಿಸುವುದಕ್ಕೆ ಅವರು ತಮ್ಮ ಜೀವಮಾನದ ಪ್ರತಿನಿಮಿಷವನ್ನೂ ವೆಚ್ಚಮಾಡಿದವರು. ಸಮಕಾಲದಲ್ಲಿ ಈ ಮಟ್ಟದವರು ಮತ್ತೊಬ್ಬರಿಲ್ಲ ಎಂಬ ಪ್ರಖ್ಯಾತಿಯನ್ನೂ ಗೌರವವನ್ನೂ ಗಳಿಸಿದ್ದ ಧನ್ಯಜೀವಿಗಳು.

ಇವರ ಕಾಲದಲ್ಲಿ ಎಂದರೆ ಇಪ್ಪತ್ತನೆಯ ಶತಮಾನದ ಪೂರ್ವಭಾಗದಲ್ಲಿ

ಗ್ರಂಥಗಳು ಹೊರಬೀಳದೆ ಯಾವ ಯಾವ ಮೂಲೆಯಲ್ಲೊ ಅಡಗಿದ್ದವು. ಸಂಗೀತಕ್ಕೆ ಸಂಬಂಧಪಟ್ಟ ಸಾಮಾನ್ಯ ವಿಷಯಗಳನ್ನೂ ಕೂಡ ಪರಮಪವಿತ್ರವಾದ ರಹಸ್ಯಗಳಂತೆ ವಿದ್ವಾಂಸರು ಬಚ್ಚಿಟ್ಟುಕೊಳ್ಳುತ್ತಿದ್ದರು. ಹನ್ನೆರಡು ವರುಷ ಗುರುಕುಲವಾಸ ಮಾಡಿದ ಹೊರತು ಇಂಥಾ ರಹಸ್ಯಗಳು ತಿಳಿಯಲಾಗುವುದಿಲ್ಲ ಎಂದು ಆಗ ಹೇಳುವುದು ವಾಡಿಕೆಯಾಗಿತ್ತು.

ಶ್ರೀ. ಶೇಷಣ್ಣನವರು ಬಹಳವಾಗಿ ವಿಸ್ತರಿಸುತ್ತಿದ್ದ ರಾಗಗಳು ಶಂಕರಾಭರಣ, ಕಲ್ಯಾಣಿ, ಭೈರವಿ, ಕಾಂಬೋದಿ ಮುಂತಾದುವು. ಆಹಿರಿ, ಹುಸೇನಿ ಮೊದಲಾದ ದೇಶೀಯ ಮಿಶ್ರ ರಾಗಗಳ ಕೀರ್ತನೆಗಳನ್ನು ಅಪರೂಪವಾಗಿ ಅವರಿಂದ ಕೇಳಿದ್ದೇವೆ. ಯಾದರೂ ಆ ರಾಗಗಳ ವಿಸ್ತರಣವನ್ನು ಕೇಳಿಲ್ಲ. ಒಂದು ಸಲ ಶೇಷಣ್ಣನವರನ್ನು ಹುಸೇನಿ ರಾಗವನ್ನು ಬಾರಿಸಬೇಕಾಗಿ ಪ್ರಾರ್ಥಿಸಿದೆ. 'ನನ್ನನ್ನು ಪರೀಕ್ಷೆ ಮಾಡುತ್ತೀಯಾ?' ಎಂದು ಸ್ವಲ್ಪ ಅತೃಪ್ತಿಯ ಸೂಚಕವಾಗಿ ನಗುತ್ತ ಅವರು ವಿಸ್ತಾರವಾಗಿಯೇ ಆ ರಾಗವನ್ನು ಬಾರಿಸಿದರು. ಆದರೆ ನನಗೆ ಬಾರಿಸುವಿಕೆಯಲ್ಲಿ ಶೇಷಣ್ಣನವರ ಸಹಜವಾದ ಅಪಾರ ಪ್ರತಿಭೆಯೇನೂ ಗೋಚರವಾಗಲಿಲ್ಲ. ಸಂಗೀತ ಸಂಗ್ರಾಮಗಳಲ್ಲಿ ಅವರು ಸಾಧಿಸಿದ ಗೆಲವೂ ಗೌರವವೂ ಚತುರಸ್ರದ ನಡೆಯ ಆದಿ, ರೂಪಕ, ತ್ರಿಪುಟೆಗಳಂತಹ ಮೂರು ನಾಲ್ಕು ಪ್ರಸಿದ್ಧ ತಾಳಗಳಿಂದಲೇ ಆಗಿವೆ. ಅವರು ಬಾರಿಸುತ್ತಿದ್ದ ಹಾಡುಗಳು ಮುಖ್ಯವಾಗಿ ತ್ಯಾಗಯ್ಯನವರೂ, ಅವರ ಶಿಷ್ಯ ಪರಂಪರೆಯವರೂ ರಚಿಸಿದುವು. ದೀಕ್ಷಿತರ, ಶಾಸ್ತ್ರಿಗಳ ರಚನೆಗಳನ್ನು ಅಪರೂಪವಾಗಿ ಬಳಸುವುದುಂಟು. ಇಕ್ಕ ಪ್ರಾಚೀನ ಪ್ರಬಂಧ, ದಾಯ, ಸುಳಾದಿ ಮುಂತಾದವುಗಳನ್ನು ಅವರು ಬಾರಿಸಿದುದನ್ನು ನಾನು ಕೇಳಿಲ್ಲ. ಶೇಷಣ್ಣನವರು ಸ್ವಂತ ರಚನೆಗಳಿಂದ 'ತಿಲ್ಲಾನಾ'ಗಳನ್ನು ಧಾರಾಳವಾಗಿ ಕೈಯಾಡುತ್ತಿದ್ದರು.

ಇದಿಷ್ಟು ಇವರ ರಚನಾಪ್ರಪಂಚದ ಮೂಲ ದ್ರವ್ಯ. ಎಂದ ಮಾತ್ರಕ್ಕೆ ಅವರು ಅಲ್ಪ ವ್ಯಕ್ತಿಗಳೆಂದು ನಾವು ಭಾವಿಸಿದರೆ, ಅದು ಮಹಾಪರಾಧವಾಗುವುದು. ಈ ಮೂಲ ದ್ರವ್ಯಗಳಿಂದ ಅವರು ಕಲ್ಪಿಸಿದ ಕಲ್ಪನೆಗಳೂ ಸಾಧಿಸಿದ ಸಿದ್ಧಿಗಳೂ ಅದ್ಭುತವಾದುವು; ಅನೇಕರಿಗೆ ಅಸಾಧ್ಯವಾದುವು.

ಶೇಷಣ್ಣನವರು ರಸಿಕರು, ಸುಕುಮಾರರು. ಬಹಳ ಚುರುಕಾದ, ಕದಡಿಲ್ಲದ ಮಿದುಳು; ಮರವರಿಯದ ಮೇಧೆ. ಆರಾಧಿಸಿದ್ದು ವೀಣೆಯಾದರೂ, ಕೈಗೆ ಯಾವ ವಾದ್ಯ ದೊರೆತರೂ ನಾಲ್ಕು ದಿನಗಳಲ್ಲಿ ಅದನ್ನು ಎಳೆದು ಹಿಡಿಯಬಲ್ಲ ಪ್ರಜ್ಞೆ, ಹಠ ಅವರದು. ಈ ಶಕ್ತಿಯನ್ನು ಮತ್ತಾರಲ್ಲೂ ನಾನು ಕಂಡಿಲ್ಲ. ಪಿಟೀಲು, ಪಿಯಾನೊ, ಜಲತರಂಗ, ಸ್ವರಬತ್ತು, ಹಾರ್ಮೋನಿಯಂ ಮುಂತಾದ ಹಲವು ವಾದ್ಯಗಳು ಅವರಿಗೆ ಸ್ವಾಧೀನ. ತನ್ನ ಸಂಗೀತದ ಮೊದಲನೇ ಗುರುಗಳಾದ ಶ್ರೀ. ಕಂಗಿರಿ ರಾಯರು 'ನಮ್ಮ ಶೇಷಣ್ಣನ ಕೈಗೆ ಒಂದು ಕೊಳೆ, ಸೇದೋ ಹಗ್ಗ ಕೊಟ್ಟರೆ

ಕೇಳಬೇಡಿ)' ಎಂದು ಹೇಳುತ್ತಿದ್ದರು ವೀಣೆ ಅವರ ಪಾಲಿನ ದೇವತೆ; ತಪಸ್ಸೆಂಬ ಭಾವದಿಂದ ಯಾವ ಕೆಲಸ ಮಾಡಿದ ಯಾರಿಗಾಗಲಿ ಯಾವ ವಸ್ತುವಿನಲ್ಲೂ ಈಶ್ವರನ ಅಮೇಯುತಾ ಸ್ವರೂಪ ಮನದಟ್ಟಾಗುವುದು. ಶೇಷಣ್ಣನವರ ಮೇಲ್ಕಂಡ ಭಾವ ಅವರ ತಪಸ್ಸಿನ ಆಳವನ್ನು ಸೂಚಿಸುವುದು. ಅವರ ಉಗುರಿನಿಂದ ಕಠಿಣ ವಾದ ಒಂದು ಮಾಟಾಗಲಿ ಕೇಳಿದವರಿಲ್ಲ. ಆದರೂ ನಾದದಲ್ಲಿ 'ಸಂಚು' ಯಾವಾ ಗಲೂ ಇಲ್ಲ. ಕಲ್ಪನೆಗಳು ಎಷ್ಟು ಕಠಿಣವಾಗಿದ್ದರೂ ಕೇಳುವವರಿಗೆ ಸುಕುಮಾರ ವಾಗಿಯೇ ತೋರುವಂತೆ ಮಾಡುವ ಇಂದ್ರಜಾಲ ಅವರದು. ಎಷ್ಟು ದೊಡ್ಡದಾದರೂ ವೀಣೆಯೊಡನೆ ಅವರಾಡಿದ್ದು ಆಟವೇ ಹೊರತು ಜಗಳವಲ್ಲ; ಕೆಲಸ ಬಹಳ ಕಷ್ಟ ವಾದದ್ದೆಂದು ಮಾತ್ರ ತೋರಿಸಿ ಅವರು ಬಿಡಲಿಲ್ಲ. ಕಷ್ಟಕ್ಕೆ ಫಲವು ಸುಖವೇ ಆಗಬೇಕೆಂದು ಅವರು ನಂಬಿ ತೋರಿಸಿದವರು. ಅವರ ಕಚೇರಿ ಮೂರು ನಾಲ್ಕು ಘಂಟೆಗಳ ಕಾಲ ನಡೆದರೂ ಅದರಲ್ಲಿ ಮೂರು ಪಾಲು ಸ್ವತಂತ್ರವಾದ ರಾಗ, ತಾನ, ಪಲ್ಲವಿ, ಸ್ವರ, ರಚನೆ ಇವುಗಳಿಂದ ತುಂಬಿರುತ್ತಿತ್ತು. ಅವರು ವರ್ಣ ಬಾರಿಸಿದು ದನ್ನು ನಾನು ಕೇಳಿಲ್ಲ. ಮೊತ್ತದಲ್ಲಿ ಸುಮಾರು ಹತ್ತು ಹನ್ನೆರಡು ಕೀರ್ತನೆಗಳ ಗಿಂತ ಹೆಚ್ಚಾಗಿ ಅವರ ಕೈಯಲ್ಲಿ ಯಾರಾದರೂ ಕೇಳಿದ್ದಾರೆಯೋ ಏನೋ ನನಗೆ ತಿಳಿಯದು. ಅವರಿಗೆ ಕೀರ್ತನೆ, ವರ್ಣ ಮುಂತಾದವು ಲೆಕ್ಕವಿಲ್ಲದೆ ಅಭ್ಯಸ್ತವಾಗಿ ದ್ದವು. ಆದರೆ ಕಚೇರಿಗಳಲ್ಲಿ ಕೈ ಬಿಸಿಯೇರುವುದಕ್ಕೆ ಮಾತ್ರ ಅವುಗಳನ್ನು ಉಪ ಯೋಗಿಸುತ್ತಿದ್ದರು. ಅಮೇಲೆ ಎಲ್ಲಾ ಸ್ವತಂತ್ರ ಕಲ್ಪನೆಗೆ ಅವಕಾಶ ಕೊಡುವ ಹೆದ್ದಾರಿ. ಪದಗಳು, ಜಾವಳಿಗಳು ಮುಂತಾದವುಗಳನ್ನವರು ಕೈಯಾಡುತ್ತಿರ ಲಿಲ್ಲ. ಕಚೇರಿಯ ತುದಿಯಲ್ಲಿ ಬಹಳ ಪ್ರೀತಿಯಿಂದ ಅವರು ಬಾರಿಸುತ್ತಿದ್ದ ದೇಶಿ ರಾಗಗಳು, ಜಂಜೂಟಿ, ಕಾಪಿ, ಕಮಾಚು, ಬೇಹಾಗು, ಇಂಥವು. ರಾಗ, ತಾನ, ಪಲ್ಲವಿ, ಸ್ವರ—ಎಲ್ಲಾ ಹಲವು ವಿಧವಾದ ಹೂವೂ ಚಿಗುರೂ ಮಳೆ ಕರೆದಂತೆ, ಕುಕ್ಕೆಗಳಲ್ಲಿ ತುಂಬಿ ಏರಚಿದಂತೆ; ಎಣಿಸಿ ಹಾಕಿದ ಹಾಗೆ, ಅಪ್ರಯತ್ನಸಿದ್ಧವಾದ ಹಾಗೆ ನಡೆಯುತ್ತಿದ್ದವು ರಚನೆ ಎಷ್ಟು ವಿಸ್ತಾರವೊ ಅಷ್ಟು ಗಂಭೀರ, ಎಷ್ಟು ತೊಡಕಾದದ್ದೊ ಅಷ್ಟು ಸ್ಪಷ್ಟ. ಯಾವುದು ಬಾರಿಸಿದರೂ ನಗೆಮೊಗವೇ ಹೊರತು ತುಟಿ ಬಿಗಿಯುವುದು ಕೂಡಾ ಇಲ್ಲ. ನಡೆ ಎಷ್ಟು ವಿಲಂಬವಾದರೂ ದ್ರುತವಾದರೂ ಅಷ್ಟೂ ಅಚ್ಚು ಕಟ್ಟು. ಗಣಿತಪ್ರಧಾನವಾದ ಸ್ವರ 'ಪಂಚಕ'ಗಳೆಲ್ಲಾ ಮುತ್ತು ಗಳ ರಂಗೋಲಿಯ ಹಾಗೆ ಭಿನ್ನ ವ್ಯಕ್ತಿಗಳಿಂದ ಒಂದರೊಡನೆ ಮತ್ತೊಂದು ಸೇರಿ ಮೇಳೈಸುತ್ತಿದ್ದುವು. ವೃದ್ಧ ವಯಸ್ಸಿನಲ್ಲಿ ಹಲವು ಸಲ ತಮ್ಮ ಕೈಯ ನಾದಲಯಾ ನಂದಕ್ಕೆ ತಾವೇ ಸೊಕ್ಕಿ ಸೊಗಸಿ, ಧಾರೆಯಾಗಿ ಕಣ್ಣೀರು ಬಿಡುತ್ತ, ಸ್ವಲ್ಪ ಹೊತ್ತು ಬಾರಿಸುವುದನ್ನೆ ನಿಲ್ಲಿಸಿಬಿಡುತ್ತಿದ್ದರು. ಅವರ ಸಂಗೀತ ಪ್ರತಿಭೆಗೆ ಸ್ವಲ್ಪ ಮಾತ್ರ ಸಾಕ್ಷಿಗಳಾಗಿ ಅವರ ವರ್ಣ–ತಿಲ್ಲಾನಾ ರಚನೆಗಳು ಹಲವಾರು ಇವೆ.

ಮಹಾರಾಜರಿದ್ದ ಸ್ಥಳಗಳಿಗೆ ಮೇನಾ ಪಲ್ಲಕ್ಕಿಗಳಲ್ಲಿ ಕುರಿತು ಸಂಚರಿಸಿದರು. ತಾವು ಕೈಹಾಕಿದ ವೀಣಾವಾದ್ಯದ ಮೇಲೆ ತಮ್ಮ ಎದುರಿಗೆ ಇತರರು ಕೈಹಾಕಲಾಗದಂತೆ, ಸೀಮೆಸೀಮೆಯಲ್ಲೂ ಸಿಂಹಸ್ವಪ್ನವಾಗಿ ತಿರುಗಿದರು. ವೈಣಿಕಶಿಖಾಮಣಿ ಎಂಬ ಬಿರುದನ್ನು ದಕ್ಕಿಸಿಕೊಂಡರು. ವಾದ್ಯಗಳಲ್ಲೆಲ್ಲ ಸೂಕ್ಷ್ಮತಮ ನಾದವುಳ್ಳದ್ದು ವೀಣೆ; ಅದನ್ನು ಕೈಯಲ್ಲಿ ಹಿಡಿದುಕೊಂಡು, ಮೂರುನಾಲ್ಕುಸಾವಿರ ಸಭ್ಯರನ್ನಾದರೂ ಮೂಕ ಬೊಂಬೆಗಳಂತೆ ಕೂರಿಸಿ ತಲೆಯಾಡಿಸುವಂತೆ ಮಾಡುವ ವಿಚಿತ್ರಶಕ್ತಿ ಅವರದು. ಎಂಥ ವಿದ್ವಾಂಸನಾದರೂ ಸಭೆಯಲ್ಲಿ ಹಾಡುತ್ತಿರಲಿ, ಅವರು ಬಂದರೆಂದರೆ ಎದ್ದು ನಮಸ್ಕರಿಸತಕ್ಕದ್ದೆ! ಎಷ್ಟು ಜನರು 'ಭಲೆ' ಎಂದರೂ ಶೇಷಣ್ಣನವರು ಅನ್ನುವವರೆಗೂ ಆ ಗಾಯಕನಿಗೆ ತೃಪ್ತಿಯೆಲ್ಲಿಯದು ?

ಇನ್ನು 'ಭಲೆ' ಎನ್ನುವುದರಲ್ಲಿ ಏನಾದರೂ 'ಚೌಕಶಿ' ಉಂಟೆ? ಒಂದೇ ಒಂದು ಒಳ್ಳೆಯ ಸಂಗತಿ ಬರಲಿ, ಸಭೆಯಲ್ಲಿ ಎಲ್ಲರಿಗಿಂತ ಮುಂಚೆ ಅವರ 'ಭಲೆ' ನಮಗೆ ಕೇಳಿಸುತ್ತಿತ್ತು. ಮೆತ್ತನೆಯ 'ಪಲುಕು' ಒಂದು ಕೇಳಬಂದಿತೇ, ಎಲ್ಲರಿಗಿಂತ ಅವರ ಮನಸ್ಸು ಕರಗಿ ಕಣ್ಣುಗಳಿಂದ ಹೊರಹೊರಡುವುದು. ಹೆಚ್ಚಿನ ಸಂತೋಷವಾಯಿತೆ, ಒಳಗಿನ 'ಪೆಟ್ಟಾರಿ'ಯಿಂದ ತಮಗೆ ಯಾವ ಮಹಾರಾಜನು ಕೊಟ್ಟ ಪಟ್ಟೆಯ ವಸ್ತ್ರವನ್ನೊ ಶಾಲನ್ನೊ ತರಿಸಿ ತುಂಬಿದ ಸಭೆಯಲ್ಲಿ ಆ ವಿದ್ವಾಂಸನಿಗೆ ಹೊದಿಸಿಬಿಡುವರು. ಸಿತಾರು ವಾದ್ಯವನ್ನು ನುಡಿಸುವುದರಲ್ಲಿ ಸಿಂಹವೆನಿಸಿದ ಬರಖತ್ತುಲ್ಲಾಖಾನರು ಇವರ ಮನೆಯಲ್ಲಿ 'ಪೀಲು' ರಾಗವನ್ನು ನುಡಿಸಿದಾಗ, ಶೇಷಣ್ಣನವರು ಮಾತನಾಡಲಾರದೆ ಪೆಟ್ಟಿಗೆಯಲ್ಲಿದ್ದ ಶಾಲನ್ನು ತರಿಸಿ ತಮ್ಮ ಕೈಯಾರೆ ಅತನಿಗೆ ಬಹುಮಾನ ಕೊಡುವ ವೇಳೆಯಲ್ಲಿ, ಅತನ ಮೇಲೆ ಅಭಿಷೇಕಮಾಡಿದ ಆ ಕಳಂಕವಿಲ್ಲದ ಕಣ್ಣೀರನ್ನು ನಾನೆಂದಿಗೂ ಮರೆಯಲಾರೆ! ಪರಿಶುದ್ಧವಾದ ನಮ್ಮ ಹಿಂದೂ ನಾಗರಿಕತೆಗೆ ಫಲವಾದ ಇಂಥ ಪಂಡಿತರ, ಇಂಥ ಉದಾರಹೃದಯರ ಕಾಲದಲ್ಲಿ ನಾನು ಬದುಕಿರಲಾಯಿತಲ್ಲಾ ಎಂದು ನನಗೆ ಒಂದು ಗರ್ವ. ಆ ಸಮಯದಲ್ಲಿದ್ದುದರಿಂದ ಅಂಥ ಪಾಂಡಿತ್ಯವು ನನಗೇ ಇದ್ದ ಹಾಗೆ, ಆ ಬಹುಮಾನವನ್ನು ನಾನೇ ಮಾಡಿದ ಹಾಗೆ ಒಂದು ಗರ್ವ. ಆ ಗರ್ವ ಈವರೆಗೂ ಹೋಗಿಲ್ಲ. ಅವರಿಗಿಂತ ಹೆಚ್ಚಾದ ಸಾಧನೆ ಮಾಡಿದ್ದವರಿದ್ದರು, ಇದ್ದಾರೆ. ಅವರಿಗಿಂತ ಹೆಚ್ಚಾದ ಶಾಸ್ತ್ರಜ್ಞಾನವಿರುವವರಿದ್ದಾರೆ. ಸಂಕೀರ್ಣಜಾತಿ ಧ್ರುವತಾಳದಲ್ಲಾದರೂ, ತಂತಿಗಳು ಕಡಿದು ಹೋಗುವಷ್ಟು, ಪಲ್ಲವಿಯನ್ನು ಗಂಟೆಗಳ ಕಟ್ಟಲೆ ಬಾರಿಸಿ, ಸಂಖ್ಯೆಯಿಲ್ಲದ ಸಂಗತಿಗಳಿಂದ ಸಂಗೀತವನ್ನು ಅಲ್ಲಾಡಿಸಿ ಬಿಡುವವರಿದ್ದಾರೆ. ಆದರೆ ಆ ರಸಿಕತೆಯುಳ್ಳವರಾರು ? ಆ ಆರ್ದ್ರಹೃದಯವುಳ್ಳವರಾರು? ಆ ನಾದಸೌಖ್ಯವನ್ನು ಅನುಭವಿಸುವವರಾರು? ಒಂದು ದಿನ ಅವರು ಸಭೆಯಲ್ಲಿ (ವಾದ್ಯವನ್ನು) ನುಡಿಸುತ್ತ ಕಚೇರಿಯ ಕೊನೆಯಲ್ಲಿ 'ಕಾಪೀ' ರಾಗವನ್ನು ವಿಸ್ತರಿಸುವ ವೇಳೆಯಲ್ಲಿ ತಾವೇ ಆ ಶ್ರುತಿಲಯಗಳಿಂದ, ಆ ರಾಗಮಾರ್ಗವದಿಂದ ಪರವಶರಾಗಿ, ಕೊನೆಗೆ ನುಡಿಸುವುದನ್ನು ಬಿಟ್ಟು, ಕಣ್ಣೀರು ಕರೆಯುತ್ತ ವೀಣೆಯ

ಮೇಲೆ ತಲೆಬಾಗಿಸಿ, ನಾದಸಮಾಧಿಯನ್ನನುಭವಿಸಿ 'ಇನ್ನು ನುಡಿಸಲಾರೆ; ಮುದುಕ ನನ್ನು ಕ್ಷಮಿಸಬೇಕು' ಎಂದು ನಮ್ಮನ್ನು ಬೇಡಿಕೊಂಡರು. ಆ ವಿನಯ ಬಂದಿದ್ದವರನ್ನೆಲ್ಲ ಮುಗ್ಧರನ್ನಾಗಿ ಮಾಡಿತು. ಎಂಥ 'ವಾಸನಾಪರಿಪಕ್ವಬುದ್ಧಿಯುಳ್ಳವರಾದರೂ, ಆ ಪಾರವಶ್ಯವೂ, ಆಲಯವೂ ನಮಗೆ ಬಾರದಲ್ಲಾ, ಎಂದು ನಾವೆಲ್ಲರೂ ನಾಚಿಕೆಪಟ್ಟೆವು. ಬಂದಿದ್ದವರಲ್ಲಿ ಯಾರೇ ಆಗಲಿ, ಕಡೆಗೆ ಶಾಸ್ತ್ರಾನುಸಾರವಾಗಿ ಮಾಡಬೇಕಾದ ಸಾಧುವಾದಗಳನ್ನೂ ಮಾಡಲಾರದೆ ಹೋದೆವು.

ವಾದ್ಯವನ್ನು ಇತರರು ನುಡಿಸಿದರೇನು? ತಾನು ನುಡಿಸಿದರೇನು? ನಾದವೂ ಅದರ ರಸವೂ ಪರಬ್ರಹ್ಮಸ್ವರೂಪ. ಅದರ ಸೌಖ್ಯವನ್ನರಿತು ಅನುಭವಿಸಬಲ್ಲ ಭಾಗ್ಯಶಾಲಿಗೆ, ಇತರರು ತನ್ನನ್ನು ನೋಡಿ ನಗುವರೆಂದಾಗಲಿ, ಹೊಗಳುವರೆಂದಾಗಲಿ ತೋರದು. ಭೋಗಿಯಲ್ಲಿ ಯಾವುದನ್ನು ಗರ್ವವೆಂದು ಕರೆಯುವೆವೊ, ಯೋಗಿಯಲ್ಲಿ ಅದನ್ನೇ ಮಹತ್ತ್ವವೆನ್ನುವೆವು. ಶೇಷಣ್ಣನವರು ಅಂಥಾ ಯೋಗಿಯಾಗಿದ್ದರು. ಅರವತ್ತು ಗಳಿಗೆಯೂ ಅವರಿಗೆ ವೀಣೆಯ ಚಿಂತೆಯೇ. ಭಗವಂತನು ಅವರಿಗಿತ್ತ ಅಂಗಗಳಲ್ಲಿ ಅದೂ ಒಂದು, ಅದೂ ಉತ್ತಮಾಂಗ! ಇದನ್ನು ಬಿಟ್ಟರೆ ಬೇರೆ ಪ್ರಪಂಚವೇ ಅವರ ಪಾಲಿಗಿರಲಿಲ್ಲ. ಅಲ್ಲದೆ ವೀಣೆ ಅವರಿಗೆ ಇಷ್ಟು ಸ್ವಾಧೀನವಾಗಿದೆಯೆಂದು ಅವರು ಯಾವಾಗಲೂ ಗರ್ವಪಟ್ಟವರಲ್ಲ. ಹಿಂದೆ ಮೈಸೂರಿನಲ್ಲಿ ಒಬ್ಬ ವೈಣಿಕವಿದ್ವಾಂಸನು ವೀಣೆಯನ್ನು ನುಡಿನುಡಿಸುತ್ತ ತನಗೆ ಸಂತೋಷವಾದಾಗ 'ಹಾಗೆ ನುಡಿಯೆ ಮುಂಡೇ' ಎಂದು ಹೇಳುತ್ತ ತನ್ನ ಸಾಮರ್ಥ್ಯವನ್ನು ಸಾರುತ್ತಿದ್ದನಂತೆ! ಆತನ ಪಾಲಿಗೆ ವೀಣೆ ಒಬ್ಬ ಭೋಗಪತ್ನಿ! ಶೇಷಣ್ಣನವರಿಗೆ ಹಾಗಲ್ಲ. ಅವರಿಗೆ ವೀಣೆ ಸರಸ್ವತೀದೇವಿ. 'ನಮ್ಮ ಶಕ್ತಿಯಿದ್ದಷ್ಟು ನುಡಿಸುವೆವಲ್ಲದೆ, ವೀಣೆಯ ಶಕ್ತಿಗೆ ತಕ್ಕಂತೆ ನುಡಿಸಬಲ್ಲ ಪುರುಷನು ಹುಟ್ಟಲಿಲ್ಲ'ವೆಂದು ಅವರು ಅನೇಕ ವೇಳೆ ಹೇಳುತ್ತಿದ್ದರು. ತಮ್ಮಂತೆಯೇ ಅದರ ವಾದನ ಮಹತ್ವವನ್ನೂ ರಸಮಾಧುರ್ಯವನ್ನೂ ಇತರರು ಅನುಭವಿಸಲಾರರಲ್ಲಾ ಎಂದು ಅವರಿಗೆ ಹಾರ್ದಿಕವಾದ ಚಿಂತೆ. ಭಗವಂತನು ಪ್ರಾಣಿಗಳಿಗೆ ಅನುಗ್ರಹಿಸಿರುವ ಅಮೂಲ್ಯ ವಸ್ತುಗಳಲ್ಲಿ ನಾದವು ಮೊದಲನೆಯದು. ಬ್ರಹ್ಮಾನಂದವನ್ನು ಸ್ವಲ್ಪಮಟ್ಟಿಗಾದರೂ ತೋರಿಸಬಲ್ಲ ವಸ್ತುವಾವುದಾದರೂ ಈ ಸೃಷ್ಟಿಯಲ್ಲಿ ಇರುವದೇ ಆದರೆ ಅದು ನಾದವೇ. ಇದನ್ನರಿತವರಾದುದರಿಂದಲೆ ಅವರು ಬೀದಿಯಲ್ಲಿ ಹೋಗುವ ತಮ್ಮ ಪರಿಚಿತರನ್ನು ಕರೆದು ಸ್ವಲ್ಪ ಹೊತ್ತು ಅವರಿಂದ ಬಲವಂತವಾಗಿಯಾದರೂ ವೀಣೆ ಕೇಳಿಸಿ ಕಳುಹುತ್ತಿದ್ದರು ಮರಣಕ್ಕೆ ಸ್ವಲ್ಪ ಮುಂಚೆ ಅನಾರೋಗ್ಯಸ್ಥಿತಿಯಲ್ಲಿದ್ದಾಗ ಆರೋಗ್ಯ ವಿಚಾರಕ್ಕಾಗಿ ಯಾರು ಬಂದರೂ, "ಏನು ಮಾಡಲಿ! ನೀವು ಬಂದವರು ವೀಣೆಯನ್ನು ಕೇಳದೆಯೇ ಹೋಗುತ್ತಿದ್ದೀರಲ್ಲ! ನುಡಿಸಬೇಕೆಂದು ಚಾಪಲ್ಯವಿದೆ, ಆದರೆ ಕೈಲಾಗದಲ್ಲ" ಎಂದು ದುಃಖಿಸುತ್ತಿದ್ದರು. ಅಲ್ಲದೆ, ತಾನು ತಿಳಿದಮಟ್ಟಿಗಾದರೂ ಇತರರು ಯಾವಾಗ ಎಲ್ಲಿ ನುಡಿಸಬೇಕೆಂದು ಕೇಳಿದರೂ, ಆಗದೆಂದು ಹೇಳದಿರುವುದು

ಹಾಗಿರಲಿ - 'ಆಮೇಲೆ ಒನ್ನಿ' ಎಂದು ಕೂಡ ಅವರು ಹೇಳಿ ಅರಿಯರು. ಇನ್ನು ಬಹುಮಾನದ ಚಿಂತೆಯೆ? ಅದು ನಿಮಗೆ ಸೇರಿದುದು. ಇಂಥ ಮಹಾಪುರುಷರನ್ನು ಯಥಾಶಕ್ತಿ ಬಹುಮಾನಿಸುವ ಅದೃಷ್ಟವಿದ್ದರೆ ನೀವೇ ಧನ್ಯರು. ಅವರಿಗೇನು ಆ ಕೊರತೆಯಿಲ್ಲ. ಅವರು ಎಷ್ಟೋ ಸಂಪಾದಿಸಿದರು; ಎಷ್ಟೋ ವೆಚ್ಚ ಮಾಡಿದರು. ಎಷ್ಟೋ ಸಂಪಾದಿಸಿದರು ಎಂದೆ; ಏನನ್ನೆಂದು ತಿಳಿದುಕೊಂಡಿದ್ದೀರಿ?. ದ್ರವ್ಯವನ್ನಲ್ಲ; ಕೀರ್ತಿಯನ್ನು ದ್ರವ್ಯವನ್ನು ಸಂಪಾದಿಸಲಿಲ್ಲವೆಂದಲ್ಲ. ಅದಕ್ಕಿಂತಲೂ ಕೀರ್ತಿಯನ್ನು ಹೆಚ್ಚು ಸಂಪಾದಿಸಿದರು ಎಂದು ಹೇಳಿದೆ ನಮ್ಮ ದೇಶದ ವಿದ್ವಾಂಸರಿಗೆ ಇನ್ನೂ ದ್ರವ್ಯಕ್ಕಿಂತ ಕೀರ್ತಿಯನ್ನು ಸಂಪಾದಿಸುವ ಮಾರ್ಗಗಳೇ ಹೆಚ್ಚಾಗಿ ಗೊತ್ತಿವೆ. ಶೇಷಣ್ಣನವರು ನಮ್ಮ ದೌರ್ಭಾಗ್ಯದಿಂದ ಪಾಶ್ಚಾತ್ಯ ಸೀಮೆಗಳಲ್ಲಿ ಹುಟ್ಟಿದ್ದಿದ್ದರೆ, ಈವರೆಗೆ ಅವರು ಕೋಟೀಶ್ವರರಾಗಿ ಇರುತ್ತಿದ್ದರು. ಕೀರ್ತಿಗಿಂತಲೂ ದ್ರವ್ಯವನ್ನು ಹೆಚ್ಚಾಗಿ ಸಂಪಾದಿಸಲು ಆ ದೇಶಗಳಲ್ಲಿ ಅನುಕೂಲಗಳಿವೆ. ನಾಲ್ಕು ಪತ್ರಿಕೆಗಳವರು ಕೈಹಿಡಿದರೆ ಸಾಕು ಸಾಮಾನ್ಯ ವಿದ್ವಾಂಸನೊಬ್ಬನು ಒಂದು ಘಂಟೆಯ ಕಾಲದ ಕಚೇರಿಗೆ ನೂರುಗಟ್ಲೆ ಪೌನಗಳನ್ನು ಸಂಪಾದಿಸಬಲ್ಲನು. ಅಲ್ಲಿ ಕೊಡುವವರು ಪ್ರಜೆಗಳು. ಇಲ್ಲಿ ಕೊಡಬೇಕಾಗಿರುವವರು ಪ್ರಭುಗಳು. ಆದುದರಿಂದ ಶೇಷಣ್ಣನವರು ಬಡವರಾಗದಿದ್ದರೂ ಐಶ್ವರ್ಯವಂತರ ಲೆಕ್ಕಕ್ಕೆ ಬರಲಿಲ್ಲ

ಇನ್ನು ವೆಚ್ಚವೋ! ಮೈಸೂರು ದೇಶದಲ್ಲಿ ಶ್ರೀರಾಮನವರಾತ್ರಿಯು ದೊಡ್ಡ ಹಬ್ಬ; ಎಷ್ಟೋ ಮಂದಿರಗಳಲ್ಲಿ ಹತ್ತು ದಿನವೂ ಪೂಜಾಪಾರಾಯಣಗಳೂ ಸಮಾರಾಧನೆಗಳೂ ಜರುಗುತ್ತವೆ. ರಾತ್ರಿ ಸಂಗೀತ ಕಾಲಕ್ಷೇಪ. ಪೂರ್ವಕಾಲದಲ್ಲಿ ರಾಮೋತ್ಸವವನ್ನು ಮಾಡದ ಸಂಗೀತ ವಿದ್ವಾಂಸನಿರಲಿಲ್ಲ. ಈಗಿನ ಕಾಲದ ಮಾತೇಕೆ? ಶೇಷಣ್ಣನವರು ಹಿಂದಿನ ಕಾಲದ ವ್ಯಕ್ತಿ. ಅವರಿಗೆ ರಾಮೋತ್ಸವ ಒಂದರಿಂದಲೇ ತೃಪ್ತಿಯಾಗಲಿಲ್ಲ. ಶ್ರೀಕೃಷ್ಣಜಯಂತಿಯಿಂದ ಹಿಡಿದು ಮುಂದಿನ ಹತ್ತು ದಿನಗಳೂ ಅದೇ ರೀತಿಯಾಗಿ ಕೃಷ್ಣೋತ್ಸವವನ್ನು ತಾವು ಹೊಸದಾಗಿ ನಡೆಸಲು ಆರಂಭಿಸಿದರು. ವರುಷದಲ್ಲಿ ಆ ಇಪ್ಪತ್ತು ದಿನಗಳು ನಮಗೆಲ್ಲರಿಗೂ ಸಂಗೀತದ ಹಬ್ಬ. ಇತರ ವಿದ್ವಾಂಸರೆಲ್ಲರೂ ಬಂದು ಅಲ್ಲಿ ಕನಿಷ್ಠ ಪಕ್ಷ ಒಬ್ಬೊಬ್ಬರು ಒಂದೊಂದು ದಿನ 'ಸೇವೆ' ಮಾಡಬೇಕು. ಸಾಯಂಕಾಲ ಏಳು ಗಂಟೆಗೆಲ್ಲ ಅವರ ಮನೆಯ ಮಹಡಿಯ ಮೇಲೆ ಎಳ್ಳು ಹಾಕಿದರೆ ಎಳ್ಳು ಸಿಡಿಯದು, ಅಷ್ಟು ಜನ ಇವತ್ತು ವೀಣೆ, ಇವತ್ತು ಹಾಡುಗಾರಿಕೆ, ಇವತ್ತು ನಾಟ್ಯ—ಒಂದು ಕುರುಡು ಕಾಸಿನ ವೆಚ್ಚವಿಲ್ಲದ ದೇವಗಾನ! ಹೇಳಿ ಕರೆಸುವ ಕೆಲಸವಿಲ್ಲ. ಚಿಕ್ಕವರು ದೊಡ್ಡವರೆಂಬ ಭೇದವಿಲ್ಲ. ಜಾಗ ಕೊಡದ ಪಾಪ ಗೋಡೆಯದಲ್ಲದೆ ಶೇಷಣ್ಣನವರದಲ್ಲ.

ಇತರ ಗಾಯಕರು ಯಾರೂ ಬರಲಿಲ್ಲವೆನ್ನೋಣ! ನಷ್ಟವೇನು? ಹತ್ತು ದಿನವೂ ತಾವೇ ಕಚೇರಿ ಮಾಡುವರು. ಈ ದಿನ ವೀಣೆ, ನಾಳೆ ಜಲತರಂಗ, ನಾಡಿದ್ದು ದಿನ ಪಿಟೀಲು! ಇನ್ನೊಂದು ದಿನ ಪಿಯಾನೊ, ಬೇರೊಂದು ದಿನ ಸ್ವರಬತ್ತು

ಹೆಸರು 'ವೀಣೆ' ಶೇಷಣ್ಣನವರಲ್ಲದೆ ಅವರಿಗೆ ಬಾರದಿದ್ದ ವಾದ್ಯವೇ ಇಲ್ಲ. ಅವರ ಬೆರಳಿನ ಗಾರುಡೀ ವಿದ್ಯೆಗೆ ಒಳಪಡದ ತಂತಿಯಾಗಲಿ, ಹಲಗೆಯಾಗಲಿ, ಚಕ್ಕೆಯಾಗಲಿ, ರಂಧ್ರವಾಗಲಿ ಇಲ್ಲ. ಅಲ್ಲದೆ ವೀಣೆಯೊಂದನ್ನೆ ನುಡಿಸಿದರೂ ಇವೊತ್ತಿನ ವೀಣೆ ಬೇರೆ; ನಾಳೆಯ ವೀಣೆ ಬೇರೆ. ಒಂದು ದಿನದ ನುಡಿತದಲ್ಲಿ ಶುದ್ಧ ಕರ್ನಾಟಕ ಪದ್ಧತಿಯಲ್ಲಿನ ನಿಯಮ ಗಾಂಭೀರ್ಯ! ಬೇರೊಂದು ದಿನ ಹಿಂದುಸ್ಥಾನಿಯವರ ಸ್ವಚ್ಛಂದ ಸೌಂದರ್ಯ! ಮತ್ತೊಂದು ದಿನ ಪಾಶ್ಚಾತ್ಯರ ವಿಚಿತ್ರ ಸ್ವರ ಮೇಳನ ಸಂಭ್ರಮ! ಇನ್ನೊಂದು ದಿನ ಈ ಮೂರು ಪದ್ಧತಿಗಳ ವಿಚಿತ್ರವಾದ ಕಲಸೋಗರ. ಈ ಸರ್ವಜನೀನ ಪ್ರತಿಭೆಯು ನಾನು ತಿಳಿದಮಟ್ಟಿಗೂ ಇವರಿಗಲ್ಲದೆ ಇನ್ನಾರಿಗೂ ಇರಲಿಲ್ಲ. ಕರ್ನಾಟಕರು ಅವರಿಗೆ ವೈಣಿಕ-ಶಿಖಾಮಣಿಯೆಂದು ಬಿರುದಿತ್ತರು. ಬಡೋದೆ ಮಹಾರಾಜರು ಅವರಿಗೆ ಪಲ್ಲಕ್ಕಿಯಲ್ಲಿ ಮೆರವಣಿಗೆ ಮಾಡಿದರು. ಪಾಶ್ಚಾತ್ಯರೊ ಎಂದರೆ, ಸಂಗೀತಪಟ್ಟಭದ್ರೆಯಾದ ಶ್ರೀಮತಿ ಕಸಿನ್ಸ್ ಸತೀಮಣಿಯು ನನ್ನ ಎದುರಿಗೆ ಆತನ ಪಾದಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿದಳು! ಸಮುದ್ರಯಾನವು ಪಾಪವೆಂದು ಶಾಸನ ಮಾಡಿ ಧರ್ಮಶಾಸ್ತ್ರಕಾರರು ಅವರನ್ನು ಕೆಡಿಸಿದರು. ಇಲ್ಲದಿದ್ದರೆ ಬಿಳಿಯ ಜನರು ಪೌನುಗಳಿಂದ ಅವರ ಪಾದಪೂಜೆ ಮಾಡುತ್ತಿದ್ದರು!

ಹೋಗಲಿ ಬಿಡಿ; ಶೇಷಣ್ಣನವರು ಕೀರ್ತಿಶೇಷರಾದರು. ಬದುಕಿದ್ದಷ್ಟು ದಿನ ನಿಮಿಷನಿಮಿಷವನ್ನೂ ಧನ್ಯವಾದಗಳಿಂದ ಕಳೆದರು. ಎಪ್ಪತ್ತೈದು ವರುಷ ಸಂಗೀತ-ಪ್ರಪಂಚದಲ್ಲಿ ಏಕಚ್ಛತ್ರಾಧಿಪತ್ಯ ಮಾಡಿದರು.

—ರಾಳ್ಲಪಲ್ಲಿ ಅನಂತಕೃಷ್ಣಶರ್ಮರು

## ಅಭ್ಯಸನಗಳು:

**ಪ್ರಶ್ನೆಗಳು:—**

೧. ಶೇಷಣ್ಣನವರ ಬಿರುದು ಹೇಗೆ ಸಾರ್ಥಕವಾಗಿತ್ತು?
೨. ಶೇಷಣ್ಣನವರ ಹಿರಿಮೆಗೆ ಕಾರಣವಾದ ಗುಣಗಳನ್ನು ಹೇಳಿರಿ.
೩. ಶೇಷಣ್ಣನವರಲ್ಲಿ ಗುಣಕ್ಕೆ ಮತ್ಸರವಿರಲಿಲ್ಲವೆಂಬುದು ಹೇಗೆ ವ್ಯಕ್ತವಾಗುವುದು?

**ಭಾಷಾಭ್ಯಾಸ :—**

೧. ಶೇಷಣ್ಣನವರು ವೀಣೆಯನ್ನು ಬಾರಿಸುವ ವರ್ಣನೆ, ಬಾರಿಸುವಾಗ ಅವರ ತನ್ಮಯತೆಯ ಸ್ಥಿತಿ; ಮತ್ತು ರಾಮನವಮಿ ಉತ್ಸವ—ಇವುಗಳ ವರ್ಣನೆಯ ಶೈಲಿಯನ್ನು ಗಮನಿಸಿರಿ.

೨. ಸ್ಪಷ್ಟೀಕರಿಸಿರಿ:
(೧) ಶೇಷಣ್ಣನವರು ವೀಣೆಯೊಡನೆ ಆಡಿದ್ದು ಆಟವೇ ಹೊರತು ಜಗಳವಲ್ಲ.
(೨) ಈ ಕಾಲದಲ್ಲಿ ನಾನು ಬದುಕಿದೆನಲ್ಲ ಎಂಬ ಗರ್ವ ನನಗೆ.
(೩) ನಮ್ಮ ಶಕ್ತಿಯಿದ್ದಷ್ಟು ನುಡಿಸುವೆವು ಅಲ್ಲದೆ, ವೀಣೆಯ ಶಕ್ತಿಗೆ ತಕ್ಕಂತೆ [illegible]
(೪) ಜಾಗ ಕೊಡದ [illegible]

**ಶಬ್ದ ವಿಚಾರ:—**

೧. ಲಾಕ್ಷಣಿಕ, ತಾನ, ಪಲ್ಲವಿ, ದ್ರುತ, ವಿಲಂಬ ಇವುಗಳ ಅರ್ಥವನ್ನು ಹೇಳಿರಿ

**ವಾಕ್-ಶಿಕ್ಷಣ:—**

ಆಕಾಶವಾಣಿಯ ಮೇಲೆ ಪ್ರತಿ ಶನಿವಾರ ಜರುಗುವ ರಾಷ್ಟ್ರೀಯ ಸಂಗೀತ ಕಾರ್ಯಕ್ರಮದಲ್ಲಿ ಉತ್ತರಾದಿ, ದಕ್ಷಿಣಾದಿ ಸಂಗೀತವನ್ನು ಕೇಳಿ ಆ ಎರಡರಲ್ಲಿಯ ವೈವಿಧ್ಯವನ್ನು ಅರಿಯಿರಿ. ಇದರಂತೆ ವಾದ್ಯಗಳ ಕಾರ್ಯಕ್ರಮವನ್ನೂ ಕೇಳಿರಿ.

**ಚರ್ಚೆ:—**

ಸೈನಿಕರಿಗೆ ಸಂಗೀತ ಶಿಕ್ಷಣ ಉಪಯೋಗವಿಲ್ಲ.

**ಬರೆಹ:—**

ಶೇಷಣ್ಣನವರ ಸದ್ಗುಣವನ್ನು ತೋರಿಸುವ ಪ್ರಸಂಗಗಳನ್ನು ವರ್ಣಿಸಿರಿ

## ಟಿಪ್ಪಣಿಗಳು

**ಸುಳಾದಿ:—**

ತಾಳ ಮಾಲಿಕೆಯೊಂದರಲ್ಲಿ ಹಾಡಲಾಗುವ ಒಂದು ರಚನೆ. ಇದರ ಸಾಹಿತ್ಯದಲ್ಲಿ ಸ್ವರಗಳು ಹೆಚ್ಚು ಸಾಮಾನ್ಯವಾಗಿ ದೈವಭಕ್ತಿಪರವಾದದ್ದು. ಏಳು ಬೇರೆ ಬೇರೆ ತಾಳಗಳ ಮಾಲಿಕೆಯಲ್ಲಿ ಇವನ್ನು ಹಾಡುತ್ತಿದ್ದರಂತೆ ಪುರಂದರದಾಸರು ಅನೇಕ ಸುಳಾದಿಗಳನ್ನು ರಚಿಸಿದ್ದಾರೆ.

**ತಿಲ್ಲಾನ:—**

ಮೃದಂಗದ ಜತಿ (ಬೋಲು)ಗಳ, ಸ್ವರಗಳು ಹಾಗು ಪಲ್ಲವಿ, ಅನುಪಲ್ಲವಿ, ಚರಣಗಳ ಸಾಹಿತ್ಯ ಇವೆಲ್ಲ ಕೂಡಿ ನಿರ್ಮಿತವಾದ ಒಂದು ರಚನೆ. ತಾಳ ವಾದ್ಯದೊಂದಿಗೆ ಕೇಳಲು ಇದು ಬಹಳ ಹಿತವಾಗುತ್ತದೆ. ಭರತನಾಟ್ಯದಲ್ಲಿ ಇದನ್ನು ಬಳಸುವದು ಹೆಚ್ಚು.

**ರಾಗ, ತಾನ, ಪಲ್ಲವಿ:—**

ರಾಗವೊಂದನ್ನು ವಿಸ್ತಾರವಾಗಿ ಹಾಡುವಾಗ ಈ ಮೂರು ಭಾಗಗಳಲ್ಲಿ ಹಾಡುತ್ತಾರೆ. ರಾಗವೆಂಬುದು ಆಲಾಪನೆಯು, ಸಾಹಿತ್ಯ ಅಥವಾ ನಿಬದ್ಧ ತಾಳದ ಸಹಾಯವಿಲ್ಲದೆ ರಾಗವನ್ನು ಚಿತ್ರಿಸುವ ಭಾಗ. ತಾನ ಅನಂತಾನಂತಂ, ನೊಂ ತೋಂ— ಇತ್ಯಾದಿ ಶಬ್ದಗಳ ಸಹಾಯದಿಂದ ಒಂದು ರೀತಿಯ ಲಯದಲ್ಲಿ ಹಾಡುವ ಅಥವಾ ವಾದ್ಯದ ಮೇಲೆ ನುಡಿಸುವ ಭಾಗ.

**ಪಲ್ಲವಿ:—**

ನಿಬದ್ಧವಾದ ತಾಳದಿಂದ ಕಟ್ಟಲ್ಪಟ್ಟ ಒಂದು ಹಾಡು ಈ ಹಾಡಿನ ಆಧಾರದ ಮೇಲೆ, ಅದರ ತಾಳಕ್ಕೆ ಹೊಂದಿಕೊಂಡು, ಹಿಂದುಸ್ತಾನಿ ಪದ್ಧತಿಯ ಖ್ಯಾಲದಲ್ಲಿ ಮಾಡುವಂತೆ ರಾಗವನ್ನು ಪ್ರಸ್ತಾರ ಮಾಡುವ ಸಂಗೀತ ಭಾಗಕ್ಕೂ ಪಲ್ಲವಿ ಎಂದೇ ಕರೆಯುವುದುಂಟು.

**ವರ್ಣ:—**

ವಿದ್ಯಾಸಂಪನ್ನವಾದ ಹಾಡುಗಳು. ವರ್ಣಗಳು ರಾಗ ಭಾವವನ್ನು ಚೆನ್ನಾಗಿ ಪ್ರಕಾಶಪಡಿಸುತ್ತವೆ. ಅಷ್ಟೇ ಅಲ್ಲದೆ, ಒಂದು ರಾಗದ ವಿಶೇಷ ಸಂಚಾರಗಳನ್ನೂ

ರಂಜಕ ಅಂಶಗನ್ನೂ, ಅಪೂರ್ವ ಪ್ರಯೋಗಗಳನ್ನೂ ತೋರಿಸಿಕೊಡುತ್ತವೆ, ರಾಗ ವೊಂದರ ಮೇಲೆ ಪ್ರಭುತ್ವ ಸಂಪಾದಿಸಬೇಕಾದರೆ ವರ್ಣಗಳ ಅಭ್ಯಾಸ ಅತ್ಯಗತ್ಯ.

**ಶ್ರುತಿ, ಲಯ :—**

ಶ್ರುತಿ ಎಂದರೆ 'ಸೂರ್,' ಲಯ ಎಂದರೆ ಸಂಗೀತದ ನಡೆಯ ಸಮತೂಕ (ನಮ್ಮ ಎದೆಯ ಬಡಿತಕ್ಕೂ ಒಂದು ಸಮತೂಕ, ಲಯ ಇದೆಯಲ್ಲವೆ?) ಶೇಷಣ್ಣನವರು ತಮ್ಮ ವೀಣೆಯ ಸುಸ್ವರನಿನಾದದಿಂದ, ತಾಳದ ಸುಂದರ ಸಮತೋಲ ದಿಂದ, ತರಂಗಿತತೆಯಿಂದ, ಮಾರ್ದವದಿಂದ ಪರವಶರಾದರು

**ಚತುರಸ್ರ :—**

ತಾಳದ ಒಂದು ವಿಶಿಷ್ಟ ಓಟ, ಗತಿ, ತಾಳದಲ್ಲಿ ಅಕ್ಷರಗಳೆಂಬ ವಿಭಾಗಗಳಿರುತ್ತವೆ. ಈ ವಿಭಾಗಗಳಲ್ಲಿ ಮಾತ್ರೆಗಳೆಂಬ ಉಪವಿಭಾಗಗಳನ್ನು ಮಾಡಿ ನಾಲ್ಕುನಾಲ್ಕಾಗಿ ಈ ಮಾತ್ರೆಗೆ ಜೋಡಿಸಿದಾಗ ಈ ನಡೆ ಕಾಣಿಸುತ್ತದೆ.

**ಪ್ರಬಂಧ :—**

ಒಂದು ಪುರಾತನ ಸಂಗೀತ ರಚನೆ; ಹಾಡು. ಸ್ವರ, ತಾನ, ಧಿಂತ ಧಿಂತ ಕಿಣ ಕಿಣ ಮೊದಲಾದ ವಾದ್ಯಾನುಕರಣಗಳು, ತಾಳ ಮುಂತಾದ ಆರು ಅಂಗಗಳಿಂದಲೂ ಸಂಗೀತದ ನಾಲ್ಕು ವಿಶಿಷ್ಟ 'ಧಾತು'ಗಳಿಂದಲೂ ಕೂಡಿದ್ದು. ಜಯದೇವನ ಗೀತ ಗೋವಿಂದವು ದ್ವಿಧಾತುಕವಾದ ಒಂದು ಪ್ರಬಂಧವು.

**ತಾಯ :—**

ಹಿಂದುಸ್ತಾನಿಯ ಸ್ಥಾಯಿಗೆ ಸಮಾನವಾದದ್ದು. ರಾಗಕ್ಕೆ ಯುಕ್ತವಾದ ಸ್ವರವನ್ನು ಸ್ಥಿರವಾಗಿಟ್ಟುಕೊಂಡು, ಆ ಸ್ವರದ ಕೆಳಗೆ ಕ್ರಮವಾಗಿ ಸಂಚರಿಸಿ ಮಧ್ಯಷಡ್ಜ ಸ್ವರಕ್ಕೆ ಬಂದು, ಆ ಸ್ವರದ ಮೇಲೆ ಕ್ರಮಬದ್ಧವಾಗಿ ಸಂಚರಿಸಿ, ಮತ್ತೆ ಅದೇ ಷಡ್ಜ ಸ್ವರಕ್ಕೆ ಬಂದು, ರಾಗವನ್ನು ಪ್ರಸ್ತುತಪಡಿಸುವ ಒಂದು ಕ್ರಮ.

**ಸ್ವರಬತ್ತು :—**

ಬೆರಳಿನಿಂದ ಮೀಟಿ ನುಡಿಸುವ ಒಂದು ತಂತುವಾದ್ಯ.

**ನಾದದಲ್ಲಿ 'ಸಂಚು' ಇಲ್ಲ :—**

ಅಂದರೆ ನಾದವನ್ನು ಅಡಗಿಸಿ ಸುಸ್ಪಷ್ಟವಾಗಿ ಕೇಳಿಸದಂತೆ ತೀರ ಸಣ್ಣಗೆ ಮಾಡಿ ನುಡಿಸುತ್ತಿರಲಿಲ್ಲ ಅವರು. ಎಲ್ಲ ಸ್ವರಗಳು ನಿಸ್ಸಂದೇಹವಾಗಿ, ಸ್ಪಷ್ಟವಾಗಿ ನುಡಿ ಯುತ್ತಿದ್ದವು.

**ಗಣಿತಪ್ರಧಾನವಾದ ಸ್ವರಪಂಚಕ:—**

ಗಣಿತದ ಆಟ ಆಡಿದಂತೆ ನುಡಿಸಿ 'ಲೆಕ್ಕಾಚಾರ'ದ ಒಂದು ಹಿತವಾದ ಲಾಸ್ಯವನ್ನು ತಂದುಕೊಡುವ ಐದು ಸ್ವರಗಳ ಸಮೂಹ.

# ೮. ಪ್ರಾಣಿಗಳಲ್ಲಿ ವ್ಯಕ್ತಿತ್ವ

[ ಮಾನವರಲ್ಲಿ ಅರಿವು ಎಂಬ ವಿಶೇಷ ಗುಣವಿದೆ. ಈ ಅರಿವಿನ ಬಲದಿಂದ ಹಿಂದಿನ ಮುಂದಿನ ಸಂಗತಿಗಳಲ್ಲಿ ಕಾಣುವ ಸಂಬಂಧವನ್ನು ಅವನು ಅರಿತುಕೊಳ್ಳಬಲ್ಲವನಾಗಿದ್ದಾನೆ. ತನ್ನ ಶಕ್ತಿಯಲ್ಲಿ ಮಾನವನು ಉಳಿದ ಪ್ರಾಣಿವರ್ಗದಿಂದ ಮಿಗಿಲಾಗಿರುವುದೇನೋ ನಿಜ. ಆದರೂ 'ಲೊಕದಲ್ಲಿ ಮಾನವನನ್ನು ಮೀರಿಸಿದ ಗುಣವಂತರಾರೂ ಇಲ್ಲ' ಎಂಬ ಹೆಮ್ಮೆಯು ಮಾತ್ರ ವ್ಯರ್ಥ. ಮಾನವನಿಗಿಂತಲೂ ಹೆಚ್ಚಿನ ಹಾಗೂ ಆಶ್ಚರ್ಯಕರವಾದ ಸಹಜ ಶಕ್ತಿಯ ಒಂದೊಂದು ಗುಣವಿಶೇಷದ ಅದೆಷ್ಟೋ ಪ್ರಾಣಿಗಳು ವಿಶ್ವದಲ್ಲಿವೆ. ಆದುದ ರಿಂದ ತಾನೇ ಶ್ರೇಷ್ಠನೆಂಬ ಅಹಂಕಾರವು ಅಜ್ಞಾನದ ಮೂಲಕ ಉಂಟಾದುದೆಂಬಲ್ಲಿ ಸಂದೇಹವಿಲ್ಲ. ಈ ಪ್ರಬಂಧದಲ್ಲಿ ವಿವರಿಸಲ್ಪಟ್ಟ ಪ್ರಾಣಿಗಳ ವ್ಯಕ್ತಿತ್ವದ ವಿಚಾರವು ಈ ದೃಷ್ಟಿಯಿಂದ ಮನನೀಯವಾಗಿದೆ. ]

'ಜೀವಿ ಜೀವಿಯ ತಿಂದು ಜೀವಿಪುದು ಜಗವೆಲ್ಲ,

ಎಂಬ ಧರ್ಮವನ್ನು ಅನುಸರಿಸುವ ಪ್ರಾಣಿಪ್ರಪಂಚದಲ್ಲಿ ಪ್ರಾಣಿಯ ಅಳಿವು ಉಳಿವುಗಳು ಅದರ ಪರಿಸ್ಥಿತಿಯನ್ನು ಅವಲಂಬಿಸುತ್ತವೆ. ಜೀವಿಗೂ ಪರಿಸ್ಥಿತಿಗೂ ಒದಗುವ ಪರಸ್ಪರ ಕ್ರಿಯೆ ಪ್ರತಿಕ್ರಿಯೆಯೇ ಜೀವನದ ತಿರುಳು. ಪ್ರಾಣಿಯ ಚಟುವಟಿಕೆಗಳೆಲ್ಲ ಪರಿಸ್ಥಿತಿಯೊಂದಿಗೆ ಹೊಂದಿಕೊಳ್ಳುವುದಕ್ಕಾಗಿಯೆ. ಈ ಚಟುವಟಿಕೆಗಳು ಪ್ರಾಣಿಯ ಬುದ್ಧಿಪೂರ್ವಕವಾದ ಪ್ರಯತ್ನಗಳಿಂದ ರೂಪುಗೊಳ್ಳುತ್ತಿವೆ, ಎಂಬುದು ತಪ್ಪು ತಿಳುವಳಿಕೆ. ಕೆಳದರ್ಜೆಯ ಪ್ರಾಣಿಗಳು ನಮ್ಮಂತೆಯೇ ವರ್ತಿಸುತ್ತವೆ ಎಂಬ ಭಾವನೆಯೇ ಇದಕ್ಕೆ ಕಾರಣ. ಪ್ರಾಣಿಯ ಚಟುವಟಿಕೆಗಳು ರೂಪುಗೊಳ್ಳುವದು ಅದರ ಅರಿವಿಲ್ಲದೆಯೆ. ಈ ದೃಷ್ಟಿಯಲ್ಲಿ ಮನುಷ್ಯನಿಗೂ ಇತರ ಪ್ರಾಣಿಗಳಿಗೂ ಬಹು ದೊಡ್ಡ ಅಂತರವಿದೆ. ಮಾನವನು ಶ್ರೇಷ್ಠಜೀವಿ ಆದರೆ ಅವನಿಗಿಂತಲೂ ಹೆಚ್ಚಿನ ಶ್ರೇಷ್ಠತೆ ತೋರುವ ಅನೇಕ ಪ್ರಾಣಿಗಳಿವೆ. ಮೈಕಟ್ಟು ರೂಪುಗಳಲ್ಲಿ ಮನುಷ್ಯನನ್ನು ಮೀರಿಸುವುದು ಕುದುರೆ, ಹೆಚ್ಚಿನ ವಾಸನಾಶಕ್ತಿ, ನಮ್ರತೆ, ಸ್ವಾಮಿನಿಷ್ಠೆಯನ್ನು ತೋರುವುದು ನಾಯಿ; ತೀಕ್ಷ್ಣದೃಷ್ಟಿಯುಳ್ಳದ್ದು ಗಿಡುಗ, ನೂರಾರು ಮೈಲುಗಳ ಅಂತರವಿದ್ದರೂ, ತನ್ನ ಗೂಡಿಗೆ ನೇರವಾಗಿ ಹಿಂತಿರುಗುವ ದಿಗ್ದರ್ಶನಶಕ್ತಿಯುಳ್ಳದ್ದು ಪಾರಿವಾಳ, ಹೆಚ್ಚಿನ ಹಿಡಿತ, ಒಪ್ಪತನ, ಶಿಸ್ತು, ಸಂಯಮಗಳುಳ್ಳ ಶ್ರಮಜೀವಿ ಇರುವೆ; ಸಹನೆ, ಮಧುರ ಮನೋವೃತ್ತಿ, ನಿಷ್ಕಲಂಕವಾದ ಮನಸ್ಸುಳ್ಳದ್ದು ಜಿಂಕೆ, ಕಪೋತ; ತೃಪ್ತಿ ಜೀವನವನ್ನು ನಡೆಸುವ ಶಾಂತಮೂರ್ತಿ ಹಸು; ಋತುಧರ್ಮವನ್ನು ಅನುಸರಿಸಿ, ಮಧುರ ಕಂಠದಿಂದ ಹಾಡುವದು ಕೋಗಿಲೆ; ಬಣ್ಣಬಣ್ಣದ ಉಡುಪಿನ ಸೊಬಗು ತೋರುವುದು ನವಿಲು,

ಸಾಮಾಜಿಕ ವಿಕಾಸವು ಇದಕ್ಕೆ ಕಾರಣ. ಮೆದುಳಿನ ಬೆಳವಣಿಗೆ ಇದಕ್ಕೆ ಪ್ರೇರಕ. ಮಾತು, ಬರವಣಿಗೆ, ಸಮಾಜ ರಚನೆ, ಮತ, ನೀತಿ, ತಲೆಮಾರಿನಿಂದ ತಲೆಮಾರಿಗೆ ಸಂತತವಾಗಿ ಹರಿದುಬರುವ ಸಂಸ್ಕೃತಿ ಇವುಗಳ ನೆರವಿನಿಂದ ಪ್ರಾಣಿವರ್ಗವನ್ನು ಅತಿಕ್ರಮಿಸಿ, ತನ್ನದೇ ಆದ ವೈಯಕ್ತಿಕ ಅಸ್ತಿತ್ವವನ್ನು ಸ್ಥಾಪಿಸುವನು. ತನ್ನ ಪ್ರಗತಿಗೆ ಅತ್ಯಾವಶ್ಯಕವಾದ ಜೀವನಸೌಕರ್ಯಗಳನ್ನು ಮಾನವನು ಸ್ವಪ್ರಯತ್ನದಿಂದ ಗಳಿಸುವನು. ವಿಜ್ಞಾನವು ಮುಂದುವರಿದಂತೆಲ್ಲ, ಪ್ರಕೃತಿಯನ್ನು ಸ್ವಾಧೀನಪಡಿಸಿಕೊಂಡು, ತನ್ನ ಜೀವಿತವನ್ನು ಪ್ರಗತಿಮಾರ್ಗದಲ್ಲಿ ಒಯ್ಯಬಲ್ಲನು. ಮಾನವನನ್ನುಳಿದ ಇತರ ಪ್ರಾಣಿಗಳಿಗೆ ಈ ಬಗೆಯ ಸೌಲಭ್ಯಗಳಿರುವುದಿಲ್ಲ. ಅವುಗಳ ಸಾವು ಬದುಕುಗಳು ನೈಜವಾದ ಪ್ರಕೃತಿಯ ಮಡಲಿನಲ್ಲಿ ಕೃತಕವಲ್ಲದ ಸಹಜ ಜೀವನದಲ್ಲಿ ಪ್ರಾಣಿಗೆ ನೆರವಾಗುವುದು ಪ್ರಕೃತಿದತ್ತವಾದ ಹುಟ್ಟುಗುಣ ಈ ಗುಣ ಬೆಳಕಿಗೆ ಬರುವುದು ಶಿಕ್ಷಣ ಅಥವಾ ಅಭ್ಯಾಸದ ಫಲವಲ್ಲ. ಹುಟ್ಟಿದ ಕರುವಿಗೆ ತಾಯಿಯ ಎದೆಹಾಲನ್ನು ಚಪ್ಪರಿಸಲು ಯಾವ ಶಿಕ್ಷಣವು ಅಗತ್ಯ? ನೀರಿನಲ್ಲಿ ಅಕಸ್ಮಾತ್ತಾಗಿ ಬಿದ್ದ ನಾಯಿಮರಿಗೆ ಈಜುವುದನ್ನು ಯಾರು ಕಲಿಸಿದರು? ೩೩ ತಿಂಗಳ ಗರ್ಭವಾಸದ ನಂತರ ಹುಟ್ಟುವ ಆನೆಯ ಮರಿ, ಹಿಂಡನ್ನು ಹಿಂಬಾಲಿಸುವುದು ಯಾವ ಅಭ್ಯಾಸದ ಫಲ? ನಾಕಿದ ನಾಯಿಗೆ ತನ್ನ ಯಜಮಾನನ ಬಂಗಲೆಯ ಆವರಣವೆಲ್ಲ ಅದರ ಸರ್ವಮಾನ್ಯದ ನಾಡು. ತನ್ನ ನಾಡಿನೊಳಕ್ಕೆ ಬೇರೊಂದು ನಾಯಿಯು ಅತಿಕ್ರಮಿಸಿ ಬಂದರೆ, ಅದನ್ನು ಹೊಡೆದು ಓಡಿಸುವ ತನಕ ನಾಯಿಗೆ ತೃಪ್ತಿಯಿಲ್ಲ, ಅತಿಕ್ರಮ ಮಾಡಿದ ನಾಯಿಯು ಕೂಡ, ನಿಂತು ಕಾದಾಡದೆ, ತಪ್ಪು ಒಪ್ಪಿಕೊಂಡಂತೆ ಬಾಲ ಮುದುರಿಕೊಂಡು ಓಡಿಹೋಗುವುದು. "ತಮ್ಮ ನಾಡು ತಮ್ಮ ಸೀಮೆ" ಎಂಬ ಈ ಉದಾತ್ತ ಭಾವನೆಯು ಯಾವ ಶಿಕ್ಷಣದ ಫಲ? ಇವೆಲ್ಲವೂ ಪ್ರಾಣಿಗೆ ಸಹಜವಾಗಿ ಹುಟ್ಟಿಬರುವ ಗುಣಗಳು, ಪರಿಸ್ಥಿತಿಯು ಇವುಗಳ ಪ್ರೇರಕ.

ಒಂದೇ ಬಗೆಯ ಪರಿಸ್ಥಿತಿಯಲ್ಲಿ ಬೇರೆ ಬೇರೆ ಜಾತಿಯ ಪ್ರಾಣಿಗಳು ಬೇರೆಬೇರೆ ನಡುವಳಿಕೆಗಳನ್ನು ತೋರುತ್ತವೆ. ಬೆನ್ನಟ್ಟಿಬರುವ ಹಗೆಯಿಂದ ತಪ್ಪಿಸಿಕೊಳ್ಳಲು ಹಿಂದು ಮುಂದು ನೋಡದೆ ಓಡುವುದು ಜಿಂಕೆಯ ಹುಟ್ಟುಗುಣ. ಕೊಂಬುಗಳಿಂದ ಎದುರಿಸುವುದು ಕಾಡೆಮ್ಮೆಯ ಸ್ವಭಾವ. ಮರದ ತುಂಡಿನಂತೆ, ನೆಲದ ಮೇಲೆ ಬಿದ್ದು ಸತ್ತಂತೆ ನಟಿಸುವುದು ಆಸ್ಟ್ರೇಲಿಯಾವಾಸಿ ಓಪೋಸಂ ಪ್ರಾಣಿಯ ಉಪಾಯ. ತನ್ನ ಜೀವಮಾನದಲ್ಲಿ ಈ ಬಗೆಯ ಸನ್ನಿವೇಶವು ಎಷ್ಟು ಸಲ ಒದಗಿದರೂ ಒಂದೇ ಬಗೆಯ ಪಡಿಯಚ್ಚಿನ ನಡವಳಿಕೆಯು ಆಯಾ ಪ್ರಾಣಿಯ ಹುಟ್ಟುಗುಣ. ಅನುಭವದಿಂದ ತಮ್ಮ ನಡವಳಿಕೆಯನ್ನು ತಿದ್ದಿಕೊಳ್ಳುವುದು ಪ್ರಾಣಿಯ ಸ್ವಭಾವವಲ್ಲ. ಪ್ರಾಣಿಗೆ ಸಹಜವಾಗಿದ್ದರೂ ಈ ನಡವಳಿಕೆಯು ನಮಗೆ ಆಶ್ಚರ್ಯವಾಗಿ ತೋರುವುದು. ಪ್ರಾಣಿಯ ನಡವಳಿಕೆಗಳೆಲ್ಲ ಜೀವನದ ಹೋರಾಟದಲ್ಲಿ ಕೇವಲ ಆತ-

ರಕ್ಷಣೆಗಾಗಿಯೇ ಹೊರತು ಸ್ವಾರ್ಥದ ಅಧಿಕ್ಯಕ್ಕಾಗಿ ಅಲ್ಲ. ಒಂದೊಂದು ವೇಳೆ ಪ್ರಾಣಿಗಳೊಡನೆ ನಮ್ಮ ನಡತೆಯನ್ನು ಹೋಲಿಸಿಕೊಂಡರೆ, ನಾವು ತಲೆ ತಗ್ಗಿಸಬೇಕಾದೀತು. "ಪ್ರಾಣಿಗಳು ಆಹಾರವನ್ನು ತಿನ್ನುತ್ತವೆ. ಆದರೆ ಹೊಟ್ಟೆಬಾಕರಲ್ಲ; ಪ್ರಾಣಿಗಳು ಕೆಲವು ಸಂದರ್ಭಗಳಲ್ಲಿ ಮದ್ಯದ ರುಚಿಯನ್ನು ಸವಿದರೂ ಅವು ಕುಡುಕರಲ್ಲ" ಎಂದು ಆಂಗ್ಲ ಕವಿ ಹೇಳಿದ ವಾಕ್ಯದಲ್ಲಿ ಸತ್ಯವಿಲ್ಲವೆ?

"ಇರುವೆಯ ಜೀವನದಿಂದ ಪಾಠವನ್ನು ಕಲಿಯಿರಿ" ಎಂದು ಸಾಲೊಮನ್ ದೊರೆ ತನ್ನ ಹಿಂಬಾಲಕರಿಗೆ ಹೇಳಿದಾಗ, ಇರುವೆಯ ವ್ಯಕ್ತಿಪ್ರಭಾವವನ್ನು ಆ ದೊರೆಯು ಅರಿತಿದ್ದಿರಬೇಕು. ಇರುವೆಯು ಸಮಾಜಜೀವಿ. ಪರಸ್ಪರ ಸಹಕಾರ, ಸೌಹಾರ್ದ, ತ್ಯಾಗ, ಶ್ರಮಜೀವನ, ಕರ್ತವ್ಯನಿಷ್ಠೆ ಮೊದಲಾದ ಉದಾತ್ತ ಗುಣಗಳು ಇರುವೆಯಲ್ಲಿವೆ. ಜೀವನದ ಒಂದೊಂದು ಸನ್ನಿವೇಶವನ್ನು ಒಂದೊಂದು ಬಗೆಯ ಸಂಕೇತದಿಂದ ವ್ಯಕ್ತಪಡಿಸುವುದು ಇರುವೆಯ ಸ್ವಭಾವ; ಮೂತಿನಿಂದ, ಸ್ಪರ್ಶದಿಂದ. ಇರುವೆಯ ತಲೆಯಲ್ಲಿರುವ ಕುಡಿಮೀಸೆಗಳು ಸ್ಪರ್ಶನಾಂಗಗಳು. ಸಾಲುಸಾಲಾಗಿ ಎದುರು ಬರುತ್ತಿರುವ ಇರುವೆಗಳು ಒಂದನ್ನೊಂದು ತಮ್ಮ ಕುಡಿಗಳಿಂದ ಮುಟ್ಟಿ, ಮುಂದೆ ಹೋಗುವುದನ್ನು ನಾವು ನೋಡಿರುತ್ತೇವೆ. ಪರಸ್ಪರ ಸೂಚನೆ ಕೊಡುವುದು ಈ ನಡೆವಳಿಕೆಯ ಉದ್ದೇಶ ಕುಡಿಮೀಸೆಗಳನ್ನು ನೆಲದ ಮೇಲೆ ನಾನಾರೀತಿ ತಟ್ಟುವುದು; ಮತ್ತೊಂದು ಇರುವೆಯ ದೇಹವನ್ನು ನಯವಾಗಿ ಮುಟ್ಟುವದು; ಹಿಂಗಾಲುಗಳ ಮೇಲೆ ನಿಂತು ಕುಡಿಗಳನ್ನು ಅಲ್ಲಾಡಿಸುವದು ಇವೆಲ್ಲವೂ ಸಾಂಕೇತಿಕ ಭಾಷೆಯೇ. ಗಾಬರಿಗೊಂಡು, ನಡುಗುತ್ತಿರುವ ಒಂದು ಇರುವೆಯನ್ನು ಮತ್ತೊಂದು ಕಂಡರೆ, ತನ್ನ ಕುಡಿಗಳಿಂದ ಮುಟ್ಟಿ, ಸವರಿ, ಆ ಇರುವೆಯನ್ನು ಸಂತೈಸುತ್ತದೆ. ಧಾನ್ಯದ ಕಣಜವನ್ನೋ, ಬೆಲ್ಲದ ಮುದ್ದೆಯನ್ನೋ ಕಂಡ ಇರುವೆಗಳು ಗೂಡಿಗೆ ಹಿಂತಿರುಗಿ, ಹಿಂಗಾಲುಗಳ ಮೇಲೆ ನಿಂತು ನರ್ತನಮಾಡಿ, ನಿಧಿ ಕಂಡುದನ್ನು ಇತರ ಇರುವೆಗಳಿಗೆ ತಿಳಿಸುವುವಂತೆ.

ಇರುವೆಯ ಜೀವನವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಗೂಡಿನಿಂದ ಹೊರಬಿದ್ದ ಇರುವೆಯು, ಗೂಡಿಗೆ ಹಿಂತಿರುಗುತ್ತಿರುವ ಇರುವೆಯನ್ನು ಸಂಧಿಸಿ, ಹಿಂಗಾಲುಗಳ ಮೇಲೆ ನಿಂತು, ತನ್ನ ಕುಡಿಗಳಿಂದ ಅದನ್ನು ಮುಟ್ಟುತ್ತದೆ. ಈ ನಡವಳಿಕೆ ತನಗೆ ಆಹಾರ ಬೇಕೆಂಬ ಪ್ರಾರ್ಥನೆಯ ಸಂಕೇತ. ಸಂಧಿಸಿದ ಇರುವೆಯ ಹೊಟ್ಟೆಯಲ್ಲಿ ಆಹಾರವಿದ್ದರೆ, ಅದು ತನ್ನ ಹಿಂಗಾಲುಗಳ ಮೇಲೆ ನಿಂತು, ತನ್ನ ಬಾಯಿಂದ ಒಂದು ತೊಟ್ಟು ಆಹಾರವನ್ನು ಹಸಿದ ಇರುವೆಗೆ ಕೊಡುತ್ತದೆ. "ಹಸಿದು ಬಂದವರಿಗೆ ಅಶನವೀಯುವುದು" ಇರುವೆಯ ಸಮಾಜದ ನೀತಿ. ಹೊಟ್ಟೆಯಲ್ಲಿ ಆಹಾರವಿದ್ದರೂ, ಹಸಿದ ಇರುವೆಯ ಪ್ರಾರ್ಥನೆಯನ್ನು ನಿರಾಕರಿಸಿದರೆ, ಸ್ವಾರ್ಥ ತೋರಿದ ಇರುವೆಯನ್ನು ಇತರ ಇರುವೆಗಳು ನಿರ್ದಾಕ್ಷಿಣ್ಯವಾಗಿ ಕೊಂದುಬಿಡುವುದು ಸಮಾಜದ ಸಂಪ್ರದಾಯ. ಇರುವೆಯ ಸಂಪಾದನೆಯು ಸ್ವಂತ ಸುಖಕ್ಕೆ ಅಲ್ಲ. ಇಡೀ ಸಮಾಜದ ಹಿತಕ್ಕಾಗಿ, ಇರುವೆಯ ಹೊಟ್ಟೆ, ಸಮಾಜದ ಕಣಜ.

ಸ್ವಾರ್ಥಕ್ಕೆ ಎಡೆ ಇಲ್ಲದಿರುವಂತೆ, ಇರುವೆಯ ಜೀವನದಲ್ಲಿ ಕೆಟ್ಟ ಚಾಳಿಗಳಿಗೂ ಅವಕಾಶವಿಲ್ಲ. ತನ್ನ ಜೀವಮಾನವನ್ನೆಲ್ಲ ಇರುವೆಯ ಜೀವನದ ರಹಸ್ಯವನ್ನು ಅರಿಯಲು ಮುಡುಪಾಗಿಟ್ಟ ಸರ್. ಜಾನ್ ಲುಬಾಕ್ ಒಂದು ಸ್ವಾರಸ್ಯವಾದ ಪ್ರಯೋಗವನ್ನು ನಡಿಸಿದನು. ಗೂಡಿನ ಒಂದು ಇರುವೆಗೆ ಬಣ್ಣದ ಗುರುತು ಮಾಡಿ ಅದನ್ನು ಗೂಡಿನಿಂದ ಹೊರಕ್ಕೆ ತಂದು, ಅದರ ಮುಂದೆ ಮಾದಕದ್ರವ ಸೇರಿಸಿದ ಷರಬತ್ತು ಇಟ್ಟನು. ಕೊಂಚ ಹೊತ್ತಿನಲ್ಲಿ ದ್ರವದ ರುಚಿ ಕಂಡ ಇರುವೆ ಮತ್ತೇರಿ ಬಿದ್ದಿತು. ಇರುವೆಯನ್ನು ಗೂಡಿಗೆ ಸೇರಿಸಿದಾಗ, ಇತರ ಇರುವೆಗಳು ಅದನ್ನು ಅಕ್ಕರೆಯಿಂದ ಆರೈಕೆಮಾಡಿದವು. ಇರುವೆಯು ಚೇತರಿಸಿಕೊಂಡಿತು. ಕೆಲವು ದಿನಗಳ ನಂತರ ಲುಬಾಕ್ ಮತ್ತೆ ಅದೇ ಇರುವೆಯನ್ನು ಪ್ರಯೋಗಕ್ಕೆ ಒಳಪಡಿಸಿದನು. ಮತ್ತೇರಿದ ನಂತರ ಗೂಡಿಗೆ ಸೇರಿಸಿದಾಗ, ಹಿಂದಿನಂತೆ ಕುಡುಕ ಇರುವೆಯು ಇತರ ಇರುವೆಗಳ ಆರೈಕೆಯಿಂದ ಚೇತರಿಸಿಕೊಂಡಿತು. ೪-೬ ಪ್ರಯೋಗಗಳ ನಂತರ ಗೂಡಿನ ಇರುವೆಗಳಿಗೆ ಈ ಕುಡುಕನ ವರ್ತನೆ ಸರಿಬೀಳಲಿಲ್ಲವೆಂದು ತೋರಿದಂತೆ, ಆರೈಕೆ ಮಾಡುವುದಕ್ಕೆ ಬದಲಾಗಿ, ಕುಡುಕ ಇರುವೆಯನ್ನು ಎಳೆದೊಯ್ದು ನೀರಿನಲ್ಲಿ ಮುಳುಗಿಸಿಬಿಟ್ಟವಂತೆ.

ತಾಯ್ತನವು ಪ್ರಾಣಿಯ ಉದಾತ್ತ ಗುಣಗಳನ್ನು ಬೆಳಕಿಗೆ ತರುತ್ತದೆ, ಮಕ್ಕಳ ಪೋಷಣೆ-ರಕ್ಷಣೆ, ಮಮತೆಯ ಆರೈಕೆ ಜೀವನದ ಹೋರಾಟದಲ್ಲಿ ನೆರವಾಗುವ ನಡೆವಳಿಕೆಗಳನ್ನು ಮರಿಗಳಿಗೆ ಕಲಿಸುವ ಶಿಕ್ಷಣದ ವಿಧಾನ—ಇವೆಲ್ಲವೂ ತಾಯ್ತನದ ಜವಾಬ್ದಾರಿ. ಸ್ವಾರ್ಥತೆಯ ಸಾಕಾರಮೂರ್ತಿ ಬೆಕ್ಕು. "ತಾನುಂಟು ಮೂರು ಲೋಕ ಉಂಟು'' ಎಂಬುದೇ ಬೆಕ್ಕಿನ ಜೀವನದ ಧ್ಯೇಯ, ಮನೆಯಲ್ಲಿ ಸಾಕಿ ಪಳಗಿದ್ದ ಬೆಕ್ಕು ಕೂಡ, ತನ್ನ ಪಾಲಿಗೆ ಒರಬೇಕಾದ ಆಹಾರವನ್ನು ಹೊತ್ತಿಗೆ ಸರಿಯಾಗಿ ಯಜಮಾನನು ಕೊಡದಿದ್ದರೆ, ತನ್ನ ವರ್ತನೆಯಿಂದ ತಾನು ಹುಲಿ ಜಾತಿಗೆ ಸೇರಿದ ಪ್ರಾಣಿ ಎಂಬುದನ್ನು ನಿರ್ದಾಕ್ಷಿಣ್ಯವಾಗಿ ತೋರಿಸಿಬಿಡುತ್ತದೆ. ಆದರೂ ತಾಯ್ತನವು ಅದರ ವ್ಯಕ್ತಿತ್ವವನ್ನೇ ಬದಲಾಯಿಸುತ್ತದೆ. ತಾಯ್ತನದಲ್ಲಿ ಸ್ವಾರ್ಥವನ್ನು ತ್ಯಜಿಸಿ, ತನ್ನಲ್ಲಿಯೂ ಕೆಲವು ಸುಗುಣಗಳಿವೆ ಎಂಬುದನ್ನು ವ್ಯಕ್ತಪಡಿಸುವದು ನಮ್ಮ ಬೆಕ್ಕು. ತನ್ನ ಮರಿಗಳನ್ನು ಸಾಕಿ ಸಲಹುವುದರಲ್ಲಿ ಮಾತ್ರವೇ ಅಲ್ಲ, ಬೇರೆ ಜಾತಿಯ ಪ್ರಾಣಿಗಳ ಮರಿಗಳಿಗೆ ಸಾಕುತಾಯಾಗಿ, ತಾಯ್ತನದ ಸಾರ್ಥಕ್ಯವನ್ನು ಪಡೆಯುವುದು. ಬೆಕ್ಕಿಗೂ ಇಲಿಗೂ ಎಣ್ಣೆ ಸೀಗೆಕಾಯಿ. ಕಂಡ ಕೂಡಲೇ ಬಡಿದು ತಿನ್ನುವ ಚಟದ ಬೆಕ್ಕು, ಇಲಿಮರಿಯೊಂದನ್ನು ತನ್ನ ಮರಿ-ಗಳೊಂದಿಗೆ ಸಾಕುಮರಿಯಾಗಿ, ಮಮತೆಯಿಂದ ಸಾಕಿದ ಘಟನೆಯನ್ನು ಫ್ರಾನ್ಸಿಸ್ ಪಿಟ್ ಎಂಬಾತನು ವಿವರಿಸಿರುತ್ತಾನೆ. ಸಾಕುಪ್ರಾಣಿಗಳ ವ್ಯವಸಾಯವೇ ಈತನ ಬಿಡುಗಾಲದ ಹವ್ಯಾಸ ತನ್ನ ಬಳಿಯಲ್ಲಿದ್ದ ಒಂದು ಬೆಕ್ಕು ೪-೫ ಮರಿಗಳನ್ನು ಈದಿತು. ತಾಯಿಯು ಮರಿಗಳನ್ನು ಬಿಟ್ಟು ಕದಲಲೇ ಇಲ್ಲ, ಬಲವಂತವಾಗಿ ತಾಯಿಯನ್ನು ಬೇರೆ ಕಡೆಗೆ ಸಾಗಿಸಿ, ಮರಿಗಳ ಮಧ್ಯೆ ಒಂದು ಇಲಿಯ ಮರಿಯನು

ಸೇರಿಸಿದನು. ಕೊಂಚ ಹೊತ್ತಿನಲ್ಲಿ ತಾಯಿ ಮರಿಗಳ ಬಳಿಗೆ ಬಂದಿತು. ಗೂಡಿನಲ್ಲಿದ್ದ ಅಪರಿಚಿತ ವ್ಯಕ್ತಿಯನ್ನು ಬಡಿದು ತಿಂದುಬಿಡುತ್ತದೆ. ಎಂದು ಅವನ ಊಹೆ. ಆದರೆ ಬೆಕ್ಕು ತಾಯ್ತನದ ಘನತೆಗೆ ಕುಂದು ತರಲಿಲ್ಲ. ತನ್ನ ಮರಿಗಳ ಮೈನೆಕ್ಕಿ ಚೊಕ್ಕ ಮಾಡಿದ ನಂತರ, ಇಲಿಯ ಮರಿಗೂ ಅದೇ ಸೇವೆಯನ್ನು ಸಲ್ಲಿಸಿತು. ಸಾಕುತಾಯಿ ಸಾಕುಮಗುವಿನ ಬಾಂಧವ್ಯವು ಅಲ್ಲಿಗೆ ಕೊನೆಗಾಣಲಿಲ್ಲ. ಮರಿಗಳು ಬಲಿತು ಬೆಳೆದ ಮೇಲೆ, ಅವುಗಳ ಹಂಬಲ ತಾಯಿಬೆಕ್ಕಿಗೆ ಇರುವದಿಲ್ಲ. ಮರಿಗಳಿಗೆ ಆತಂಕವಿಲ್ಲದೆ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟುಬಿಡುವುದು ತಾಯಿಯ ಸ್ವಭಾವ. ಆದರೆ ಸಾಕುಮಗುವಿನ ಲಾಲನೆ ಪಾಲನೆ, ತಾಯಿಬೆಕ್ಕಿಗೆ ತ್ಯಜಿಸಲಾರದ ಹವ್ಯಾಸವಾಯಿತು. ಇಲಿಗೆ ಬೇಡವಾದರೂ, ಅದರ ಮೈಯನ್ನು ನೆಕ್ಕಿ ಚರ್ಮವನ್ನು ಚೊಕ್ಕಟ ಮಾಡುವುದು, ನಾಯಿಗಳ ಉಪದ್ರವದಿಂದ ಇಲಿಗೆ ಅಪಾಯವಾಗದಂತೆ ಕಾದು ಕುಳಿತಿರುವುದು, ಇಲಿಯು ಕೊಡುತ್ತಿದ್ದ ಕಿರುಕಳಗಳನೆಲ್ಲ ಸಹನೆಯಿಂದ ಸೈರಿಸುವದು ಇವು ಬೆಕ್ಕಿನ ದಿನಚರಿಯಾದವು. ತನ್ನ ಮರಿಗಳ ಮೇಲಿನ ಮಮತೆ ವಾತ್ಸಲ್ಯಗಳಿಗಿಂತ ಇಮ್ಮಡಿಯಾಗಿ ಸಾಕು ಮಗುವನ್ನು ಕಾಪಾಡುತ್ತಿತ್ತು. ಕೆಲವು ತಿಂಗಳು ಕಳೆದ ಬಳಿಕ ದುರದೃಷ್ಟದಿಂದ, ಇಲಿಯು ನಾಯಿಯ ಬಾಯಿಗೆ ತುತ್ತಾದಾಗ, ಬೆಕ್ಕು ೨–೩ ದಿನ ಆಹಾರವನ್ನು ಮುಟ್ಟದೆ ಕೊರಗಿತಂತೆ. ಆದರೂ ಬೆಕ್ಕು ಸ್ವಾರ್ಥಿ !

ನಾಯಕತ್ವದ ಹಿರಿಮೆ ಕಂಡುಬರುವದು ಸಮಾಜಜೀವಿಗಳಲ್ಲಿ. ಕಾಡುನಾಯಿ, ತೋಳ, ಆನೆ ಮೊದಲಾದ ಸಮಾಜ ಜೀವಿಗಳಲ್ಲಿ ನಾಯಕತ್ವವು ವಯಸ್ಸಾದ ಗಂಡಿನ ಹಕ್ಕು. ನಾಯಕತ್ವವು ಗಂಡಿನ ಸರ್ವಮಾನ್ಯವಲ್ಲ. ಒಂದು ಜಾತಿಯ ಜಿಂಕೆಗಳಲ್ಲಿ ಇದು ಹಿರಿಯ ಹೆಣ್ಣಿನ ಹಕ್ಕು. ಗುಂಪಿನ ಚಟುವಟಿಕೆಗಳೆಲ್ಲ ನಾಯಕನ ನೇತೃತ್ವದಲ್ಲಿಯೆ. ನಾಯಕನಿಲ್ಲದಿದ್ದರೆ, ಗುಂಪಿನಲ್ಲಿ ಶಿಸ್ತು ಇರುವುದಿಲ್ಲ. ಗುಂಪಿನ ಪ್ರತಿಯೊಂದು ಪ್ರಾಣಿಯೂ ನಾಯಕನ ಪ್ರಭಾವಕ್ಕೆ ಒಳಪಡುತ್ತದೆ. ನಾಯಕತ್ವದ ಹಕ್ಕು ಬಾಧ್ಯತೆಗಳನ್ನು ಕಾಪಾಡಿ, ಉಳಿಸಿಕೊಳ್ಳುವದು ಸುಲಭವಲ್ಲ. ಗುಂಪಿನ ಇತರ ಎಳೆಯ ಗಂಡುಗಳ ದೃಷ್ಟಿ ನಾಯಕತ್ವದ ಮೇಲೆ ನೆಟ್ಟಿರುತ್ತದೆ. ತನ್ನ ದೇಹದಲ್ಲಿ ಶಕ್ತಿಯಿರುವರೆಗೂ ನಾಯಕ–ಪ್ರಾಣಿ ಪ್ರಭುತ್ವವನ್ನು ನಡಸುತ್ತದೆ. ಶಕ್ತಿಗುಂದಿದ ನಾಯಕನನ್ನು ಇತರ ಸ್ಪರ್ಧಿಗಳು ಹೊಡೆದು ಓಡಿಸಿಬಿಡುತ್ತವೆ. ಸಂನ್ಯಾಸಿಗಳಂತೆ ಒಂಟಿಯಾಗಿ ಅಲೆಯುವದು ಪದಚ್ಯುತನಾದ ಮುದಿ ನಾಯಕನ ಹಣೆಯಬರೆಹ.

ಗುಂಪನ್ನು ರಕ್ಷಿಸುವದು, ಆಹಾರವಿರುವ ಕಡೆ ನಡೆಯಿಸುವದು, ಗುಂಪಿನಲ್ಲಿ ಶಿಸ್ತು ಜೀವನವನ್ನು ರೂಪುಗೊಳಿಸುವುದು, ಮರಿಗಳ ಪೋಷಣೆ–ಶಿಕ್ಷಣ ಇವೆಲ್ಲವೂ ನಾಯಕಜೀವಿಯ ಜವಾಬ್ದಾರಿ. ಈ ಜವಾಬ್ದಾರಿಯನ್ನು ಗಾಂಭೀರ್ಯ, ದಿಟ್ಟತನಗಳಿಂದ ಆನೆಯು ನಿರ್ವಹಿಸುವುದು; ಯುಕ್ತಿ ಸಾಹಸಗಳು, ತೋಳದ ಗುಂಪಿನ ನಾಯಕನ

ಹಿರಿಮೆ, ಮಮತೆ, ಆತಂಕ, ವಿವೇಚನೆಗಳನ್ನು ತೋರುವದು ಕೋತಿಗಳ ನಾಯಕ. ಒಂದು ನಿದರ್ಶನ ಕೊಡಬಹುದು. ಒಮ್ಮೆ ಕೋತಿನಾಯಕನು ಗುಡ್ಡವನ್ನು ಸೇರಿ, ಇತರ ಕೋತಿಗಳು ಬರುವುದನ್ನು ನಿರೀಕ್ಷಿಸುತ್ತಿತ್ತು. ಅರ್ಧ ಗುಂಪು ಗುಡ್ಡವನ್ನು ಸೇರಿತ್ತು. ಬೇಟೆಯ ನಾಯಿಗಳು ಹಠಾತ್ತನೆ ಹಿಂದುಳಿದ ಕೋತಿಗಳ ಮೇಲೆ ಬಿದ್ದುದನ್ನು ಕಂಡ ನಾಯಕನು ತನ್ನ ಇತರ ಅನುಯಾಯಿಗಳೊಡನೆ ಗುಡ್ಡದಿಂದ ಧಾವಿಸಿ ಬಂದು ನಾಯಿಗಳನ್ನು ಓಡಿಸಿ ಗುಂಪನ್ನು ರಕ್ಷಿಸಿತು ಗುಂಪೆಲ್ಲ ಗುಡ್ಡವನ್ನು ಸೇರುವುದರಲ್ಲಿದ್ದಾಗ, ನಾಯಿಗಳ ಮಧ್ಯೆ ಸಿಕ್ಕಿ ಕಿರುಚುತ್ತಿದ್ದ ಒಂದು ವರ್ಷದ ಮರಿಯು ನಾಯಕನ ಕಣ್ಣಿಗೆ ಬಿತ್ತು. ಆಗ ತನ್ನ ಪ್ರಾಣವನ್ನು ಲಕ್ಷಿಸದೆ ಶತ್ರುವಿನ ಮಧ್ಯೆ ನುಗ್ಗಿ ಮರಿಯನ್ನು ರಕ್ಷಿಸಿ ಗುಡ್ಡಕ್ಕೆ ಹೊತ್ತುಕೊಂಡು ಹೋಯಿತು. ತೆರೆಯ ಮರೆಯಲ್ಲಿ ನಿಂತು ಪ್ರಾಣಿಜೀವನವನ್ನು ನಿರೀಕ್ಷಿಸಬೇಕು. ಪ್ರಾಣಿಯನ್ನು ನಾವು ನೋಡುತ್ತಿದ್ದರೂ ಪ್ರಾಣಿಯ ಕಣ್ಣಿಗೆ ನಿರೀಕ್ಷಕನು ಕಾಣಬಾರದು. ಎದುರು ನಿಂತರೆ ಪ್ರಾಣಿಯು ಸಂಕೋಚದಿಂದಲೋ, ಭಯದಿಂದಲೊ ತನ್ನ ರಹಸ್ಯವನ್ನು ಬಯಲು ಮಾಡುವುದಿಲ್ಲ. ಹೀಗೆ ಪ್ರಾಣಿಜೀವನವನ್ನು ಒಳಹೊಕ್ಕು ನೋಡಿದರೆ, ತಮತಮಗೆ ಸಹಜವಾದ ಪರಿಸ್ಥಿತಿ, ಪ್ರಾಣಿಗಳ ತುಂಬುಜೀವನವನ್ನು ನಡೆಸುವ ದೃಶ್ಯವನ್ನು ಕಾಣಬಹುದು. ಮಾನವನಂತೆ ಯಾವ ವಿಧವಾದ ಶಿಕ್ಷಣವನ್ನು ಪಡೆಯದಿದ್ದರೂ, ಅವುಗಳ ರೀತಿನೀತಿಗಳನ್ನು ತಿದ್ದಲು ರಾಜಕೀಯ ಅಥವಾ ಧಾರ್ಮಿಕ ಕಟ್ಟುಕಾಯಿದೆಗಳಿಲ್ಲದಿದ್ದರೂ ಕೃತಕವಲ್ಲದ ಅವುಗಳ ಜೀವನದಲ್ಲಿ ಶಿಸ್ತು, ಸಂಯಮಗಳಿವೆ; ಶಾಂತಿ ಇದೆ; ತೃಪ್ತಿ ಇದೆ, ಸೌಂದರ್ಯವಿದೆ.

— ಎ. ನಾರಾಯಣರಾವ

## ಅಭ್ಯಾಸಗಳು

**ಪ್ರಶ್ನೆಗಳು:—**

೧. ಕ್ರಿಯೆಗೆ ಪ್ರತಿಕ್ರಿಯೆ ಜೀವಂತತನದ ಲಕ್ಷಣ ಎಂದರೇನು ?

೨. ಮನುಷ್ಯನು ತನ್ನ ಸಂಸ್ಕೃತಿಯ ಬಲದಿಂದ ಸಂಪಾದಿಸಿದ ಗುಣಗಳಾವವು ?

೩. ಇರುವೆಗಳಲ್ಲಿರುವ ಉದಾತ್ತ ಗುಣಗಳನ್ನು ಉದಾಹರಣೆಗಳೊಂದಿಗೆ ಹೇಳಿರಿ.

೪. ಮನುಷ್ಯನಿಗೆ ನಾಚಿಸುವಂತಹ ಯಾವ ಯಾವ ಗುಣಗಳು ಇತರ ಪ್ರಾಣಿಗಳಲ್ಲಿ ಇರುವವು.

೫. ಅವುಗಳ ಶಿಸ್ತು, ಸಂಯಮ ತೃಪ್ತಿ, ಸಾಂಘಿಕ ಜೀವನದೊಳಗಿನ ಹಿರಿಮೆಯನ್ನು ತೋರಿಸುವ ಒಂದೊಂದು ಉದಾಹರಣೆಗಳನ್ನು ಹೇಳಿರಿ.

**ಭಾಷಾಭ್ಯಾಸ:—**

೧. ಕೆಳಗಣ ವಾಕ್ಯಗಳನ್ನು ವಿವರಿಸಿರಿ.

(ಅ) ಇರುವೆಯ ಹೊಟ್ಟೆ ಸಮಾಜದ ಕಣಜ.

(ಆ) ಸನ್ಯಾಸಿಯಂತೆ ಒಂಟಿಯಾಗಿ ಅಲೆಯುವದು ಪದಚ್ಯುತನಾದ ಮುದಿ ನಾಯಕನ ಹಣೆಬರಹ.

(ಇ) ಸ್ವಾರ್ಥತೆಯ ಸಾಕಾರ ಮೂರ್ತಿ ಬೆಕ್ಕು.

(ಈ) ಪರಿಸ್ಥಿತಿಯಲ್ಲಿ ಬದಲಾದರೂ ಒಂದೇ ಬಗೆಯ ಪಡಿಯಚ್ಚಿನ ನಡೆವಳಿಕೆಯು ಆಯಾ ಪ್ರಾಣಿಯ ಹುಟ್ಟುಗುಣ.

**ಶಬ್ದ ವಿಚಾರ:—**

೧. ಸಹಜ—ಇದರಂತೆ ಕೊನೆಗೆ 'ಜ' ಪ್ರತ್ಯಯ ಸೇರಿ ಆದ ಐದು ಶಬ್ದಗಳನ್ನು ಹೇಳಿರಿ.

೨. 'ತನ' ಪ್ರತ್ಯಯ ಹಚ್ಚಿ ಐದು ಭಾವನಾಮಗಳನ್ನು ಹೇಳಿರಿ.

೩. ಪಳಗು, ಚಾಳಿ, ಎಣ್ಣೆ, ಅದೃಷ್ಟ, ಕಾಪಾಡು—ಇವುಗಳ ಉತ್ಪತ್ತಿಗಳನ್ನು ಹೇಳಿರಿ.

**ವಾಕ್-ಶಿಕ್ಷಣ:—**

ಮಾನವ ವಿರುದ್ಧ ಉಳಿದ ಪ್ರಾಣಿವರ್ಗ ಇವೆರಡರ ಪಕ್ಷವಹಿಸುವ ಎರಡು ಪಂಗಡ ಮಾಡಿ ಕ್ಲಾಸಿನಲ್ಲಿ ತಮ್ಮ ತಮ್ಮ ಪದ ಮೇಲ್ಮೆಯನ್ನು ಹೇಳುವ ಒಂದೊಂದು ಗುಣವನ್ನು ಒಬ್ಬೊಬ್ಬರು ಎತ್ತಿ ಹೇಳಬೇಕು.

**ಚರ್ಚೆ:—**

ಬುದ್ಧಿಯಿಂದ ಮಾನವನ ಅವನತಿಯಾಗಿದೆ.

**ಬರೆಹ:—**

ಬದಲಾದ ಪರಿಸ್ಥಿತಿಯನ್ನು ಅರಿತು ತಕ್ಕಂತೆ ಮಾರ್ಪಾಟು ಮಾಡಿಕೊಂಡ ಸಮಾಜಗಳು ಸುಸ್ಥಿತಿಯಲ್ಲಿವೆ ಎಂಬುದನ್ನು ಕೆಲವು ಉದಾಹರಣೆಗಳಿಂದ ವಿವರಿಸಿರಿ.

# ೯. ಕಾಮದಹನ

[**ಈ ಸಂಭಾಷಣೆಯ ಮಾತುಮಾತಿನಲ್ಲೂ ನಗೆ ತುಂಬಿ ತುಂಬಿ ಹೊರಸೂಸುತ್ತಿದೆ.** ವಿನೋದದ ಇದೊಂದು ಬಗೆ. 'ಬೈರಿಗೆ' ಎಂಬ ಪಾಠದಲ್ಲಿ ಅಡಕವಾದ ವಿನೋದವು ಇನ್ನೊಂದು ಬಗೆ. ಹೀಗೆ ನಗೆ-ನಗೆಗಳಲ್ಲಿರುವ ಸೂಕ್ಷ್ಮ ವ್ಯತ್ಯಾಸಗಳನ್ನು ಅರಿತಲ್ಲಿ ಅಭಿರುಚಿಯು ರೂಪುಗೊಳ್ಳುವುದು, ರಸಿಕತೆಯು ಹೆಚ್ಚುವುದು. ನಗೆಯು ಉಂಟಾಗುವ ಸ್ಥಳಗಳನ್ನು ಗುರುತಿಸಿ, ಅಲ್ಲಿ ಏಕೆ ನಗು ಬರುವುದು ಎಂಬುದನ್ನು ಪರಿಕಿಸಬೇಕು ವೈಚಿತ್ರ್ಯ-ವಿಸಂಗತಿ-ವಿಕೃತಿಗಳ ಮೂಲಕ ಉಂಟಾಗುವ ನಗೆಯ ಪ್ರಕಾರವನ್ನು ಇಲ್ಲಿ ಅಭ್ಯಾಸಿಸಬಹುದು. ಶ್ರೀರಂಗರು ಬರೆದ 'ಶ್ರೀರಂಗ' ಭೂಮಿ ಎಂಬ ಏಕಾಂಕ' ನಾಟಕಸಂಗ್ರಹದಿಂದ ಈ ಭಾಗವನ್ನು ಆಯ್ದುಕೊಳ್ಳಲಾಗಿದೆ.]

ಎಲ್ಲರ ಮನೆಗಳಲ್ಲಿಯ ಒಂದು ಕೋಣೆ. **ಸಂಸಾರಗಾಮಿಯೊಬ್ಬನು ಕುಳಿತಿದ್ದಾನೆ. ಒಂದು ಮೂಲೆಯಲ್ಲಿ ಪ್ರಾಚೀನವಿದ್ಯೆಯನ್ನೆಲ್ಲ ಕಟ್ಟಿಟ್ಟಂತಿರುವ ಪುಸ್ತಕಗಳದೊಂದು ಗಂಟು, ಆ ಹಳೆಯ ವಿದ್ಯೆಯನ್ನು ಕಲಿತವರ ತಲೆಯಂತೆ, ಮಾಸಿದ ಹರುಕಾದ ಒಂದು ಬಟ್ಟೆಯಲ್ಲಿ ಅವುಗಳನ್ನು ಸುತ್ತಿದೆ. ಇಷ್ಟರಲ್ಲಿಯೆ ಬಲಬದಿಯ ಬಾಗಿಲಿನಿಂದ, ಸಂಸಾರದ ರಣಾಂಗಣದಲ್ಲಿ ಕಾದು, ಹೋರಾಡಿ, ದಣಿದು**

ಹಣ್ಣಾಗಿ ಹೌಹಾರಿದ ಕಳೆಯಿಂದ ಕೂಗುತ್ತ **ಸಂಸಾರಿಕಾಮಿಯೊಬ್ಬನು** ಬರುವ. ಬಂದವನೇ——]

**ಸಂಸಾರಿಕಾಮಿ:**— ಅಯ್ಯಯ್ಯೊ, ಸಾಯಿತ್ತೀನರೋ! ನೀರು—ಒಂದು ಗುಟುಕು ನೀರು—ಯಾರಾದರೂ ಕೊಡಿರೊ! (ಸಂಸಾರಗಾಮಿಯನ್ನು ನೋಡಿ) ಏ—ನೀರು—ನೀರು ಕೊಡು ಮೊದಲು. ಇಲ್ಲಾ ಅಂದರ ಅಯ್ಯೊ! —ಗಂಟಲು ಬತ್ತಿ ಬದನೆಕಾಯಿ ಆಗೇದ ...ಕಡೆಗೆ ಒಂದು ಹೋಳು ಅಡಿಕೆ, ಗಂಟಲು ಆರಿಸಿಕೊಳ್ಳಲಿಕ್ಕೆ— (ಚೀರುತ್ತ) ಇಲ್ಲಾ ಅಂದರ ಅಡಕೊತ್ತು, ಅಡಕೊತ್ತೊ ಗಂಟಲು ಹರಿದುಕೊಂಡು ಸತ್ತ ಹೋಗ್ತೀನಿ ... ನೋಡಬ್ಯಾಡೊ, ನೋಡಬ್ಯಾಡ—ಬೆಪ್ಪು ಬಡದವರ್ಹಾಂಗ.... ನೀರು....

**ಸಂಸಾರಗಾಮಿ:**— (ಮುಗುಳ್ನಗೆಯಿಂದ) ಅಲ್ಲೊ, ನನ್ನಲ್ಲಿ ಬಂದು ನೀರು ಕೇಳೋ ನೀನೂ ಒಬ್ಬ ಬೃಹಸ್ಪತೀನೇ ಅಲ್ಲ!.... ನಿನ್ಹಾಂಗ ಮನೇವಳಗ ಹೆಂಡಿರು ಮಕ್ಕಳು ಇದ್ದರ ನೀರು—ನೀರು ಅಂತ ಒದರಬಹುದಾಗಿತ್ತು—ಯಾರಾದರೂ ತಂದು ಕೊಡತಿದ್ದರು.

**ಸಂಸಾರಕಾಮಿ:**— (ಕೆರಳಿ) ಏ—ಏ—ಯೇ, ಹೆಂಡಿರುಮಕ್ಕಳು ನೀರು ಕೊಡೋದು ಸತ್ತಮ್ಯಾಲೊ! ಈಗ ನೀನು ಕೊಡೊ — (ಅಣಕಿಸಿಂದ) ರಾಮಾ ರಾಮಾ, ಹೆಂಡಿರಂತ! ಮಕ್ಕಳಂತ!

**ಸಂಸಾರಗಾಮಿ:**— (ಏನೂ ತಿಳಿಯದೆ) ಸಾಕ್ಮಾಡೊ — ಈ ನಾಟಕದ ಸೋಗು!

**ಸಂಸಾರಕಾಮಿ:**— (ಬೆರಗಿನ ಸಿಟ್ಟಿನಿಂದ) ನಾಟಕದ ಸೋಗು! ಅಯ್ಯೊ— ನೀರು! ಹಂ.... ಸ್ವತಃಕ್ಕೆ ಸಂಬಳ ತಕ್ಕೊಂಡು ಮುಂದಿಗಾಗಿ ಸತ್ತು ಏಳೋ ನಾಟಕ ಅಲ್ಲ ಇದು, ಸ್ವತಃದ ಸಂಬಳ ಸಾಲದೆ ಮುಂದಿಗಾಗಿ ಸತ್ತೇ ಹೋಗೋ ಸಂಸಾರ ಇದು!

**ಸಂಸಾರಗಾಮಿ:**— (ಕೆಣಕುವವನಂತೆ) ಓಹೊಹೋ! ನಿನಗೇನು ಕಡಿಮೆಯೊ? ಹೆಂಡಿರು ಮಕ್ಕಳು ಸಂಸಾರ ಕಟ್ಟಿಕೊಂಡು ಪುಣ್ಯಸಂಪಾದನೆ ಮಾಡೋವ ನೀನು—

**ಸಂಸಾರಕಾಮಿ:**— (ಕನಸಿನಲ್ಲಿಯಂತೆ) ಹೆಂಡಿರು! ಮಕ್ಕಳು! ಸಂ—ಸಾಆ— ರಾಆ ...! ಪುಣ್‌ಣ್‌ಣ್‌ಯಾ.... (ಕ್ರೂರಾವೇಶದಿಂದ) ಹುಚ್ಚಾ, ನನಗೂ ಮೊದಲು ಹಾಂಗೇ ಅನಿಸಿತ್ತು....(ತಿರಸ್ಕಾರದಿಂದ) ಈ ಶಾಸ್ತ್ರ ಬರೆದವರೆಲ್ಲಾ ಹೆಣ್ಣುಹುಡುಗೆ ಯರ ತಂದೆಯವರ ಏಜಂಟ (agent) ರು ಇದ್ದಿರಬೇಕು ಅಂತೀನಿ.... ಪುಣ್ಯ.... ಸ್ವರ್ಗ .... ಅಯ್ಯೊ! ಬ್ಯಾಡ ನನಗ.... ಮೊದಲು ನೀರು-ನೀರ್— (ಹಲ್ಲು ಕಡಿಯು ವನು.)

**ಸಂಸಾರಗಾಮಿ:**— (ಏಳುತ್ತ) ತಡೆಯೊ, ತಡೆ.... ಕೊಡ್ತೀನಿ ನೀರು.... ಮೊದಲು ನಿಧಾನದಿಂದ ಬೆವರನ್ನಾದರೂ ಒರೆಸಿಕೊ.

**ಸಂಸಾರಕಾಮಿ:**— (ಪಂಚಮಹಾಭೂತಗಳ ಸಾಕ್ಷ್ಯವಾಗಿ ಪ್ರತಿಜ್ಞೆಯನ್ನು ಹೊರುವ ನಾಯಕನಂತೆ) ಬೆವರು! ಬೆವರು! (ಹಣೆಯನ್ನು ಸವರುತ್ತ) ಬೆವರು ಅಲ್ಲ

ಇದು.... ಹೆಂಗಸರ ಮೋಹದಿಂದ ಸಾವಿರ ಕಣ್ಣಾದುವು ಇಂದ್ರಗ, ಗೊತ್ತದೆ ಏನ್ನಿನಗ? ಆ ಹೆಂಗಸರಿಗೆ ಮೋಹಿಸಿ ಸಂಸಾರದ ಇಂದ್ರಜಾಲದೊಳಗ ಸಿಕ್ಕ ಗಂಡಸಿಗೂ ಸಾವಿರ ಕಣ್ಣಾದುವು; ಆ ಸಾವಿರ ಕಣ್ಣುಗಳೊಳಗಿಂದ ಸಾವಿರ ಕಣ್ಣೀರಿನ ಪ್ರವಾಹ ಸುರಿಯಹತ್ತೇದ, ಇದು ಬೆವರಲ್ಲ. ( ಹಣೆಯಿಂದ ಬೆವರು ಸವರುವನು. ) ದುಡಿದು ದುಡಿದು, ಬಳಲಿ ಬೆಂಡಾಗಿ, ಬಾಡಿದ ಈ ಎಲುಬಿನ ಬಣಿವೆಯೊಳಗಿಂದ ನೀರಾಗಿ ಸೋರೋ ರಕ್ತರಸ ಇದು—ಬೆವರಲ್ಲ (ditto). ಸಂಸಾರದೊಳಗ ಮುಳುಗಿ ತೋಯ್ದು ನೆನೆದು ನೆನೆದು ಉಪ್ಪಾಗಿ—ನೀರಾಗಿ ಕರಗಹತ್ತಿದ ಸಂಸಾರಿಗನ ದೃಶ್ಯ ಇದು-ಬೆ-ವ-ರ-ಲ್ಲ. ( ಸಂಸಾರಗಾಮಿಯು ಒಳಗೆ ಹೋದುದನ್ನು ಕಂಡು ) ತಿಳಿಯಿತೆ? ಅರೆದು ಅರೆದು ಎಳ್ಳಾದ ದೇಹದ ಕೂಪ ಬಿಡೋ ಧರ್ಭದ ಜಲಪಾತ ಇದು.- ( ಸಂಸಾರಗಾಮಿಯು ತಂದ ನೀರನ್ನು ಗುಟಕರಿಸಿ ) ಅಯ್ಯೊ – ನೀರು ಅಂದರ ಬರೇ ನೀರನೆ ತಂದೆಯಾ ? ಒಂದಿಷ್ಟು ಅಘು ಇಲ್ಲ? ಅದನ್ನಿಷ್ಟು ಹಾಕಿ ಅತಿಥಿಸತ್ಕಾರ ಮಾಡಿ ಪುಣ್ಯಕಟ್ಟಿಕೋಬಾರದ ಮಹಾರಾಯಾ !

**ಸಂಸಾರಗಾಮಿ:**– (ಅವನನ್ನು ದಿಟ್ಟಿಸಿ ) ಸಾಕೊ ! ನಿನಗೇನು ಹುಚ್ಚು ಹಿಡಿದದ ಅಂತೀನಿ ! ಹೊತ್ತಿಗೂಟ್ಮಾಡಿ, ಅಷ್ಟಕ್ಕಷ್ಟ ಕೆಲಸ್ಮಾಡಿ, ಹೆಂಡಿರುಮಕ್ಕಳ ಜೋಡಿ ಸುಖದಿಂದ ಕಾಲ ಕಳೆಯೋದು ಬಿಟ್ಟು—

**ಸಂಸಾರಕಾಮಿ:**– (ಚೀರುತ್ತ) ಅಘು ಅಘು ಅಂತ ಬೊಬ್ಬೆಯಿಡೋದು ಅದ–ಕ್ಕೇ. ( ನೀರಿನ ಪಾತ್ರೆಯನ್ನು ಕೆಳಗಿಟ್ಟು ) ಹುಚ್ಚಾ, ಹುಚ್ಚಾ, ಸಂಸಾರ ಅಂದರ ಏನಂತ ತಿಳಿದೀದಿ? ಹೊತ್ತಿಗೂಟ್ಮಾಡಿ-ಅಂತ! ಯಾರ ಹೊತ್ತಿಗೆ? ಕೇಳು– ಹೇಳ್ತೀನಿ ಕೇಳು. ಊಟ್ಮಾಡೋದು ನನ್ನ ಹೊತ್ತಿಗೆ ಅಲ್ಲ–ಮಂದಿಯ ಹೊತ್ತಿಗೆ– ಸರಿಯಾಗಿ. ತಡ ಮಾಡಿದರ ಕೆಲಸ ತಪ್ಪಿ ನಾಳನೂಟಾನೂ ಹೋದೀತು ಅನ್ನೋ ಸಂಕ–ಟಕ್ಕ–, ಚಳಿಯಿಂದ ನಡುಗುವವ ಬೆಂಕಿಯೊಳಗ ಹುಲ್ಲು ಹಾಕೋಹಾಂಗ, ತುತ್ತಿನ ಮ್ಯಾಲ ತುತ್ತು—ತುತ್ತಿನ ಮ್ಯಾಲ ತುತ್ತು— ಹೆದರಿದ ನಾಯಿ ಹಿತ್ತಲ ದೊಳಗಿನ ಎಂಜಲೆಲೆ ಸವರಿ ನೆಕ್ಕಿ ನುಂಗೋಹಾಂಗ, **ತಿನ್ನೋದು–ಊಟ ಅಂತ!** (ಉಸಿರೆಳೆದು) ಅದೂ ಆಯ್ತು ಅಂತ ತಿಳಿ–ಆಮ್ಯಾಲಿನ ಗೋಳು? ಮನಸು ಮನೆ ಯೊಳಗ, ಹೊಟ್ಟೆ ಹಾಸಿಗೆಯೊಳಗ, ಕಾಲು ಕಚೇರಿಯೊಳಗ. ಹೋಗಲಿಕ್ಕೆ ಅವಸರವಸರ. ಆಮ್ಯಾಲೆ ನೋಡೀಯಂತೋ ಹೆಂಡಿರ ಮಕ್ಕಳ ಸರಸ–ರಸಿ– ಸಲ್ಲಾಪ! 'ನನ್ನ ಪೈರಣ–ಪೈರಣ–ಎಲ್ಲಿರೊ?' ಅಂತ ಉಂಡು ಶತಪಾದಕ್ಕ ಸುರೂ.... ಅದನ್ನ ಹಾಕ್ಕೊಂಡು ಹೋಗಿಬಿಟ್ಟಾನ ನನ್ನ ಹಿರೇಮಗ ! ಮಗ ಇದ್ದರ ಸತ್ಯಮ್ಯಾಲ ಸ್ವರ್ಗ ಅಂತ ಒಂದು ಶಾಸ್ತ್ರ ಹೇಳಿದರ, ನನ್ಮಗ ಒಂದ್ಹೆಜ್ಜೆ ಮುಂದ್ಹೋಗಿ, ಇದ್ದಾಗೇ ನನ್ನ ಸ್ವರ್ಗ ಕಾಣಿಸಬೇಕೂ ಅಂತ ಆತುರ ! 'ಎಲೆ, ಎಲೆ–ಏ–ಏನೇ, ನನ್ನ ಇನ್ನೊಂದು ಪೈರಣ–ಪೈ–ರ–ಣ–ಥೂ!' ಅಂತ ಗೊಳಿಡುವಾಗ "ನಾನು ಪೈರಣ ಕೊಳ್ಳುವ–ರಾ ಗೇ ನನಗೆ ಕೇಳ್ತಾರಲ್ಲ!" ಅಂತ ಒಳಗಿನಿಂದ ಪಾತಿವ್ರತ್ಯಶಾಸ್ತ್ರದ

ಉತ್ತರ! ಅಂತೂ ಕಡೆಗೆ ಗಂಜಿಗೆ ಕೊಡಲಿಕ್ಕೋಂತ ಕಸದೊಳಗೆ ಬಿನಾಡಿದ ಮಾಸಿದ ಪೈರಣ ಬಂತೇ ನನ್ನ ಪಾ–ಲಿಗೆ! ... ಮುಗಿಯಲಿಲ್ಲ ಇಷ್ಟಕ್ಕ! ಬರೇ ಪೈರಣ ಹಾಕ್ಕೊಂಡರ ಕೇಳ್ಬೇಕಲ್ಲ ಕಚೇರಿಮಳಗ? ಅವರದೂ ಒಂದು ಶಾಸ್ತ್ರ—ಕೋಟು ಬೇಕೇಬೇಕು. ಆಗಲೀ–ಈ–ಈ. ಮತ್ತೆ ನಾನು ಕನ್ನಾಕ್ಕ ವರ ಹುಡುಕೋವರ್ಹಾಂಗ ಗೋಡೆ–ಗೋಡೆಗೆ ಕೇಳಲಿಕ್ಕೆ ಸುರೂ 'ನನ್ನ ಕೋಟು—ಕೋಟು—ಥೂ!' ಇಷ್ಟ ರೊಳಗ ತೂತಬಿದ್ದ ರಬ್ಬರ ಚಂಡಿನ್ಹಾಂಗ ಎಲ್ಲಿಂದಲೊ ಕಿರ್ ಅಂತ ಕೂಸಿನ ದನಿ. "ಎಚ್ಚರಾಯ್ತಿನ್ನೋಡಬಾರ್ದ? ಒಂದಕ್ಕುಪಯೋಗ ಬೀಳೋದಿಲ್ಲ" ಅಂತ ಅಡಿಗೇ ಮನೆಯಿಂದ ಬಿಸಿ ಶಾಪ ಬರೋದರೊಳಗ ಕೂಸಿನ್ನೆತ್ತಿದೆ–ಕೆ–ಳ–ಗೇ ಇ–ದೆ ನ–ನ್ನ ಕೋ–ಟು........ಹಂ–ಹಂ– ನಿನ್ನ ಕೂದಲಿನ ತೋರಣ ತೂಗಬ್ಯಾಡ–ಅದಕ್ಕೇ ನಿನಗ ಸಂಸಾರ ಗೊತ್ತಿಲ್ಲ ಅನ್ನೋದು. ಕೂಸು ಎಚ್ಚರಾದ್ದು ನನ್ನ ಕೋಟು ಹೊಲಸು ಮಾಡಿದ್ದಕ್ಕ!........ ನಗ್ತೀಯಾ ಇದನ್ನ ಕೇಳಿ! ನೀನೂ ನಗ್ತಿಯಾ? ನಗರಿ—ಸಂಸಾರದ ಗೋಳು ಯಾರಿಗೂ ಕಾಣಿಸೋದಿಲ್ಲ ಇದೇನು ಅಂತಹಾ ಗೋಳು ಅನ್ನಬ್ಯಾಡ. ಕೋಟು ಇಲ್ಲದಿದ್ದರೂ ನಡೀತದ ಆದರ ರುಮಾಲು? 'ರುಮಾಲು ಇಲ್ಲರೋ?' ಅಂತ ಗೋಳಿಟ್ಟರ ರುಮಾಲು ಎಲ್ಲಿದೆ ಅಂತ ತಿಳಿದೀದಿ? ಹಿತ್ತಲದೊಳಗ ನನ್ನ ಮುದ್ದು ಮಗಳು ಅದನ್ನ ಸೀರೆ ಅಂತ ಸುತ್ತಿಕೊಂಡು, ಸಡಗರ ದಿಂದ ಸುಳಿದಾಡ್ತಾಳ. ಆಕೆಗೊಂದು, ರುಮಾಲಿಗೊಂದು ಏಟುಕೊಟ್ಟು ರುಮಾಲು ಸುತ್ತುತ್ತಾಆನೇ ಸುರೂ ಮೊಚ್ಚೆ ಹುಡುಕಲಿಕ್ಕೆ...ಇಷ್ಟರೊಳಗ ಮನೆ ಮುಂದಿನ ಬೀದಿಯೊಳಗ ನಡೆದಿದೆ. ಇನ್ನಿಬ್ಬರ ಮಕ್ಕಳ ಚಿನ್ನಾಟ! ಒಬ್ಬ ಬಡಿಗೆ ಯಿಂದ ಹೊಡೀತಾನ–ಅದೊ! ನನ್ನ Walking stick (ವಾಕಿಂಗ್ ಸ್ಟಿಕ್)ಉ. "ಥೂ. ನಿಮ್ಮ ತಲೆ–ತಲೆ ಒಡೆದೇನು" ಅಂತ ಗದ್ದರಿಸೋದರೊಳಗ ಮೊಚ್ಚೇನೂ ಅಲ್ಲೇ ಇರಬೇಕ? ಇನ್ನೊಂದು ಪುತ್ರರತ್ನ ಅವನ್ನ ಒಂದರ ಮುಂದೊಂ ದಿಟ್ಟು ಬೂದಿ–ಇದ್ದಲಿ ತುಂಬಿ ಗಾಡಿ ಮಾಡಿ ಆಡ್ತಾನ–ಟ್ರೇನ.... (train) ಉ 'ಗಾಡಿ—ಯೊಳಾಡಿ' ಅಂತ ಪುಸ್ತಕದ ಗಾಡಿ ಅಲ್ಲ. ಇದು ನೋಡೋ ಮಕ್ಕಳ ಸುಖ! ನಡೆಯೋದೇ ದಿನಾಲು ಈ ಪರಿಯಿಂದ ಮಕ್ಕಳ ಖಾನೇಸುಮಾರಿ!........ ಕೋಟು–ರುಮಾಲು–ಸ್ಟಿಕ್ಕು–ಮೊಚ್ಚೆ ಆಯ್ತಿಲ್ಲ? ಇನ್ನೇನು? ಕಚೇರಿಗೆ ಹೊರ ಡೋದೇ ಅಂತ ಥಡಪಡಿಸಿ ಎಡವತಾ ಮುಗ್ಗುತಾ ಹೊರಗಬಂದರ ಎಲ್ಲರ ಕಣ್ಣೂ ನನ್ನಮ್ಯಾಲೇ–ಎಲ್ಲಾರೂ, ಈಗ ನೀಹ್ಯಾಂಗ ನಗತೀ, ಹಾಂಗೇ ನಗುವರು ನನ್ನೋಡಿ. ಇವರಿಗೇನು ಧಾಡಿ ಅಂತ ಸಿಟ್ಟಿನಿಂದ ಮುಖ ಕೆಳಗೆ ಮಾಡಿಕೊಂಡು ನಡೀತೀನಿ— ಅನರ್ಥ! ಕೆಳಗ ನೋಡಿದರ ಅನರ್ಥ!....ಇಷ್ಟೊಂದು ಗದ್ದಲದೊಳಗ ಊಟಕ್ಕಂತ ಉಟ್ಟುಕೊಂಡ ಮಡಿ ಕಳೆದೇ ಇಲ್ಲ— ಅದರ ಮ್ಯಾಲೇ ಕೋಟು–ರುಮಾಲಿನ ಸಡಗರ– ಅಯ್ಯೋ! ನಿಂತ್ನಿಂತಲ್ಲೇ ಜೀವ ಹೋಗಬಾರ್ದ? ಅಂತ ಅನಿಸ್ತದ—ಆದರ ನಿಂತುಬಿಡಲಿಕ್ಕೆ ಹೊತ್ತಿಲ್ಲ. ಮತ್ತೆ ಓಡೋದು ಮನೆಗೆ.... ಮಡಿಮೈಲಿಗೆಯ

ಮಂತ್ರಘೋಷ ನಡೆದಿರತದ ಅಡಿಗೆ ಮನೆಯೊಳಗ. ಆ ವಾದ್ಯ-ವಾಲಗದ ಸಡಗರದಿಂದೇ ಮಡೀ ಬದಲ್ಮಾಡೋದು ...ಇನ್ನಾದರೂ ಕಚೇರಿಗೆ ಹೋಗಲಿಕ್ಕೆ ಏನಡ್ಡಿ?.... ಸ್ವಲ್ಪ ತಡೆಯೊ, ಸ್ವಲ್ಪ ತಡೆ, ನಂದೀಕೋಲಿಗೆ ಡಬ್ಬುಹಾಕಿದ ತಂಬಿಗೆಹಾಂಗ ತಲಿ ತೂಗಬ್ಯಾಡ... ಒಂದು ಕಾಲು ಸಂಸಾರದಾಗ, ಒಂದು ಕಾಲು ಸ್ಮಶಾನದಾಗ ಅನ್ನೋಹಾಂಗ ಹೊಸ್ತಿಲ ದಾಟತಿರತೇನೋ ಇಲ್ಲೋ—ಇಷ್ಟರೊಳಗೇ ದಶ-ದಿಕ್ಕುಗಳಿಂದ ಏಕಕಾಲಕ್ಕೆ ಏಕತಾನವಾಗಿ 'ಅಪ್ಪಾ, ಅವ್ವ ಕರೀತಾಳ—ಅವ್ವ ಕರೀತಾಳ' ಅಂತ ಆರ್ತನಿನಾದ. ಎಲೊ, ಎಲೊ, ತಡೆಯೊ ನಿನ್ನ ಮೀಸೆಯ ಲತಾಗುಲ್ಮಗಳೊಳಗಿಂದ ಸೂಸುವ ಮುಗುಳ್ನಗೆಯ ಮಂದಾಕಿನೀಪ್ರವಾಹವನ್ನು ತಡೆ. ಅದು ಅಂತಿಂತಹ ನಿನಾದ ಅಲ್ಲ. 'ತಿಷ್ಠ ತಿಷ್ಠ' ಅಂತ ವಿಶ್ವಾಮಿತ್ರ ಕೂಗಿದಾಗ ತ್ರಿಶಂಕು ಅಲ್ಲೇ ಆಕಾಶದೊಳಗೆ ತಲೆಕೆಳಗ-ಕಾಲು ಮ್ಯಾಲ ಆಗಿ ತೂಗ್ತಿತ್ತ ಅಂತ ಹೇಳ್ತಾರಲ್ಲ—ಹಾಂಗೇ 'ಅವ್ವ ಕರೀತಾಳ' ಅನ್ನೋ ಕೂಗ ಕೇಳಿ ಸಂಸಾರಿಗನ ತಲಿ ಕೆಳಗ, ಕಾಲು ಮ್ಯಾಲ, ದೇಹ ಹೊಸ್ತಿಲ ನಡುವೆ ಆಗಿಬಿಡ್ತದ. ಆಕೆ ಯಾಕ ಕರೀತಾಳ ಅಂತ ತಿಳಿದೀದಿ? 'ದಣಿದೀನಿ ಅಂತಿದ್ದಿರಿ, ಬಹಳಹೊತ್ತು ಕೂಡಬ್ಯಾಡಿರಿ ಕಚೇರಿಯೊಳಗ,' ಇಲ್ಲಾ ಅಂದರ 'ನಿಮ್ಮ ವಿಯೋಗ ಬಹಳೊತ್ತು ಸಹಿಸೋದಾಗೋದಿಲ್ಲ ನನ್ನ ಕಡೆಯಿಂದ,' ಅಥವಾ 'ಪ್ರಾಣನಾಥಾ, ಹೋಗುವಾಗ ಕೊನೆಯದೊಂದು ಪ್ರೇಮದ ಮಾತನಾಡಬಾರದೆ?' ಅಂತ ನೀನು ಕೇಳಿದ ಕತೆ, ನೋಡಿದ ನಾಟಕದೊಳಗಿನ ಮಾತು ಹೇಳಲಿಕ್ಕೆ ಅಲ್ಲ. "ನಾಳೆ ನಿಮ್ತಂದೆಯವರ ಶ್ರಾದ್ಧ ಒಂದ್ಹತ್ತು ದಿವಸಾಯ್ತು ಒಂದೇ ಸವನೆ ಒದರಿಕೋತೀನಿ, ಬ್ರಾಹ್ಮಣರಿಗೆ ಹೇಳೀರೋ ಇಲ್ಲೊ, ಸಾಮಾನಂತೂ ಒಂದೂ ಇಲ್ಲ...." ಆಯ್ತು. ಅಲ್ಲಿಗೇ ಮೂರ್ಛೆ ತಾಳಿ ಬಿದ್ದುಬಿಟ್ಟ ನಾನು ಅಂತ ತಿಳಿ, ಮುಂದಿನ ಮಾತು ಕೇಳಿಸೋದೇ ಇಲ್ಲ, ಕೇಳಿಕೊಂಡಲ್ಲೂ ಸುಖ ಇಲ್ಲ....'ಹುಂ-ಹುಂ' ಏನಂತಿ! ಆ ದಿನದ ಕಚೇರಿ ಕೆಲಸಕ್ಕ ಶ್ರಾದ್ಧ....ಕೂತ್ಕೊಂಡೇ ಬಿಟ್ಟ ಅಲ್ಲೇ ಕಾಗದಾ ಪೆನ್ಸಿಲ್ ತಕ್ಕೊಂಡು. "ಅಕ್ಕಿ, ಬ್ಯಾಳಿ, ಬೆಲ್ಲ—ಬ್ರಾಹ್ಮಣರಿಗೆ ಹೇಳಲಿಕ್ಕೆ ಮರೆಯಬ್ಯಾಡಿರಿ— ದೊನ್ನಿ, ಎಲಿ— ಮತ್ತ ಒಂದೆರಡು ರೂಪಾಯಿ ಚಿಲ್ಲರೆ ಈ ಸಲ ಆದರೂ ನೆನಪಿಲೆ ತಕ್ಕೊಂಡು ಬರ್ರಿ—ಬೆಣ್ಣಿ—ಮತ್ತೆ ಅಲ್ಲೇ ಹೋಗಿರತೀರಿ, ಆ ಭಾಗೀರಥಿಬಾಯಿಯ ಹುಡುಗರನ್ನಿಷ್ಟು ಊಟಕ್ಕ ಹೇಳ್ಲಿಕ್ಕೆ ಮರೀಬ್ಯಾಡ್ರಿ, ಮೊನ್ನೆ ನಮ್ಮ ಹುಡುಗರನ್ನ ಕರೆದಿದ್ದರು ಅವರು; ನಿಮಗೆಲ್ಲಿ ಗೊತ್ತಿರತದ ಹುಡುಗರೆಲ್ಲಿರತಾರ ಏನ್ಮಾಡತಾರ ಅನ್ನೋದು— ಒಂದಿಷ್ಟು ಉದ್ದಿನ ಬ್ಯಾಳಿ...." ಇತ್ಯಾದಿ ಇತ್ಯಾದಿ Clerkship ದ (ಕಾರಕೂನಿಯ) home-work (ಹೋಮ ವರ್ಕ್) ನಡೆಯೋದು....ಆಮ್ಯಾಲೆ "ಹಂ, ಅಂಟು, ಅರಿಸಿಣ ಹಿಪ್ಪಲಿ...." ಇವ್ಯಾಕಬೇಕು ಅಪ್ಪನ ಶ್ರಾದ್ಧಕ್ಕ ಅಂತ ಕೇಳಬ್ಯಾಡ....ಹೆಸರಿಗೆ ಅಪ್ಪನ ಶ್ರಾದ್ಧ, ಆಗೋದು ನನ್ನ ಶ್ರಾದ್ಧ....ನಿನಗಿನ್ನೂ ಹೇಳಿಲ್ಲ—ನನ್ನ ಹಿರಿಯ ಮಗಳೊಬ್ಬಳು — ಹೋದವರ್ಷ

ಮದುವೆ ಆಯ್ತಲ್ಲೋ? ಹಾಂ— ಆಕೆ ಗರ್ಭಿಣಿ ಈಗ... ಇನ್ನು ೫–೬ ತಿಂಗಳೊಳ ಬಾಣಂತನ ಬರೋದು— ಚೊಚ್ಚಲ ಬಾಣಂತನ. ಅದರದೂ ಸಾಮಾನು ಇ list (ಲಿಸ್ಟು) ನೊಳಗೇ,–ಇನ್ನೊಮ್ಮೆ ಎಂದಾದರೂ ನಾ ಕೈಯೊಳಗ ಸಿಕ್ಕೇನೋ ಇಲ್ಲೊ ಅಂತ–ಅದೂ ಈಗೇ ಆಗೋದು.... ಬೀಸುವಾಗ ಹಾಡ್ತಿರತಾರ ನೋಡು ಸುಂದರ, ಸರಸ, ಜನಪದ ಸಾಹಿತ್ಯ ಅಂತ ಹೇಳ್ತಾರಲ್ಲ, ಅದು ಹೊರಗಿದ್ದವರಿ ಇಲ್ಲಾ ಹೊತ್ತಾಗಿ ಎದ್ದವರಿಗೆ....ಅದರ ಕಲ್ಲಿನ ನಡುವ ಸಿಕ್ಕು ಕಟ್‌ಕಟ್ ಅಂ ಪುಡಿಯಾಗೋ ಆ ಕಾಳಿಗೆ ಆ ಹಾಡು ಏನು ಅನಿಸತದ ಯಾರಿಗಾದರೂ ವಿಚಾರ ಹಾಅಂಗೇ ನನ್ನ ಗೋಳು, ಆಕೆ ನಗ್ನಗ್ತಾ ಸಾಮಾನಿನ list ಹೇಳೋವಾಗ... 'ಅದನ್ನೆಲ್ಲಾ ಅಂದೇ ತಂದಿಟ್ಟರೇನ್ರೀ ಸಂಜೆಯೂಟ–ಹಂ–ಮತ್ತ ಹುಡುಗರಿಗೆ ಔ ಲೆಣ್ಣಿ, ಎಷ್ಟು ದಿವಸಾಯ್ತು' (ತಲೆ ಹಿಡಿದುಕೊಂಡು) ರಾಮಾ, ರಾಮಾ, ಏನ ನನ್ನ ಸ್ಥಿತಿ? ಅಕ್ಕಿ, ಬ್ಯಾಳಿ, ಬೆಣ್ಣಿ, ಅರಿಸಿಣ, ದೊನ್ನೆ, ಅಂಟು, ಎಲೆ, ಔಡಲೆಣ್ಣಿ! ಈ ಹಾಳು ಹಣಮಪ್ಪ ಕೆಲಸ ತಪ್ಪಿಸಿ ಊರ ಹೊರಗ ಯಾಕ ಕೂತ ಅಂತ ಅನಿಸತದ... ಲಂಕಾ ಹೊತ್ತು ರೂಢಿ ಅವನಿಗೆ—ಅವನಿಗಾದರೂ ಈ ಹಮಾಲೀ ಒಪ್ಪಿಸ್ತಿದ್ದೆ.... ಆಗಲಿ.... ಹ್ಯಾಗಾದರೂ ಮಾಡಿ ಎಲ್ಲಾ ಸಾಮಾನು ತಂದಿಟ್ಟೆ ಅಂತ ತಿಳಿ. ತಿಳಿಯೋದೇನು? ನಮ್ಮಪ್ಪ ತಂದಿಟ್ಟಾನು, ನಾನೂ ತಂದಿಟ್ಟೇ ಇಟ್ಟೇನಿ.

**ಸಂಸಾರಗಾಮಿ:**—(ಗಟ್ಟಿಯಾಗಿ ನಕ್ಕು) ಅಲ್ಲೋ— ಸಾಮಾನು ತಂದಿಟ್ಟು ಸುಳ್ಳುಳ್ಳೆ ಗೋಳಾಡ್ತಿಯಲ್ಲ!

**ಸಂಸಾರಕಾಮಿ:**– (ಹಟಮಾರಿ ಹುಡುಗನಂತೆ) ಸುಳ್ಳುಳ್ಳೇ? ಇನ್ನೂ ಬ್ರಾಹ್ಮಣರಿಗೆ ಹೇಳಿದ್ದಿಲ್ಲ—

**ಸಂಸಾರಗಾಮಿ:**– ಇನ್ನೂ ಹೇಳಲಿಕ್ಕೆ ಬಂದೀತಲ್ಲ, ಅದಕ್ಕೇನು? ಹಂ— ಇದು ನೋಡು—ಯಾವ ಬ್ರಾಹ್ಮಣನ್ನ ಕರೆಯುವವ? ಆ ತಮಣಾಚಾರ್ಯರನ್ನ? ಅಹುದಲ್ಲೋ? ಇಲ್ಲಿ ನೋಡು– ಆ ಶ್ರೀನಿವಾಸರಾಯರು ಇದ್ದಾರಲ್ಲ? ಅಲ್ಲೇನೋ– ಆ ತಮಣಾಚಾರ್ಯರ ಮನೆಯ ಹತ್ತಿರ—ಒಂದ್ಹತ್ತು ಹೆಜ್ಜೆ ಮುಂದ್ಹೋದರ— ಅವರಿಗೆ ಒಂದೆರಡು ಪುಸ್ತಕ ಕೊಡೋದದ— ಏನೂ ತ್ರಾಸ ಇಲ್ಲ—ಗಂಟು ಕಟ್ಟೇ ಇಟ್ಟೇನಿ ಒಯ್ಯೋದೂ—

**ಸಂಸಾರಕಾಮಿ:**– (ಮೂಲೆಯಲ್ಲಿಯ ದೊಡ್ಡ ಗಂಟನ್ನು ನೋಡಿ) ಪುಸ್ತಕದ ಗಂಟು? ಹುಂ—ಮತ್ತೇನು ಯಾರಿಗೆ ಕೋಡೋದದ? ಈ ಕುರ್ಚಿ, ಆ ಗೋಡೆ, ಒಳಗೆ ಒಂದೆರಡು ಹಂಡೆ ಇದ್ದಿರಬೇಕಲ್ಲ—ಕೊಡು, ಎಲ್ಲಾ ಕೊಡು. ಬೇಕಾದರ ನೀನೂ ನನ್ನ ಬೆನ್ನಮ್ಯಾಲ ಕೂತ್ಬಿಡು—ಒಯ್ತೀನಿ—ಎಲ್ಲಾರನ್ನ ಒಯ್ತೇನಿ ಒಂದೇ ದಿವಸ—

**ಸಂಸಾರಗಾಮಿ:**– (ಹೆದರಿಕೆಯಿಂದ) ಅಲ್ಲ, ಸಹಜ ಹೇಳಿದೆ, ತಮಣಾ ಚಾರ್ಯರು ಅಂದಿದ್ದು, ಇವರದೂ ಅಲ್ಲೇ ಮನೆ—

**ಸಂಸಾರಕಾಮಿ:**— (ಒದರುತ್ತ) ಆ ಮನೀನೂ ಇಲ್ಲೇ ತಂದಿಡ್ತೀನಿ ಆಯ್ತಿಲ್ಲೊ? ಮೊದಲು ಸಂಸಾರಸಾಗರ ದಾಟಲಿಕ್ಕೆ ವಿಶ್ವದ ಹಮಾಲೀ ಹನುಮಪ್ಪ ಆಗ್ತೀನಿ—ಆಮ್ಯಾಲ ಹೇಳ್ತೀನಿ ಬ್ರಾಹ್ಮಣರಿಗೆ. ಏನು? ಮನೆಗೆ ಹೋಗೋದ ರೊಳಗ ಯಾರೋ ಸತ್ತ ಪತ್ರ ಬಂದಿತ್ತು....ಸೂತಕ....ಶ್ರಾದ್ಧ ನಿಂತಿತು ಅಂತ. (ಜಗತ್ತನ್ನು ಉದ್ಘೋಷಿಸುವವನಂತೆ) ರಾಮಾ, ರಾಮಾ, ರಾಮಾ, ಒಂದಿಷ್ಟು ಅಪ್ಪು! ಅಪ್ಪು! ಅಂದರ ಶ್ರಾದ್ಧದೊಳಗ ಶ್ರಾದ್ಧ ಸೋವಿ ಆಗೋ ಹಾಂಗ ಎಲ್ಲಾರನ್ನು– ಆಯ್ಯೋ— ಅಪ್ಪು! ಅಪ್ಪು! ಅಪ್ಪು! (ಎಂದು ವಿಕಾರವಶನಂತೆ ನಡೆದು ಹೋಗುವನು.)

—ಶ್ರೀರಂಗ

## ಅಭ್ಯಾಸನಗಳು

**ಪ್ರಶ್ನೆಗಳು:**—

೧) ಸಂಸಾರಕಾಮಿಯು ಅಡಕತ್ತನ್ನು ಬೇಡುವ ಕಾರಣವೇನು?

೨) ಸಂಸಾರಕಾಮಿಯು ಸಂಸಾರಗಾಮಿಯಲ್ಲಿ ನೀರು ಬೇಡಲು ಬರುವ ಕಾರಣ ವೇನು?

೩) ಸಂಸಾರಕಾಮಿಯು ಕಚೇರಿಗೆ ಹೊರಡುವಾಗ ಒದಗುವ ವಿಘ್ನಗಳಾವುವು?

**ಭಾಷಾಭ್ಯಾಸ:**—

೧) ಬೆವರನ್ನು ವಿವಿಧ ರೀತಿಯಿಂದ ಬಣ್ಣಿಸಿದ ಬಗೆಯನ್ನು ನೋಡಿರಿ.

೨) ಇಲ್ಲಿ ನಗೆಯುಂಟಾಗುವ ಸಂದರ್ಭಗಳನ್ನು ಗುರುತಿಸಿರಿ. ಕಾರಣ ಹೇಳಿರಿ.

ಉದಾ:— ಹೆಂಡರು ಮಕ್ಕಳು ನೀರು ಕೊಡುವದು ಸತ್ತಮೇಲೆ. 'ನೀರು ಕೊಡು' ಎಂಬ ಮಾತಿನಿಂದ ನಗುವು ಉಂಟಾಗುವುದು.

**ಶಬ್ದ ವಿಚಾರ:**—

೧) ಇಂದ್ರಜಾಲ, ಸಾವಿರಕಣ್ಣು, ಹೆದರಿದ ನಾಯಿ ಈ ಶಬ್ದಗಳ ಔಚಿತ್ಯವನ್ನು ಹೇಳಿರಿ

೨) ಬಳಲು. ಬಾಡು. ಬೆಂಡಾಗು, ಸವರು: ನೆಕ್ಕು. ನುಂಗು, ನಂಚಿಕೊಳ್ಳು, ಇವುಗಳ ಅರ್ಥವು ಸ್ಪಷ್ಟವಾಗುವಂತೆ ಒಂದೊಂದು ವಾಕ್ಯವನ್ನು ಬರೆಯಿರಿ.

**ವಾಕ್–ಶಿಕ್ಷಣ:**—

ಕವಿತೆಯ ಭಾಗದಲ್ಲಿ ಬರುವ 'ಕಾಮದಹನ' ಎಂಬುದನ್ನು ಇದರೊಡನೆ ಓದಿ, ಈ ನಾಟಕಕ್ಕೆ ಇಟ್ಟ ಹೆಸರಿನ 'ಕಾಮದಹನ'ದ ಔಚಿತ್ಯವನ್ನು ಕುರಿತು ನಿಮ್ಮ ಅಭಿಪ್ರಾಯವನ್ನು ಹೇಳಿರಿ.

**ಚರ್ಚೆ:**—

ಮದುವೆ ಮಾಡಿಕೊಳ್ಳುವದು ಮೂರ್ಖತನ.

**ಬರೆಹ:**—

ವಿದ್ಯಾರ್ಥಿ ಜೀವನದ ಕಷ್ಟಗಳನ್ನು ನೆನೆದುಕೊಂಡು ಮಿತ್ರರಿಗೆಲ್ಲ ಕಲಿಯುವದ ರಲ್ಲಿ ಹುರುಳಿಲ್ಲ ಎಂದು ಹೇಳುವ ಬಗೆಯನ್ನು ವಿನೋದವಾಗಿ ವಿವರಿಸಿರಿ.

# ೧೦. ಬೆಕ್ಕಿನ ಮರಿಗಳು

[ ದಿನಬಳಕೆಯಲ್ಲಿ ನಡೆದ ಸಣ್ಣಪುಟ್ಟ ಸಂಗತಿಗಳನ್ನು ಪ್ರತಿಭಾಶಾಲಿಯಾದ ಕಲಾವಿದರು ಒಂದೊಂದು ಭಾವಪೂರ್ಣ ಕಲೆಯಾಗಿ ಹೇಗೆ ಬರೆಯಬಲ್ಲರು ಎಂಬುದಿಲ್ಲಿ ಅಭ್ಯಸನೀಯ ವಾಗಿದೆ. ಲೇಖಕನಿಗೆ ತನ್ನ ಸುತ್ತಲೂ ನಡೆವ ಸಂಗತಿಗಳನ್ನು ಎಷ್ಟು ಸೂಕ್ಷ್ಮವಾಗಿ ನಿರೀಕ್ಷಿಸಿ ಅರಿತುಕೊಳ್ಳುವುದು ಅವಶ್ಯವಿದೆ ಎಂಬುದು ಈ ಕತೆಯಲ್ಲಿ ಕಂಡುಬರುವುದು. ಪ್ರಾಣಿಗಳ ಸ್ವಭಾವ, ಮಕ್ಕಳ ಮನಸ್ಸು, ಹಿರಿಯರ ರೀತಿಗಳ ವಾಸ್ತವ ಚಿತ್ರವನ್ನಿಲ್ಲಿ ಕಾಣಬಹುದು. ರಶಿಯದ ಶ್ರೇಷ್ಠ ಕಥಾಸಾಹಿತ್ಯಿಕನೆಂದು ಹೆಸರಾದ ಚೆಕೊವ್‌ನ ಒಂದು ಕಥೆಯ ಮಾದರಿಯ ನ್ನಿಲ್ಲಿ ಕೊಟ್ಟಿದೆ. ]

ಬೆಳಗಿನ ಜಾವ. ಕಿಟಕಿಯ ಕಾಜುಗಳ ಮೇಲೆ ಹಿಮ ಪಸರಿಸಿತ್ತು. ಅದರೊಳ ಗಿನ ಸೂರ್ಯಕಿರಣಗಳು ಇಣಿಕುತ್ತಿದ್ದವು. ಆರು ವರುಷದ ವ್ಯಾನಾ ಮತ್ತು ಆತನ ತಂಗಿ ನಿನಾ ಅದೇ ಎಚ್ಚರವಾಗಿದ್ದರು. ವ್ಯಾನಾನ ಕ್ರಾಪ್‌ಕೂದಲು ತೀರ ತೆಳುವಾಗಿ ಕತ್ತರಿಸಲಟ್ಟಿದ್ದುವು. ಆತನ ಮೂಗು ಮೊಂಡು. ಆದರೆ ನಿನಾ ಗುಂಗರುಗೂದಲಿನ ಬೆಳ್ಳಗಿನ ಮುದ್ದು ಹುಡುಗಿ. ಎಚ್ಚರಾದ ಅವರಿಬ್ಬರೂ ಒಬ್ಬರೊಬ್ಬರನ್ನು ನೋಡುತ್ತಿರುವಾಗಲೇ ಅವರ ದಾಯಿಯ ದನಿ ಕೇಳಬಂದಿತು. "ಎಂಥ ನಿದ್ದೆಬಡಕರೋ ನೀವು! ಎಲ್ಲರ ಉಪಹಾರ ಕೂಡ ಮುಗಿದುಹೋಯಿತು. ನಿಮಗಿನ್ನೂ ಹಾಸಿಗೆಯಿಂದ ಏಳಲಾಗಲಿಲ್ಲ. ಏಳಿರಿ—ಏಳಿರಿ ನೋಡುವಾ!"

ಅವರ ಹಾಸುಗೆಗಳ ಮೇಲೆ, ಕೋಣೆಯ ಗೋಡೆಗಳ ಮೇಲೆ, ಆ ದಾಯಿ ತೊಟ್ಟಿದ್ದ ಝುಗದ ಮೇಲೆ— ಬೆಳಗಿನ ಹೊನ್ನ ಕಿರಣಗಳು ನಲಿಯುತ್ತಿದ್ದವು— ಆ ಇಬ್ಬರೂ ಮಕ್ಕಳನ್ನು ತಮ್ಮೊಡನೆ ನಲಿಯಲು ಕರೆಯುತ್ತಿವೆಯೊ ಎನ್ನುವಂತೆ! ಆದರೆ ವ್ಯಾನಾನ ಲಕ್ಷ್ಯ ಆ ಕಡೆಗೆ ಇರಲಿಲ್ಲ. ಏಳಲು ಮನಸ್ಸಿಲ್ಲದೆಯೇ ನಿನಾಳನ್ನು ನೋಡಿದಾಗ ಆಕೆ ತನ್ನಷ್ಟಕ್ಕೆಯೇ "ಉಪಹಾರ ಮುಗಿಯಿತಂತೆ" ಎಂದುಕೊಳ್ಳುತ್ತಿ ದ್ದಳು. ವ್ಯಾನಾ ಹುಬ್ಬು ಗಂಟಿಕ್ಕಿ ಏನೋ ಒಂದು ಬೇಸರದ ಮಾತನ್ನು ಹೇಳ ಬೇಕೆನ್ನುವುದರಲ್ಲಿದ್ದ. ಬಾಯಿ ತೆರೆಯಬೇಕೆನ್ನುವಷ್ಟರಲ್ಲಿ ನಡುಮನೆಯಿಂದ ತಾಯಿಯ ಮಾತು ಕೇಳಿಸಿತು. "ಮಿನ್ನಿಗೆ ಹಾಲು ಹಾಕಲು ಮರೆಯಬೇಡ ತಿಳಿಯಿತೇ, ಅದಕ್ಕಿಂದು ಮರಿಗಳಾಗಿವೆ!"

ಮಕ್ಕಳ ಹುಬ್ಬುಗಂಟಿಕ್ಕಿದ ಮೋರೆ ತಕ್ಷಣ ಅರಳಿತು. ಅವಸರವಸರವಾಗಿ ಪಲ್ಲಂಗದಿಂದ ಜಿಗಿದು ಓಡಿಬಂದರು. ಮನೆತುಂಬ ಮಕ್ಕಳಿದ್ದಹಾಗೆ ಮನೆಯ ವಾತಾವರಣವೇ ಬದಲಾಯಿತು. ರಾತ್ರಿಯ ಉಡುಪನ್ನು ತಾವು ತೆಗೆದಿಡಲಿಲ್ಲವೆಂಬ ಪರಿವೆಯೂ ಇಲ್ಲದೇ ಅವರಿಬ್ಬರೂ ನೇರವಾಗಿ ಅಡುಗೆಯ ಮನೆಯ ಕಡೆಗೆ ಧಾವಿಸಿ ದರು.

ಅಡುಗೆಯ ಮನೆಯಲ್ಲಿ ಬಾಕಿನ ಕೆಳಗಡೆ ಒಂದು ಚಿಕ್ಕದಾದ ಕದವುಳ್ಳ ಕಟ್ಟಿಗೆಯ ಪೆಟ್ಟಿಗೆ ಇದ್ದಿತು. ಅಡಿಗೆಯವನಾದ ಸ್ಟೆಪ್ಯಾನ್, ಒಲೆ ಹೊತ್ತಿಸುವುದಕ್ಕೆ ಇದ್ದಿಲನ್ನು ತೆಗೆದುಕೊಂಡು ಬರುವ ಪೆಟ್ಟಿಗೆ ಅದು. ಆ ಪೆಟ್ಟಿಗೆಯೊಳಗಿಂದ ಮಿನ್ನಿ (ಆ ಮನೆಯಲ್ಲಿಯ ಹೆಣ್ಣು ಬೆಕ್ಕಿನ ಹೆಸರು ಅದು) ಇಣಿಕಿ ನೋಡಿತು; ಮಿನ್ನಿಯ ಮುಖದ ಮೇಲೆ ದಣಿವಿನ ಕಳೆ ಇದ್ದಿತು. ಅದರ ಹಸಿರು ಕಣ್ಣುಗಳಲ್ಲಿ ಏನೋ ಒಂದು ಬಗೆಯ ನೋವು ಕಾಣುತ್ತಿತ್ತು. ಅದು ತನ್ನ "ಆತ"ನಿಗಾಗಿ ಕಾಯುತ್ತಿರಬಹುದೇ ಅಥವಾ "ಆತ" ಬಂದರೆ ತನ್ನ ದೇಹದ, ಹೃದಯದ ವ್ಯಥೆ ತಗ್ಗಬಹುದೇ ಎಂದು ಯೋಚಿಸುತ್ತಿರುವಂತೆ ನೋಟ ಸ್ನೇಹಮಯವಾಗಿತ್ತು. ಬಾಯಿಗೆ ದನಿ ಬಾರದಂತಿತ್ತು. ಅಷ್ಟೊಂದು ಸೋತ ಹಾಗೆ ಕಾಣುತ್ತಿತ್ತು ಮಿನ್ನಿ.

ಮಕ್ಕಳಿಬ್ಬರು ತುದಿಗಾಲನೇಲೆ ನಿಂತು ಪೆಟ್ಟಿಗೆಯಲ್ಲಿ ಇಣಿಕಿದಾಗ ಆಶ್ಚರ್ಯ ಚಕಿತರಾಗಿಬಿಟ್ಟರು. ಹಿಂದಿನಿಂದ ಗದ್ದರಿಸುತ್ತ ಬರುತ್ತಿದ್ದ ದಾಯಿಯ ಮಾತು ಅವರಿಗೆ ಕೇಳುತ್ತಲೇ ಇರಲಿಲ್ಲ. ಅವರಿಗಾದ ಆನಂದ ಕಣ್ಣುಗಳಲ್ಲಿ ಬೆಳಕಾಗಿ ನಿಂತಿತ್ತು.

"ನೋಡಿದಿಯಾ ವ್ಯಾನ? ಇದು ನೋಡಿಲ್ಲಿ—ಎಂಥ ಮುದ್ದಾದ ಮರಿಗಳು ! ಮುದ್ದಾಗಿವೆಯಲ್ಲವೆ" ನಿನಾ ಕಣ್ಣರಳಿಸಿ ಕೇಳಿದಳು. "ಎಷ್ಟು ಮುದ್ದಾಗಿವೆ ಇಲಿಯ ಮರಿಗಳ ಹಾಗೆ! ಮಿನ್ನಿಯ ಮರಿಗಳು! ಅಲ್ಲವೇ?"

"ಒಂದು, ಎರಡು, ಮೂರು" ವ್ಯಾನಾ ಎಣಿಸಿದ. "ಅಂದರೆ, ಇದು ನೋಡು, ನಿನಾ,—ನಿನಗೊಂದು, ನನಗೊಂದು ಮತ್ತು ಇನ್ನೊಂದು—ಇನ್ನಾರಿಗಾದರೂ."

"ಮ್ಯೆಂವ್ ಮ್ಯೆಂವ್" ಅದು ಮಿನ್ನಿಯ ದನಿ ಮಕ್ಕಳಿಬ್ಬರೂ ತನ್ನನ್ನು ನೋಡುತ್ತಿದ್ದುದರಿಂದ ಆ ಮಿನ್ನಿಗೆ ಸಮಾಧಾನವಾಗಿರಬೇಕು. ಆದರೆ ಮಕ್ಕಳಿಗೆ ಮರಿಗಳನ್ನು ಸುಮ್ಮನೆ ನೋಡುತ್ತಾ ಇರುವುದಕ್ಕಾಗುತ್ತದೆಯೇ? ವ್ಯಾನಾ ಮಿನ್ನಿಯ ಆ ಮರಿಗಳನ್ನು ತಟ್ಟನೇ ಎತ್ತಿಕೊಂಡೇ ಬಿಟ್ಟ. ಇಬ್ಬರೂ ಅವುಗಳ ಮಿದುವಾದ ನುಣುಪಾದ ಮೈಮೇಲೆ ಕೈಯಾಡಿಸಿ ಸಂತೋಷಪಟ್ಟರು. ಅಷ್ಟರಿಂದ ಸಮಾಧಾನವಾಗದೇ ಕೊನೆಗೆ ಅವನ್ನು ತಮ್ಮ ರಾತ್ರಿಯ ಉಡುಪಿನಲ್ಲಿ ಒತ್ತಿಟ್ಟುಕೊಂಡು ಮನೆ ತುಂಬ ಓಡಾಡಿದರು.

"ಅಮ್ಮಾ, ಅಮ್ಮಾ, ಇದು ನೋಡು—ಮಿನ್ನಿಗೆ ಮರಿಗಳಾಗಿವೆ!" ನಿನಾ ಚೀರ ದನಿಯಲ್ಲಿ ಹೇಳುತ್ತಿದ್ದಳು. ತಾಯಿ ಪಡಸಾಲೆಯಲ್ಲಿ ಪರಿಚಿತರೊಬ್ಬರ ಕೂಡ ಮಾತನಾಡುತ್ತಿದ್ದರು. ಮಕ್ಕಳಿಬ್ಬರೂ ಇನ್ನೂ ಮಗೆ ನಾಚಿಕೆ ತೋರಿಸದೆ, ರಾತ್ರಿಯ ಉಡುಪನ್ನು ಬದಲಾಯಿಸದೆ ಹಾಗೆಯೆ ಓಡಾಡುತ್ತಿರುವುದನ್ನು ನೋಡಿ ಕೋಪಿಸಿಕೊಂಡು ಹೇಳಿದರು. "ಹೋಗಿರಿ, ಹೋಗಿರಿ ಇಲ್ಲಿಂದ ಮೊದಲು. ನಾಚಿಕೆಯಾಗುವುದಿಲ್ಲವೇ? ಹೊರಡುವಿರೊ ಅಥವಾ ಕೊಡಲೊ ಒಂದು ಏಟು?"

ತಮ್ಮ ತಾಯಿ ಮುನಿದಳೆಂಬುದಾಗಲಿ ಅಥವಾ ಬೇರೊಬ್ಬರು ಮನೆಗೆ ಬಂದಿದ್ದರು ಎಂಬುದಾಗಲಿ ಆ ಮಕ್ಕಳ ಗಮನಕ್ಕೆ ಬರಲೇ ಇಲ್ಲ. ಜಮಖಾನೆಯ ಮೇಲೆ ಆ ಮರಿಗಳನ್ನು ಬಿಟ್ಟುಬಿಟ್ಟರು. ಕ್ಷೀಣವಾಗಿ ಅವು ಮ್ಯೆಂವ್ ಮ್ಯೆಂವ್ ಎನ್ನುತ್ತಿರುವುದನ್ನು ಕೇಳಿ ಮಿನ್ನಿಯು ಅಲ್ಲಿಗೆ ಧಾವಿಸಿಬಂದು ಅವುಗಳ ಸುತ್ತಲೂ ಓಡಾಡತೊಡಗಿತು. ಒಂದೆರಡು ನಿಮಿಷಗಳಲ್ಲಿ ಆ ಮಕ್ಕಳಿಬ್ಬರನ್ನೂ ಬಲವಂತವಾಗಿ ಕರೆದೊಯ್ಯಬೇಕಾಯಿತು. ಬಟ್ಟೆಗಳ ಬದಲಾವಣೆ, ಪ್ರಾರ್ಥನೆ ಬೆಳಗಿನ ಉಪಹಾರ ಎಲ್ಲವನ್ನು ಬಲವಂತದಿಂದಲೇ ಮಾಡಿಸಬೇಕಾಯಿತು. ನಿತ್ಯದ ನಿಯತ ಕಾರ್ಯಕ್ರಮಗಳನ್ನು ತಪ್ಪಿಸಿಕೊಂಡು ಸಾಧ್ಯವಿದ್ದಷ್ಟು ಬೇಗನೆ ಆ ಮರಿಗಳೆಡೆಗೆ ಓಡಬೇಕೆಂದು ಅವರಿಬ್ಬರಿಗೂ ಆತುರ. ನಿತ್ಯದ ಆಟವಾಗಲಿ ಕೆಲಸವಾಗಲಿ ಯಾವುದೊಂದೂ ಅವರಿಗೆ ಬೇಕಿರಲಿಲ್ಲ. ಆ ಮರಿಗಳ ಹೊರತಾಗಿ ಬೇರೆ ಯಾವ ಯೋಚನೆಯೂ ಅವರಿಗೆ ಇದ್ದ ಹಾಗಿರಲಿಲ್ಲ. ಅಂಥ ಅಪೂರ್ವ ಉತ್ಸಾಹ ಅವರನ್ನಾವರಿಸಿತ್ತು. ಮರಿಗಳ ಬದಲಾಗಿ ಬೇಕಾದಷ್ಟು ತಿನಸು ಉಣಿಸು ಕೊಟ್ಟಿದ್ದರೂ ಅವರಿಗೆ ಬೇಡವಾಗಿತ್ತು. ಅವನ್ನು ಬಿಟ್ಟು ಕದಲಲಿಕ್ಕೆ ಅವರು ಸಿದ್ಧರೆ ಇರಲಿಲ್ಲ. ಆ ಪಿಳ್ಳೆಗಳೆಂದರೆ ಅವರ ಸರ್ವಸ್ವವಾಗಿತ್ತು !

ಅಂತೂ ಸ್ಟೆಫ್ಯಾನ್ ಮತ್ತು ದಾಯಿಯರ ಗೋಣಗಾಟಗಳನ್ನು ದುರ್ಲಕ್ಷಿಸಿ ಊಟದ ವೇಳೆಯವರೆಗೂ ಮಿನ್ನಿಯ ಮುರುಕು ಪೆಟ್ಟಿಗೆಯ ಸುತ್ತಲೇ ಸುಳಿದಾಡಿದರು. ಮರಿಗಳ ಬಗೆಯಲ್ಲಿ ಅವರಿಬ್ಬರಿಗೂ ತುಂಬ ಚಿಂತೆ ಎನಿಸುತ್ತಿರಬೇಕು ! ಮುಂದೆ ಹೇಗೆ ? ಬಹುಕಾಲ ಯೋಚಿಸಿ ಕೊನೆಗೊಂದು ನಿರ್ಣಯಕ್ಕೆ ಬಂದರು:— ಒಂದು ಮರಿ ಮಿನ್ನಿಯ ಹತ್ತಿರ ಇರಬೇಕು; ಎರಡನೆಯದು ಪಕ್ಕದ ಚಿಕ್ಕ ಮನೆಯಲ್ಲಿ ಇರುತ್ತಲಿದೆ; ಮೂರನೆಯದು ಸಾಮಾನಿನ ಕೋಣೆಯಲ್ಲಿ ಇರಬಹುದು. ಹೌದು, ಅಲ್ಲಿ ಬೇಕಾದಷ್ಟು ಇಲಿಗಳಿವೆ! "ಆದರೆ ವ್ಯಾನಾ, ಈ ಮರಿಗಳು ನಮ್ಮನ್ನು ನೋಡುವದೇ ಇಲ್ಲವಲ್ಲ ? ಅಥವಾ ಭಿಕ್ಷುಕರ ಹಾಗೆ ಇವುಗಳ ಕಣ್ಣು ಕುರುಡೇ ?" ಎಂದು ನಿನಾಳ ಸಂಶಯ ವ್ಯಾನಾ ಕೂಡ ಈ ಪ್ರಶ್ನೆಯಿಂದ ಚಕಿತನಾದ. ಮರಿಗಳು ಕಣ್ಣು ತೆರೆಯಬೇಕೆಂದು ಆತ ಮಾಡಿದ ಯತ್ನಗಳೆಲ್ಲವೂ ವಿಫಲವಾದುವು. ಅವರು ತಂದ ಹಾಲನ್ನಾಗಲಿ, ಮಾಂಸದ ತುಣುಕನ್ನಾಗಲಿ ಆ ಮರಿಗಳು ಮುಟ್ಟಲೇ ಇಲ್ಲ. ಮಕ್ಕಳಿಗೆ ಮತ್ತೆ ಚಿಂತೆ ಎನಿಸತೊಡಗಿತು. ಅವುಗಳ ಬಾಯಿಯ ಹತ್ತಿರ ತಿನ್ನುವ ಸಾಮಾನುಗಳನ್ನು ಇಡುತ್ತಿದ್ದರು. ಆದರೆ ಇಡುವುದೊಂದೇ ತಡ—ಮಿನ್ನಿ ಬಂದು ಅವನ್ನು ನುಂಗಿಬಿಡುತ್ತಿತ್ತು.

"ನಡೆ, ನಿನಾ, ಈ ಮರಿಗಳ ಸಲುವಾಗಿ ನಾವೊಂದು ಚಂದಾದ ಮನೆ ಕಟ್ಟೋಣ ಇವೆರಡೂ ಬೇರೆಬೇರೆಯಾಗಿಯೇ ಇರಬೇಕಲ್ಲವೇ ? ಬಹಳವಾದರೆ ಮಿನ್ನಿ ಎರಡೂ ಕಡೆಗೆ ಹೋಗಿ ಆಗೀಗ ನೋಡಿಕೊಂಡು ಬರಬಹುದು." ಇದು ವ್ಯಾನ್ಯಾನ ಕಲ್ಪನೆ. ಆ ಕಲ್ಪನೆ ಕಾರ್ಯರೂಪಕ್ಕಿಳಿಯಲು ತಡವಾಗಲಿಲ್ಲ. ಇಬ್ಬರೂ

ಸೇರಿ ರಟ್ಟುಗಳಿಂದ ಮಾಡಿದ ಎರಡು ಹಳೆಯ ಪೆಟ್ಟಿಗೆಗಳನ್ನು ಅಡುಗೆಮನೆಯ ಎರಡು ಮೂಲೆಗಳಲ್ಲಿ ಇಟ್ಟರು. ಅವುಗಳಲ್ಲಿ ಮರಿಗಳನ್ನು ಇರಿಸಿಯೂ ಆಯಿತು. ಆದರೆ ಮರಿಗಳನ್ನು ಈ ರೀತಿ ಬೇರೆಬೇರೆಯಾಗಿ ಇರಿಸುವ ಅವರ ಯೋಜನೆ ಮಿನ್ನಿಗೆ ಸಮ್ಮತವಾಗಲಿಲ್ಲೋ ಏನೋ. ಕರುಣೆ ತುಂಬಿದ ಕಣ್ಣುಗಳಿಂದ ಆ ಪೆಟ್ಟಿಗೆಗಳ ಹತ್ತಿರವೇ ಸುತ್ತಿ ಸುತ್ತಿ ಕೊನೆಗೆ ಮರಿಗಳನ್ನೆತ್ತಿಕೊಂಡು ಹೋಯಿತು. ಮತ್ತೆ ಮೊದಲಿನಂತೆಯೆ ಆ ಕಟ್ಟಿಗೆಪೆಟ್ಟಿಗೆಯಲ್ಲಿ ತಾಯಿಮಕ್ಕಳು ಪವಡಿಸಿದರು.

"ಈ ಮಿನ್ನಿ ಎಂದರೆ ಈ ಮರಿಗಳ ತಾಯಿ ಅಲ್ಲವೇ ? ಆದರೆ —" ವ್ಯಾನಾನಿಗೆ ಬೇರೊಂದು ಯೋಚನೆ ಹೊಳೆಯಿತು, "ಆದರೆ ಇವುಗಳ ತಂದೆ ಯಾರು ?"

"ಹೌದು. ಅಂದಹಾಗೆ ಇವುಗಳ ತಂದೆ ಯಾರು ?" ಎಂದಳು ನೀನಾ.

"ಹೂಂ. ತಂದೆಯಂತೂ ಇರಲೇಬೇಕು ಇವಕ್ಕೆ ! ಹಾಗಾದರೆ ಯಾರು ?"

ಈ ಯೋಚನೆ ಬಹುಕಾಲ ಬಗೆಹರಿಯಲಿಲ್ಲ. ಕೊನೆಗೆ ನಿರ್ಣಯವಾಯಿತು— ಸಾಮಾನಿನ ಕೋಣೆಯಲ್ಲಿ ಮುರಿದು ಬಿದ್ದುಕೊಂಡಿದ್ದ ದೊಡ್ಡದಾದ ಕಟ್ಟಿಗೆಯ ಕುದುರೆಯೇ ಈ ಮರಿಗಳ ತಂದೆ ಎಂದು ! ಹೌದು ! ಅವನೇ ಯೋಗ್ಯ. ಹೀಗೆಂದು ಆ ಕುದುರೆಯನ್ನು ಎಳೆದು ತಂದು ಕಟ್ಟಿಗೆ ಪೆಟ್ಟಿಗೆಯ ಹತ್ತಿರ ನಿಲ್ಲಿಸಿ ಆ ಬೆಕ್ಕಿಗೆ ಎಚ್ಚರ ಹೇಳಿದರು. "ನೀನಿಲ್ಲಿಯೇ ಇರತಕ್ಕದ್ದು; ಇವರೆಲ್ಲರನ್ನೂ ಸರಿಯಾಗಿ ನೋಡಿಕೊಳ್ಳತಕ್ಕದ್ದು. ತಿಳಿಯಿತೇ !" ಎಂದು. ಈ ಮಾತನ್ನು ಹೇಳುವಾಗಿನ ಅವರ ಮುಖದ ಗಾಂಭೀರ್ಯ ಅಷ್ಟಿಷ್ಟಲ್ಲ. ಆ ಮರಿಗಳ ಬಗೆಯಲ್ಲಿಯ ಪ್ರತಿಯೊಂದು ಸಂಗತಿಯನ್ನೂ ಅವರು ಮನಮುಟ್ಟಿ ಮಾಡುತ್ತಿದ್ದಾರೆ. ಆ ಮಿನ್ನಿ, ಆ ಮರಿಗಳು ಆ ಪೆಟ್ಟಿಗೆ, ಆ ಕಟ್ಟಿಗೆಯ ಕುದುರೆ ಇವುಗಳ ಹೊರತಾಗಿ ಆ ಮಕ್ಕಳಿಬ್ಬರ ಮಟ್ಟಿಗೆ ಈ ಪ್ರಪಂಚದಲ್ಲಿ ಬೇರೆ ಏನೂ ಇರಲಿಲ್ಲ. ಆನಂದದ ಪರಮಾವಧಿಯನ್ನೆ ಮುಟ್ಟಿದ್ದಾರೆ ಎಂದು ಹೇಳಬೇಕು.

ಊಟಕ್ಕೆ ಮೊದಲು ವ್ಯಾನಾ ತನ್ನ ತಂದೆಯ ಅಭ್ಯಾಸದ ಕೋಣೆಯಲ್ಲಿ ಕುಳಿತಿದ್ದಾನೆ. ತೆಳ್ಳಗಿನ ಬೆಳ್ಳಗಿನ ಬೆಕ್ಕಿನ ಮರಿಯೊಂದು ಮೇಜಿನಮೇಲಿನ ದೀಪದ ಸುತ್ತಲೂ ಸುಳಿದಾಡುತ್ತಿದೆ. ಯಾವ ಹೆದರಿಕೆಯೂ ಇಲ್ಲದೆ ತಂದೆಯವರ ಕೆಲಸದ ಕಾಗದಗಳ ಮೇಲೂ ಓಡಾಡುತ್ತಿದೆ. ಕನಸುಗಣ್ಣಿನಿಂದ ವ್ಯಾನಾ ಮರಿಯನ್ನೇ ನೋಡುತ್ತಿದ್ದಾನೆ. ನಡುನಡುವೆ ಅದರ ಬಾಯಲ್ಲಿ ಕಡ್ಡಿಯನ್ನೋ ಪೆನ್ಸಿಲಿನ ತುದಿಯನ್ನೋ ಇಡುತ್ತಿದ್ದಾನೆ. ಅಕಸ್ಮಾತ್ತಾಗಿ ತಂದೆಯವರು ಒದರಿದಾಗ ಅವರ ರುದ್ರಾವತಾರಕ್ಕೆ ವ್ಯಾನಾ ಥರಥರನೆ ನಡುಗುತ್ತಿದ್ದಾನೆ.

"ಏನೋ ಇದು—ಆ ಏನೊ ಇದು ? ಏ ವ್ಯಾನಾ, ಕತ್ತೇ ಏನೋ ಇದು ?"

"ಅಂ—ಇದು —ಮರಿ ಮಾಮಾ —ನಮ್ಮ—ಮಿನ್ನಿಯದು" ವ್ಯಾನಾ ಹಾಗೂ ಹೀಗೂ ತಡವರಿಸಿದ.

“ ತಲೆ, ನಿನ್ನದು ! ಇಲ್ಲಿ ನೋಡಿದು ಏನು ಮಾಡಿದೆ ಈ ಮರಿ ? ಮಹತ್ವದ ಕಾಗದಗಳನ್ನೆಲ್ಲ ಹೊಲಸಾಗಿ ಮಾಡಿಬಿಟ್ಟವು. ಕತ್ತೆ, ಯಾರು ಹೇಳಿದರೊ ನಿನಗೆ, ಈ ಸಲ್ಲದ ಕೆಲಸಗಳನ್ನು ಮಾಡಲಿಕ್ಕೆ ? ಮೂರ್ಖ— ಚ್ ಚ್ ಚ್ ! ’’ ಹೀಗೆಂದು ವ್ಯಾನಾನ ಕಿವಿಹಿಂಡಿ ಸ್ಟೆಪ್ಯಾನ್‌ನನ್ನು ಕರೆದು “ ಇದು ನೋಡು, ಸ್ಟೆಪ್ಯಾನ್ ! ಈ ಹೊಲಸು ಮರಿಗಳನ್ನು ತೆಗೆದುಕೊಂಡು ಹೋಗಿ ಕಂದರದಲ್ಲಿ ಎಸೆದು ಬಿಟ್ಟು ಬಾ—ಹೋಗು—” ಎಂದು ಹೇಳಿದರು.

ಇಂಥ ಮುದ್ದು ಮರಿಗಳ ವಿಚಾರದಲ್ಲಿ ತಂದೆಯವರಿಗೆ ಹೇಗೆ ಪ್ರೀತಿ ಎನಿಸುವದಿಲ್ಲವೊ ಎಂದು ವ್ಯಾನಾನಿಗೆ ಆಶ್ಚರ್ಯ....ಊಟ ನಡೆವಾಗೊಮ್ಮೆ ಮತ್ತೆ ಆ ಮರಿಗಳ ವಿಚಾರದಲ್ಲಿ ಮಾತು ಬಂದಿತು. ನಿನಾ ಕುಳಿತ ಕುರ್ಚಿಯ ಕೆಳಗಡೆಯಲ್ಲಿ ಮರಿಗಳಿದ್ದುದನ್ನು ತಂದೆಯವರು ನೋಡಿ ಸಂತಾಪಗೊಂಡರು. “ ನಿನಾ, ಏಳು ಮೊದಲು ಅಲ್ಲಿಂದ ಹೊರಟುಹೋಗು....ಏ! ಸ್ಟೆಪ್ಯಾನ್ ಈ ಮರಿಗಳನ್ನು ಕಂದಕದಲ್ಲಿ ಎಸೆದು ಬಾ ಎಂದು ಹೇಳಲಿಲ್ಲವೇನೋ? ನನ್ನ ಮನೆಯಲ್ಲಿ ಇಂಥ ಹೊಲಸು ಇರುವುದು ನನಗೆ ಎಷ್ಟು ಮಾತ್ರವೂ ಸರಿ ಬರುವದಿಲ್ಲ. ಅವನ್ನು ನೋಡಿದರೆ ಹೇಸಿಗೆಯಾಗುತ್ತದೆ. ”

ಮಕ್ಕಳಿಬ್ಬರೂ ಗಾಬರಿಯಾದರು. ಅಂಥ ತೆಳ್ಳಗಿನ, ಬೆಳ್ಳಗಿನ ಮುದ್ದು ಮರಿಗಳನ್ನು ಕಂದಕದಲ್ಲಿ ಎಸೆಯುವುದೆ ? ಏನು ಭಯಂಕರ ! ಅಲ್ಲದೇ ಅವುಗಳ ವಿಚಾರದಲ್ಲಿ ತಾವು ಕಂಡ ನೂರು ಕನಸುಗಳ ಗತಿ ಏನು ? ಬೆಳಗಿನಿಂದ ಕಟ್ಟುತ್ತಿದ್ದ ಕನಸಿನ ಲೋಕ ಕಡಿದುಬಿದ್ದ ಹಾಗಾಯಿತು. ಆ ಮರಿಗಳು ಬಂದಿಟ್ಟು ಬೆಳೆದ ಮೇಲೆ ಒಂದನ್ನು ಪಕ್ಕದ ಬಂಗಲೆಯಲ್ಲಿ ಇಡುವುದು, ಇನ್ನೊಂದನ್ನು ಸಾಮಾನಿನ ಕೋಣೆಯಲ್ಲಿ, ಮೂರನೆಯದು ತಾಯಿಯ ಹತ್ತಿರ ಇರುವುದು....ಮೂರಕ್ಕೂ ಬೇರೆ ಬೇರೆ ಮನೆಗಳು—‘ಮಿನ್ನಿ’ ಬಂದು ನಡುನಡುವೆ ನೋಡಿಕೊಂಡು ಹೋಗುತ್ತದೆ. ಎಲ್ಲವೂ ಸುವ್ಯವಸ್ಥಿತವಾಗಿ ಏರ್ಪಾಡಾಗಿತ್ತು. ಆದರೆ ತಂದೆಯ ಈ ಗದರಿಕೆ ಎಲ್ಲವನ್ನೂ ನೆಲಕ್ಕೆ ಉರುಳಿಸಿತು. ಅತ್ತು ಅತ್ತು ಕೊನೆಗೆ ಹೇಗಾದರೂ ಮಾಡಿ ಮರಿಗಳನ್ನು ಬದುಕಗೊಡಬೇಕು ಎಂದು ತಂದೆಯನ್ನು ಬೇಡಿಕೊಂಡರು. ಕೊನೆಗೆ ಅವರೂ ಒಪ್ಪಿದರು. ಆದರೆ ಒಂದು ಕಟ್ಟು ಹಾಕಿದರು. ಆ ಕಟ್ಟೆಂದರೆ: ಅವರಿಬ್ಬರೂ ಅಡುಗೆಯ ಮನೆಯಲ್ಲಿ ಮಿನ್ನಿಯ ಹತ್ತಿರ ಹೋಗತಕ್ಕದ್ದಲ್ಲ! ಮರಿಗಳನ್ನು ಮುಟ್ಟತಕ್ಕದ್ದಲ್ಲ!

ಊಟವಾದನಂತರ ವ್ಯಾನಾ, ನಿನಾ ಅತ್ತಿತ್ತ ಸುಳಿದಾಡಿದರು. ಅಡಿಗೆಮನೆಯಲ್ಲಿ ಹೋಗಕೂಡದೆಂಬ ನಿರ್ಬಂಧದಿಂದ ಖಿನ್ನರಾಗಿದ್ದರು. ತಿನ್ನಲೂ ಬೇಡದೆ ಸೆಡವಿನಲ್ಲಿಯೇ ಕುಳಿತರು. ತಾಯಿ [illegible] ಅಷ್ಟಮಾತಿನ ಉತ್ತರ ಹೇಳಿದರು. ಸಂಜೆಯ ವರೆಗೆ ಹೀಗೆಯೇ ನಡೆಯಿತು. ಆಗ ಅವರ ದೊಡ್ಡಪ್ಪ ಬರಲು, ನಡೆದುದೆಲ್ಲವನ್ನೂ ತಿಳಿಸಿ ಮರಿಗಳನ್ನು ಹೇಗಾದರೂ ಮಾಡಿ ತಮ್ಮ ಕೋಣೆ

ಯಲ್ಲಿ ಬಿಡಲು ತಾಯಿ ಒಪ್ಪುವಂತೆ ಮಾಡಬೇಕು ಎಂದು ಪರಿಪರಿಯಿಂದ ಬೇಡಿಕೊಂಡರು. ' ಆಗಲಿ, ನೋಡುವಾ, ' ಎಂದು ಹೇಳಿ ದೊಡ್ಡಪ್ಪ ಒಳಗಡೆ ಹೋದರು. ದೊಡ್ಡಪ್ಪ ಎಂದಿಗೂ ಒಬ್ಬಂಟಿಗರಾಗಿ ಬರುತ್ತಿರಲಿಲ್ಲ. ಅವರ ಜೊತೆಯಲ್ಲಿ ಯಾವಾಗಲೂ ಅವರ ' ಡಾನಿಶ್ ' ಬೇಟೆ ನಾಯಿ—ಅದರ ಹೆಸರು ನೀರೊ—ಬರುತ್ತಿತ್ತು. ಜೋತುಬಿದ್ದ ಕಿವಿಗಳು, ನಿಮಿರಿ ನಿಂತ ಬಾಲ, ಶಾಂತ ಗಂಭೀರ ಮುದ್ರೆ ಇವೆಲ್ಲವನ್ನು ನೋಡಿದಾಗ ನೀರೊ ಸ್ವಪ್ರತಿಷ್ಠೆಯ ವಿಚಾರದಲ್ಲಿ ಬಹಳ ಜಾಗರೂಕನಾಗಿದ್ದನೆಂದು ಕಾಣುತ್ತಿತ್ತು. ನೀರೋನಿಗೆ ಈ ಮಕ್ಕಳ ಲೆಕ್ಕವೇ ಇರಲಿಲ್ಲ. ಯಾರಾದರೂ ಹತ್ತಿರ ಹೋದರೆ ಬಾಲದಿಂದ ಒಂದು ಏಟು ಕೊಡುತ್ತಲೂ ಇರಲಿಲ್ಲ. ಅದರ ಎಣಿಕೆಯಲ್ಲಿ ಎಳೆಯ ಮಕ್ಕಳೂ ಒಂದೇ; ಕಟ್ಟಿಗೆಯ ಕುರ್ಚಿಯೂ ಒಂದೇ ! ಹೀಗೆಂದೇ ಯಾವ ಮಕ್ಕಳೂ ನೀರೋನನ್ನು ಪ್ರೀತಿಸುತ್ತಿರಲಿಲ್ಲ. ಆದರೆ ಇಂದು ಮಾತ್ರ ವ್ಯಾನಾ ಮತ್ತು ನಿನಾ ಆತನನ್ನು ತಿರಸ್ಕಾರದಿಂದ ಕಾಣದೆ ಆತನಿಂದ ಪ್ರಯೋಜನ ಪಡೆಯುವ ವ್ಯವಹಾರದೃಷ್ಟಿಯಿಂದ ಕಂಡರು.

“ ಇದು ನೋಡು, ನಿನಾ, ಈ ಮರದ ಕುದುರೆಗಿಂತ ಈ ನೀರೊನೇ ಒಳ್ಳೆಯವ; ಇವನೇ ಈ ಮರಿಗಳ ತಂದೆಯಾಗಲಿ. ಆ ನಮ್ಮ ಕುದುರೆಯೋ, ಎಷ್ಟಾದರೂ ಆಟದ ಕುದುರೆ, ಅದೇ ಈ ನೀರೋನನ್ನು ನೋಡು, ಹೌದು—ಅವನೇ ಸರಿ, ಅಲ್ಲವೇ ? ” ಎಂದು ವ್ಯಾನಾ ಹೇಳಿದ.

ತಂದೆಯವರ ಇಸ್ಪೀಟಿನ ಆಟ ಯಾವಾಗ ಪ್ರಾರಂಭವಾಗುತ್ತದೆಯೋ ಎಂಬುದನ್ನೇ ಮುನ್ನೋಡುತ್ತಾ ಸಂಜೆಯ ಸಮಯವನ್ನು ನೂಕಿದರು. ತಂದೆಯವರ ಲಕ್ಷ್ಯವಿಲ್ಲದಾಗ ನೀರೋನನ್ನು ಅಡುಗೆ ಮನೆಗೆ ತಟ್ಟನೆ ಕರೆದುಕೊಂಡು ಹೋಗುವ ಯೋಚನೆ ಅವರಿಗಾಗಿತ್ತು....ಕೊನೆಗೊಮ್ಮೆ ತಂದೆಯವರ ಆಟ ಪ್ರಾರಂಭವಾಯಿತು. ತಾಯಿ ಚಹ ಮಾಡುವದರಲ್ಲಿ ತೊಡಗಿದ್ದಳು.

ಎಂಥ ದಿವ್ಯ ಕ್ಷಣ ಅದು !

“ ನಡೆ ಬೇಗನೇ ! ”

ವ್ಯಾನಾ ಉಸುರಿದ.

ಅಷ್ಟರಲ್ಲಿ ಸ್ಟೇಪ್ಯಾನ್ ಹಜಾರದಲ್ಲಿ ಪ್ರವೇಶಿಸಿ ಕುತ್ಸಿತತೆ ತುಂಬಿದ ದನಿಯಲ್ಲಿ ಸಾರಿದ, “ ಬಾಯಿಯವರೇ, ನೀರೋ ಬೆಕ್ಕಿನ ಮರಿಗಳನ್ನು ತಿಂದುಬಿಟ್ಟ ! ” ಎಂದು. ಮಕ್ಕಳಿಬ್ಬರ ಮುಖಗಳೂ ಗಾಬರಿಯಿಂದ ವಿವರ್ಣವಾದುವು. ಅವರಿಬ್ಬರೂ ಸ್ಟೇಪ್ಯಾನನನ್ನು ನೋಡುತ್ತಿರುವಾಗಲೇ ಮತ್ತೆ ಹೇಳಿದ, “ ಹೌದು ನಿಜವಾಗಿಯೂ ನೀರೋ ಪೆಟ್ಟಿಗೆಯ ಹತ್ತರ ಹೋದವನೇ ಮರಿಗಳನ್ನು ಒಂದೊಂದಾಗಿ ತಿಂದುಬಿಟ್ಟ. ”

ಮನೆಯಲ್ಲಿಯ ಎಲ್ಲರೂ ಆ ದುಷ್ಟ, ನಿರ್ದಯ ನೀರೋನನ್ನು ಹೊಡೆದು ಬಿಡಬಹುದು ಎಂದೆನಿಸಿತು, ಆ ಮಕ್ಕಳಿಗೆ. ಆದರೆ ಯಾರೊಬ್ಬರೂ ಕುಳಿತಲ್ಲಿಂದ ಕದಲಲಿಲ್ಲ. ನೀರೋನ ಹಸಿವೆಯ ಬಗೆಯಲ್ಲಿ ಆಶ್ಚರ್ಯವನ್ನು ವ್ಯಕ್ತಮಾಡಿದರು !

ತಂದೆ ತಾಯಿಗಳಿಬ್ಬರೂ ನಕ್ಕುಬಿಟ್ಟರು. ನೀರೋ ಮೇಜಿನ ಹತ್ತಿರ ಬಾಲವನ್ನು ಅಲ್ಲಾಡಿಸುತ್ತಾ ನಾಲಿಗೆಯನ್ನು ಚಪ್ಪರಿಸುತ್ತಾ ಸುಳಿದಾಡುತ್ತಿದ್ದ. ಮಿನ್ನಿ ಮಾತ್ರ ಅಸ್ವಸ್ಥವಾಗಿತ್ತು. ಬಾಲವನ್ನು ಉಬ್ಬಿಸಿಕೊಂಡು ಮನೆಯಲ್ಲಿಯ ಪ್ರತಿಯೊಬ್ಬರನ್ನು ಸಂಶಯದ ದೃಷ್ಟಿಯಿಂದ ಆದರೂ ಅಸಹಾಯವಾಗಿ ನೋಡುತ್ತಿತ್ತು. ಕ್ಷಣಕ್ಷಣಕ್ಕೆ ಅದರ ಸಂತಾಪ ಬೆಳೆಯುವಂತಿದ್ದಿತು.

"ವ್ಯಾನಾ, ನಿನಾ,—ಒಂಬತ್ತಾಯಿತು. ಮಲಗಿಕೊಳ್ಳೀ ನೋಡೋಣ—ಹೋಗಿರಿ" ಎಂದು ತಾಯಿಯ ದನಿ ಕೇಳಿಸಿತು. ಮಲಗಲೆಂದು ಮಕ್ಕಳು ಹೊರಟು ಹೋದವು. ಹಾಸಿಗೆಯಲ್ಲಿ ಮಲಗಿಕೊಂಡೇ ಕಣ್ಣೀರು ಹಾಕಿದವು. ದುಃಖಕ್ಕೆ ಒಳಗಾದ ಮಿನ್ನಿಯ ವಿಚಾರದಲ್ಲಿ ಮತ್ತು ಯಾವ ಶಿಕ್ಷೆಯೂ ಇಲ್ಲದೇ ಹೋದ ದುಷ್ಟ ರಾಕ್ಷಸ ನೀರೋನ ವಿಚಾರದಲ್ಲಿ ಯೋಚಿಸುತ್ತಲೇ ಇದ್ದವು....

(ಆಂಟನ್ ಚೆಕೊವ್‌ನ ಒಂದು ಕತೆಯ ಭಾವಾನುವಾದ)

—ವಿ. ಎಂ. ಇನಾಂದಾರ್

## ಅಭ್ಯಸನಗಳು :

**ಪ್ರಶ್ನೆಗಳು:—**

೧. ಚಿಕ್ಕಮಕ್ಕಳಾದ ವ್ಯಾನಾ ಮತ್ತು ನಿನಾ ಇವರ ದಿನದ ಬೆಳಗಿನ ಕಾರ್ಯಕ್ರಮವೇನು?

೨. ಮರಿಗಳ ತಂದೆ ಯಾರೆಂದು ನಿರ್ಣಯಿಸಿದರು? ಏಕೆ?

೩. ನೀರೋನ ಬಗ್ಗೆ ಆ ಮಕ್ಕಳ ಅಭಿಪ್ರಾಯವೇನು? ಏಕೆ?

೪. 'ಎಂಥ ದಿವ್ಯಕ್ಷಣ ಅದು' ಯಾರಿಗೆ?

ಓದಿರಿ: 'ಗುಬ್ಬಿಗಳ ಸಂಸಾರ'—ಶ್ರೀ. ಕೃಷ್ಣಕುಮಾರ ಕಲ್ಲೂರ.

**ಭಾಷಾಭ್ಯಾಸ:—**

೧. ಇಲ್ಲಿ ಬಂದ ಬೆಕ್ಕಿನ ಮರಿಗಳ ಸೂಕ್ಷ್ಮ ಅಭ್ಯಾಸವನ್ನು ನೋಡಿ, ಇದರಂತೆ ಆದೇ ಹುಟ್ಟಿದ ನಾಯಿಯ ಮರಿ, ಆಕಳ ಕರು, ವರ್ಣಿಸಿರಿ.

೨. ಪ್ರೌಢರ ಮತ್ತು ಬಾಲಕರ ಮನಸ್ಸಿನ ರೀತಿಗಳಲ್ಲಿರುವ ಭೇದವನ್ನು ಸ್ಪಷ್ಟಗೊಳಿಸುವುದನ್ನು ನಿರೀಕ್ಷಿಸಿರಿ. ಮನೆಯಲ್ಲಿ ಬಹಳ ದಿವಸಗಳನಂತರ ಓದು ಮುಗಿಸಿ ಮನೆಗೆ ಮಗನು ಬಂದ ದಿನ ತಂದೆ, ತಾಯಿ ಮತ್ತು ಅವರ ಚಿಕ್ಕ ಹುಡುಗ (ತಮ್ಮ) ಇವರ ಚಿತ್ರವನ್ನು ವರ್ಣಿಸಿರಿ.

೩. 'ನೀರೋ' ಎಂಬುದು ರೋಮ ಸಾಮ್ರಾಟನ ಹೆಸರು. ಅವನ ವೈಶಿಷ್ಟ್ಯವೆಂದರೆ ರೋಮ ಪಟ್ಟಣಕ್ಕೆ ಬೆಂಕಿ ಹಚ್ಚಿ ಸಾವಿರಾರು ಜನ ಸಾವಿನ ದವಡೆಯಲ್ಲಿ ಸಿಕ್ಕಿ ನರಳುತ್ತಿರುವಾಗ ಆ ದೃಶ್ಯವನ್ನು ನೋಡಲು ಪಿಟೀಲನ್ನು ತೆಗೆದುಕೊಂಡು ಬಾರಿಸುತ್ತ ಕುಳಿತಿರುತ್ತಿದ್ದ. ಕತೆಯಲ್ಲಿಯ ನಾಯಿಗೆ 'ನೀರೋ' ಎಂಬ ಹೆಸರು ಎಷ್ಟರ ಮಟ್ಟಿಗೆ ಉಚಿತವಾಗಿದೆ?

**ಶಬ್ದ ವಿಚಾರ:—**

೧. ಜಾವ ಇದು ಯಾವ ಸಂಸ್ಕೃತ ಶಬ್ದದಿಂದ ಹುಟ್ಟಿದೆ? ಇದೇ ರೀತಿಯಲ್ಲಿ ಯಕಾರಕ್ಕೆ ಬದಲಾಗಿ ಜಕಾರ ಬಂದ ಕನ್ನಡ ಸಂಸ್ಕೃತ ಶಬ್ದಗಳನ್ನು ಹೇಳಿರಿ.

೨. ನಾಮಪದಗಳಿಗೆ ಬಡಕ, ಬುರುಕ ಪ್ರತ್ಯಯಗಳನ್ನು ಹಚ್ಚುವುದರಿಂದ ಯಾವ ರೂಪಗಳು ಮತ್ತು ಅರ್ಥಗಳು ಬರುತ್ತವೆ? ಇಂತಹ ನಾಲ್ಕು ನಾಲ್ಕು ಉದಾಹರಣಗಳನ್ನು ಕೊಡಿರಿ.

೩. ವಿವರ್ಣ, ವಿ+ವರ್ಣ, ಬಣ್ಣ ಬದಲಾಗು, ಕಳೆಗುಂದು, ಎಂಬ ಅರ್ಥವಾಗುತ್ತದೆ. ಅದೇ ರೀತಿಯಲ್ಲಿ 'ವಿ' ಎಂಬ ಪ್ರತ್ಯಯವನ್ನು ನಾಮಪದದ ಮೊದಲು ಹಚ್ಚಿ ಉಂಟಾದ ಐದು ರೂಪಗಳನ್ನು ಕೊಡಿರಿ.

**ವಾಕ್-ಶಿಕ್ಷಣ:—**

ಈ ಕಥೆಯಿಂದ ಧ್ವನಿತವಾಗುವ ಮಾತುಗಳು ಯಾವುವು ?

**ಚರ್ಚೆ:—**

'ಆ ಬಾಲಕರೇ ನೀರೋನ ಎದುರಿಗೆ (ಆ ನಾಯಿಯು) ಅವುಗಳ ತಂದೆ ಎಂಬ ಭಾವನೆಯಿಂದ ಬೆಕ್ಕಿನ ಮರಿಗಳನ್ನು ತಂದು ಇರಿಸಿದರು. ನಾಯಿ ಅವನ್ನು ತಿಂದು ಬಿಟ್ಟಿತು' ಎಂದು ವರ್ಣಿಸಿದ್ದರೆ ಈ ಕಥೆಯು ಸೊಗಸು ಹೆಚ್ಚಬಹುದಿತ್ತೇ? ಹಾಳಾಗಬಹುದಿತ್ತೇ ?

**ಬರೆಹ:—**

ನಾಯಿ, ಬೆಕ್ಕು, ಪಾರಿವಾಳ, ಗಿಳಿ ಇಂತಹ ಯಾವುದೊಂದು ಪ್ರಾಣಿಯನ್ನು ಸಾಕಿದ್ದಾಗಿ ಭಾವಿಸಿ, ಸಾಕುಪ್ರಾಣಿಯೊಡನೆ ಬೆಳೆವ ಪ್ರೀತಿ ವಿಶ್ವಾಸಗಳ ಒಂದು ವರ್ಣನೆಯನ್ನು ಬರೆಯಿರಿ.

# ೧೧. ತ್ಯಾಗ

[ ತ್ಯಾಗದಲ್ಲಿ ಹೆಣ್ಣುಮಕ್ಕಳನ್ನು ಮೀರಿಸಿದವರಿಲ್ಲ. ಅವರ ತ್ಯಾಗದ ಮೂಲಕವಾಗಿಯೇ ಲೋಕವು ಅಳಿಯದೆ ಉಳಿದಿದೆ. ಗಂಡಸರಿಗಿಂತಲೂ ಹೆಂಗಸರಿಗೇನೇ ಒಟ್ಟಿನಲ್ಲಿ ತ್ಯಾಗದ ಪ್ರಸಂಗಗಳನ್ನು ಎದುರಿಸಬೇಕಾಗುತ್ತದೆ. ಪರಿಸ್ಥಿತಿಯ ಒತ್ತಾಯದಲ್ಲಿ ಆದ ಬಲಿಗೆ ತ್ಯಾಗದಷ್ಟು ಬೆಲೆಯಿಲ್ಲ. ತ್ಯಾಗಿಗಳು ಒಂದು ಶ್ರೇಷ್ಠ ಧ್ಯೇಯಸಾಧನೆಗಾಗಿ ತಾವು ಎದುರಿಸಬೇಕಾದ ಸಂಕಟಗಳನ್ನು ಸಂತೋಷದಿಂದಲೇ ಸ್ವಾಗತಿಸುತ್ತಾರೆ; ಸಹಿಸುತ್ತಾರೆ. ಬಲಿಯಾದವರು ತಮ್ಮ ಕಾರ್ಯದ ಹಿರಿಮೆಯ ಅರಿವಿನ ಆನಂದವನ್ನು ಅರಿಯರು. ಸಂಕಟಗಳು ಯಾರನ್ನೂ ಬಿಟ್ಟಿಲ್ಲ. ಆ ಸಂಕಟಗಳಿಗೆ ಕಂಗೆಟ್ಟು, ಬಳಲಿ ಹೋರಾಡುವುದರಿಂದ, ಆ ಜೀವಗಳು ತಮ್ಮ ಕೀರ್ತಿಯನ್ನು ಮಾತ್ರ ಲೋಕಕ್ಕೆ ಸಾರುತ್ತವೆ. ತಮ್ಮ ರಾಷ್ಟ್ರದ ಸ್ವಾತಂತ್ರ್ಯವನ್ನು ಕಾಪಾಡುವುದಕ್ಕಾಗಿ ಎಂತಹ ಕಷ್ಟನಷ್ಟಗಳನ್ನೂ ಲೆಕ್ಕಿಸದ ಮಹಿಳೆಯರ ದೃಷ್ಟಾಂತಗಳಲ್ಲೊಂದಾದ ಪ್ರಸ್ತುತದ ವರ್ಣನೆಯಲ್ಲಿ ತನ್ನ ಸಂಸಾರಸುಖಕ್ಕೆ ತಿಲಾಂಜಲಿಯನ್ನೀವ ಸಂಕಲ್ಪ ಮಾಡಿದ ಹೇಮಾಂಬಿಕೆಯ ತ್ಯಾಗದಲ್ಲಿ ಯಾವ ಉದಾತ್ತ ಉದ್ದೇಶವು ಅಡಕವಾಗಿದೆ ಎಂಬುದನ್ನು ನೋಡಿರಿ. ]

ಶ್ರೀ ಆನಂದಕಂದರ 'ರಾಜಯೋಗಿ' ಎಂಬ ಕಾದಂಬರಿಯಿಂದ ಈ ಭಾಗವನ್ನು ಆಯ್ದುಕೊಳ್ಳಲಾಗಿದೆ.

**ಸಂದರ್ಭ:—**

ಮಲ್ಲಿಕಾರ್ಜುನರಾಯ, ವಿರೂಪಾಕ್ಷರಾಯ ಇವರಿಬ್ಬರು ಅಣ್ಣತಮ್ಮಂದಿರು.

ವಿರೂಪಾಕ್ಷರಾಯನು ರಾಜ್ಯಲೋಭದಿಂದ ತನ್ನ ಅಣ್ಣನ ಕೊಲೆಮಾಡಿಸಿ ಪಟ್ಟಕ್ಕೆ ಬಂದನು. ಇದಲ್ಲದೆ ಮಲ್ಲಿಕಾರ್ಜುನರಾಯನ ಮಕ್ಕಳಾದ ರಾಜಶೇಖರ ಮತ್ತು ಪೆದ್ದರಾಯ ಇವರಿಬ್ಬರನ್ನು ಅಸೂಯೆಯಿಂದ ನೋಡುತ್ತಿದ್ದನು. ರಾಜಶೇಖರನು ತನಗೆ ಪಟ್ಟವಿಲ್ಲ ದಿದ್ದರೂ, ರಾಜ್ಯವು ವೈಭವದಿಂದ ಮೆರೆಯಲಿ ಎಂಬ ಭಾವನೆಯುಳ್ಳವನು. ಹೇಮಾಂಬಿಕೆಯು ಅಲ್ಲಿಯ ಕೋಶಾಧಿಕಾರಿಯ ಮಗಳು. ರಾಜಶೇಖರ ಮತ್ತು ಹೇಮಾಂಬಿಕೆ ಇವರಿಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದರು. ಆದರೆ ವಿಷಯಲಂಪಟನಾದ ವಿರೂಪಾಕ್ಷರಾಯನು ಹೇಮಾಂಬಿಕೆಯನ್ನು ಮದುವೆಯಾಗಲು ಆಶಿಸಿದನು. ವಿರೂಪಾಕ್ಷರಾಯನ ದುರ್ವ್ಯಸನದಿಂದ ರಾಜ್ಯವು ಹಾಳಾಗಹತ್ತಿತು. ರಾಜಶೇಖರನೇ ಹೇಮಾಂಬಿಕೆಗೆ ತನ್ನ ಕಕ್ಕನ ಮದುವೆಯಾಗಲು ಉಪದೇಶಿಸಿದನು. ವಿರೂಪಾಕ್ಷರಾಯನನ್ನು ಹಾದಿಗೆ ತರಲು ಮದುವೆಯೊಂದೇ ಮಾರ್ಗ ವೆಂದು ಬೋಧಿಸಿದನು. ಹೇಮಾಂಬಿಕೆಯು ಅವನ ಉಪದೇಶದಂತೆ ಮದುವೆಯಾಗಲು ಸಿದ್ಧಳಾದ ವೃತ್ತಾಂತವು ಇಲ್ಲಿ ಬಂದಿದೆ.

ಸಂತೋಷಸಭೆಯು ಹಗಲು ಮೂರು ಪ್ರಹರಗಳಿಗೆ ಮೊದಲಾಗುವುದಿದ್ದಿತು. ಅಂದೆಯೇ, ಮುಂಬಗಲಿನ ಸುಮಾರು ಹತ್ತ ಗಳಿಗೆಗಳಾಗಿ ಹೋಗಿರಬಹುದು; ರಾಜಶೇಖರನು ತನ್ನ ದಿವಾಣಖಾನೆಯಲ್ಲಿ ಒಬ್ಬನೇ ಕುಳಿತುಕೊಂಡಿದ್ದಾನೆ. ಮುಂದೆ ಬಿದ್ದಿದ್ದ ಓಲೆಯನ್ನು ಆಗಾಗ ಕೈಯೊಳಗೆ ತೆಗೆದುಕೊಳ್ಳುವನು, ಅದರಲ್ಲಿಯ ಬರೆಹ ದಲ್ಲಿ ತನ್ನ ಕಣ್ಣ ನೋಟವನ್ನು ಕೀಲಿಸುವನು. ನೊದಲಿನಿಂದ ತುದಿಯವರೆಗೆ ಒಂದೆ ಒಂದು ಅಕ್ಷರವನ್ನು ಬಿಡದೆ ಓದಿಬಿಡುವನು. ಈಗ ಹತ್ತಾರು ಸಲ ಅದನ್ನ ವನು ಓದಿ ಮುಗಿಸಿರಬಹುದು.

ಓಲೆಯನ್ನು ಓದುತ್ತಿರುವಾಗ ಪ್ರತಿಸಲವೂ ರಾಜಶೇಖರನ ಮೈಯ ನವಿರು ನಿಮಿರಿ ನಿಲ್ಲುವುದು, ಕಂಠವು ಬಿಗಿದುಬರ ವುದು; ಕೆಮ್ಮೊಗವಾಗಿ, ಕೆಳದುಟಿ ಅದಿರು ವುದು; ಕಂಬನಿ ಹೊರಕ್ಕೆ ಹಣಿಯಿಕ್ಕುವುದು; ತುಂಡುತುಂಡಾಗಿ ಬಿಸಿಯುಸಿರು ಹೊರಟು, ಅಲ್ಲಿಯ ಹವೆಯಲ್ಲಿ ಬಿಸುಪು ತಲೆದೋರುವುದು; ಓದುವುದಾದ ಮೇಲೆ ಕಣ್ಣನೋಟಗಳು ಯೋಜನಾಲೋಕದತ್ತ ತೆರಳುವುವು; ಅಲ್ಲಿಯ ಅನೇಕಾನೇಕ ದೃಶ್ಯಗಳನ್ನು ಕಂಡು ವಿವಿಧ ಭಾವಗಳ ಅನುಭವವನ್ನು ಅಭಿವ್ಯಕ್ತಿಗೊಳಿಸುವುವು.

ಹೇಮಾಂಬಿಕೆಯ ಸಹಚರಿ ಬಾಯಮ್ಮನು, ಆ ಓಲೆಯನ್ನು ಕೊಟ್ಟು ಹೋಗಿ ಅರ್ಧ ಪ್ರಹರದಷ್ಟು ಸಮಯವು ಕಳೆದುಹೋಗಿರಬಹುದು. ರಾಜಶೇಖರನು ಇನ್ನೊಂದು ಸಲವೂ ಓಲೆಯನ್ನು ಕೈಯಲ್ಲಿ ತೆಗೆದುಕೊಂಡು ಓದಲುತೊಡಗಿದನು. ಹೇಮಾಂಬಿಕೆಯು ಬರೆದ ಪತ್ರವದು. ಅದರಲ್ಲಿ ಬರೆದುದು ಹೀಗೆ:—

"ಒಲವಿನ ರಾಜಶೇಖರ !

ನಿಮ್ಮನ್ನು ನಾನು ಇದುವರೆಗೆ 'ಕುಮಾರ' ಎಂದು ಸುಮ್ಮನೆ ಕರೆಯುತ್ತಿದ್ದು ದನ್ನು, ಇನ್ನು ಮೇಲೆ ಅನ್ವರ್ಥಗೊಳಿಸಬೇಕೆಂದು ನಿರ್ಣಯಿಸಿಬಿಟ್ಟಿದ್ದೇನೆ.

ಅಂದು ರಾತ್ರಿಯಲ್ಲಿ ನೀವಾಡಿದ ಮಾತುಗಳು ನನ್ನ ವಿಚಾರದ ದಿಶೆಯನ್ನೇ ಮಾರ್ಪಡಿಸಿಬಿಟ್ಟವು; ನನ್ನ ಬದುಕನ್ನು ಸಾರ್ಥಕಗೊಳಿಸುವಂತಹ ನೇರವಾದ

ಗುರಿಯೊಂದನ್ನು ತೋರಿಸಿದುವು. ಕುಮಾರ, ನಮ್ಮ ಸದ್ಧರ್ಮ-ಸಂಸ್ಕೃತಿಗಳನ್ನು ಕಾಪಾಡುವುದಕ್ಕಾಗಿ ನಿಂತುಕೊಂಡ ಈ ಸಾಮ್ರಾಜ್ಯಕ್ಕಾಗಿ, ನಮ್ಮ ಮೊದಲಿಗರು ಸಲ್ಲಿಸಿದ ಆತ್ಮಾಹುತಿಯ ಚಿತ್ರಗಳು ನನ್ನ ಕಣ್ಣೆದುರಿನಲ್ಲಿ ಮರಳಿ ಮರಳಿ ಬಂದು ಕುಣಿದಾಡಿ ಹೋದುವು. ಎಷ್ಟು ಜನ ತಾಯಿ ತಂದೆಗಳು ತಮ್ಮ ಕರುಳನ್ನು ಕಳೆದುಕೊಂಡು ಕೂಗಿಟ್ಟರೋ! ಎಷ್ಟು ಜನ ಸುಮಂಗಲಿಯರು ತಮ್ಮ ಮಾಂಗಲ್ಯವನ್ನು ಕಳೆದುಕೊಂಡು ಮರುಗಿದರೋ! ಇನ್ನೆಷ್ಟು ಜನ ಪ್ರಣಯಿಗಳು ತಮ್ಮ ಪ್ರಿಯಜನರ ಅಗಲಿಕೆಯ ತಾಪದಿಂದ ಕಂಗೆಟ್ಟರೋ! ಅದನ್ನೆಲ್ಲ ಯಾರು ಅಳೆದು ಹೇಳಬಲ್ಲರು? ಅವರೆಲ್ಲರ ತ್ಯಾಗ-ತಪಸ್ಸುಗಳ ಪೂರ್ಣಫಲವೇ ಈ ಭವ್ಯ ಸಾಮ್ರಾಜ್ಯವೆಂಬ ಮಾತು ನನ್ನ ಮನದಲ್ಲೀಗ ನೆಟ್ಟುನಿಂತಿದೆ.

ಶ್ರೀಗಂಧದ ಮರವು ತನ್ನನ್ನು ತಾನು ಸುಟ್ಟುಕೊಂಡಾಗಲೆ ಲೋಕದ ವಾತಾವರಣಕ್ಕೆ ಕಂಪನ್ನು ನೀಡಬಲ್ಲುದು. ಇನಿದಾದ ಕಬ್ಬು ತನ್ನನ್ನು ತಾನು ಬಲಿಗೊಟ್ಟಾಗಲೆ ಬಹುಜನದ ಬಾಯ ಬರವನ್ನು ಕಳೆಯಲು ಸಮರ್ಥವಾಗುವುದು. ಅದರಂತೆಯೆ ಬಹುಜನದ ಹಿತವನ್ನು ಸಾಧಿಸುವುದಕ್ಕಾಗಿ ಕೆಲವೊಂದು ಜೀವಿಗಳು ತಪಿಸುತ್ತಿರಬೇಕಾದುದು ಅನಿವಾರ್ಯವೆಂಬ ಮಾತು ನನ್ನ ಹೃದಯದಲ್ಲಿಂದು ಮನೆಮಾಡಿಬಿಟ್ಟಿದೆ. ಸಾಮ್ರಾಜ್ಯದ ಸಂರಕ್ಷಣೆ-ಸಂವರ್ಧನೆಗಳಿಗಾಗಿ ತಪಿಸುವ ಜೀವಗಳಲ್ಲಿ ನನ್ನದೊಂದನ್ನೂ ಜೊತೆಗೂಡಿಸಬೇಕೆಂದು ನಿರ್ಧರಿಸಿ ನಿಂತಿದ್ದೇನೆ.

ಮನಸ್ಸು-ಹೃದಯಗಳು ಸಮ್ಮತಿಸದಿದ್ದುದನ್ನು ಅನುಭವಿಸಬೇಕಾದ ಪ್ರಸಂಗವು ಬಂದಾಗ, ಆತ್ಮಹತ್ಯ ಮಾಡಿಕೊಂಡು ಸಾಯುವುದು ನಮ್ಮ ಹೆಣ್ಣುಮಕ್ಕಳದೊಂದು ಸ್ವಭಾವ. ಹಾಗೆ ವ್ಯರ್ಥವಾಗಿ ಸತ್ತುಹೋಗುವುದನ್ನು ನನ್ನ ಮನಸ್ಸು ಒಪ್ಪದಾಗಿದೆ. ತಾನು ಅನಿಷ್ಟ ಪ್ರಸಂಗದೊಡನೆ ಹೋರಾಡಿ, ತನ್ನವರಿಗೆ ಶುಭಪ್ರಸಂಗವನ್ನು ಸಮೀಪಕ್ಕೆ ತಂದು ಕೊಡುವುದರಲ್ಲಿಯೆ ಮನುಷ್ಯಜನ್ಮದ ಸಾರ್ಥಕತೆಯೆಂದು, ನನ್ನ ಭಾವನೆ ನನಗೆ ಹೇಳುತ್ತಿದೆ. ಕುಮಾರ, ನೀವು ಅತಿಯಾಗಿ ಆಶ್ಚರ್ಯಪಟ್ಟುಕೊಳ್ಳಬಹುದು; ಈ ಭಾವಪ್ರಚೋದನೆಯಿಂದಲೆ ನಾನಿಂದು ಮಹಾರಾಜರ ಪಾಣಿಗ್ರಹಣಕ್ಕೆ ಸಿದ್ಧಳಾಗಿದ್ದೇನೆ.

ನನ್ನ ಭವಿಷ್ಯಜ್ಜೀವನದ ಗತಿಯನ್ನು ನಾನು ಬಲ್ಲೆನು; ಆದರೆ ಹೆಣ್ಣು ಅಯುಕ್ತವರನ ವಶಕ್ಕೆ ಹೋದರೆ, ಒಂದೇ ಒಂದು ಹೆಣ್ಣಿನ ಬಾಳು ಮಾತ್ರ ಬೀಳಾದೀತು! ಸಾಮ್ರಾಜ್ಯವಧುವು ಅಯೋಗ್ಯವರನ ಸ್ವಾಧೀನೆಯಾದರೆ ಅದರ ದುಷ್ಪರಿಣಾಮದಿಂದ ನಾಡಿನ ಜನರ ಬದುಕೆಲ್ಲವೂ ಹಾಳಾಗಿಹೋದೀತು; ಸಾಮ್ರಾಜ್ಯಲಕ್ಷ್ಮಿಗಾಗಿ ಒಳ್ಳೆಯ ವರನನ್ನು ಹುಡುಕುವುದಕ್ಕೆಂದು ನಾವೆಲ್ಲರೂ ಮಾಡಬೇಕಾಗಿರುವ ಇಷ್ಟಿಗಾಗಿ, ನಾನಿಂದು ಆಹುತಿಯ ಪಶುವಾಗಬೇಕೆಂದು ಗೊತ್ತುಮಾಡಿದ್ದೇನೆ.

ಕುಮಾರ, ಕೊನೆಯದೊಂದು ನನ್ನ ಮನದ ಅಪೇಕ್ಷೆಯನ್ನು ವಿದಿತಪಡಿಸು

ದಕ್ಕೆ ನೀವೇ ಯೋಗ್ಯರೆಂದು ನನ್ನ ಅಭಿಪ್ರಾಯ. ಹಾಗಾದುದನ್ನು ಈ ಕಣ್ಣಿನಿಂದ ಕಂಡರೆ, ನನ್ನ ಎಂತಹ ಸಂಕಟಸಾಗರಗಳನ್ನೂ ನಾನು ಕಾಲುಹೊಳೆಯಾಗಿ ಕಾಣುತ್ತೇನೆ. ಅಖಂಡಪಂಪಾಪತಿಯೂ ಅಖಂಡಭುವನೇಶ್ವರಿಯೂ ಆ ದಿನವನ್ನು ಬೇಗನೆ ಒದವಿಸಲಿ !

ಎಂದೆಂದೂ ನಿಮ್ಮವಳಾದ

**"ಹೇಮಾ"**

ಕೊನೆಯ ಸಲ ಓಲೆಯನ್ನು ಓದಿಯಾದ ಬಳಿಕ ರಾಜಶೇಖರನು ತನ್ನಲ್ಲಿಯೆ ಎಂದುಕೊಂಡ.

" ಧನ್ಯೆ ! ಧನ್ಯೆ !! ಹೇಮಾಂಬಿಕೆ, ನಿನ್ನಂತಹ ವೀರಪುತ್ರಿಯನ್ನು ಪಡೆದಿರುವ ನಮ್ಮ ವಿಜಯನಗರಕ್ಕೆ ಹೆದರಿಕೆಯೆಲ್ಲಿಹುದು ? ನಿನ್ನ ಈ ಆತ್ಮಾಹುತಿಯ ಫಲದ ಅಮೃತವೃಷ್ಟಿಯು, ನಿಜವಾಗಿಯೂ ನಮ್ಮ ಸಾಮ್ರಾಜ್ಯಾನಂದವನ್ನು ಕಾಪಾಡುವುದು. ಆದರೆ ಹೇಮಾ, ನನ್ನ ಯೋಗ್ಯತೆ ನನಗೆ ಗೊತ್ತಿದೆ. ನಾನು ಸಿಂಹಾಸನವನ್ನು ಏರುವುದಕ್ಕಾಗಿ ಹುಟ್ಟಿಬಂದವನಲ್ಲವೆಂಬುದನ್ನು ನಿನ್ನ ಈ ತ್ಯಾಗದ ಪರಮಾವಧಿಯು ಸಿದ್ಧಗೊಳಿಸಿಬಿಟ್ಟಂತಾಯಿತು........"

ಹಠಾತ್ತಾಗಿ ದಂಡನಾಯಕ ಸಾಳುವ ನರಸಿಂಹನು ರಾಜಶೇಖರನು ಕುಳಿತಿದ್ದಲ್ಲಿಗೆ ಬಂದುಬಿಟ್ಟನು. ಮುಂದಿದ್ದ ಓಲೆಯನ್ನು ಮರೆಗೆ ಸರಿಸುತ್ತ ರಾಜಶೇಖರನು, ಆತನನ್ನು ಆದರದೊಂದಿಗೆ ಬರಮಾಡಿಕೊಂಡು ಕೈಹಿಡಿದು ಆಸನದಲ್ಲಿ ಕುಳ್ಳಿರಿಸಿದನು.

**—ಆನಂದಕಂದ**

## ಅಭ್ಯಸನಗಳು

**ಪ್ರಶ್ನೆಗಳು:—**

೧) ಓಲೆಯನ್ನು ಓದಿದಾಗ ರಾಜಶೇಖರನ ಮನಃಸ್ಥಿತಿಯು ಹೇಗೆ ಇತ್ತು ?

೨) ಹೇಮಾಂಬಿಕೆಯು ಮನಸ್ಸಿಲ್ಲದೆ ಮದುವೆಗೆ ಏಕೆ ಸಿದ್ಧಳಾದಳು ?

೩) ಆತ್ಮಹತ್ಯೆಯು ಯೋಗ್ಯವಲ್ಲವೆಂದು ಹೇಮಾಂಬಿಕೆ ಬಗೆಯಲು ಕಾರಣವೇನು ?

೪) ಹೇಮಾಂಬಿಕೆ ವೀರಪುತ್ರಿಯಿರುವಳೆಂಬುದನ್ನು ರಾಜಶೇಖರನು ಹೇಗೆ ಮನಗಂಡನು?

**ಭಾಷಾಭ್ಯಾಸ.—**

೧) ಎಷ್ಟು ಜನ ತಾಯಿತಂದೆಗಳು ತಮ್ಮ ಕರುಳನ್ನು...ಕಂಗೆಟ್ಟಿರೋ! ಈ ವಾಕ್ಯಗಳಲ್ಲಿ ಎಷ್ಟು ಎಂಬುದರ ಪುನರುಕ್ತಿಯ ಪರಿಣಾಮವನ್ನು ಲಕ್ಷಿಸಿರಿ. ಓಲೆಯನ್ನು ಓದಿದ ರಾಜಶೇಖರನ ಮುಖಮುದ್ರೆಯನ್ನು ಬಣ್ಣಿಸುವ ವಾಕ್ಯಗಳನ್ನು ಹೇಳಿರಿ. ಇದರಂತೆ ಆನಂದದ ಮುಖಮುದ್ರೆಯನ್ನು, ಕೋಪದ ಮುಖಮುದ್ರೆಯನ್ನು ಬಣ್ಣಿಸಿರಿ.

೨) ಇಷ್ಟಿಗಾಗಿ ನಾಳಿಂದು ಆಹುತಿಯ ಪಶುವಾಗಬೇಕೆಂದು ಗೊತ್ತುಮಾಡಿದ್ದೇನೆ.
ಸಂಕಟಸಾಗರವನ್ನು ಕಾಲುಹೊಳೆಯಾಗಿ ಕಾಣುತ್ತೇನೆ.

**ಶಬ್ದ ವಿಚಾರ:—**

೧) ಮುಂಬಗಲು, ಕೆಮ್ಮೊಗ, ಹಣೆಯಿಕ್ಕು, ಇನಿಗಬ್ಬ, ಕಂಬನಿ, ನಟ್ಟಿರುಳು—ಈ ಸಮಸ್ತಪದಗಳನ್ನು ವಿಗ್ರಹಿಸಿರಿ.

೨) ನೋಟವನ್ನು ಕೀಲಿಸು, ಬಿಗಿದುಬರು, ಬಾಯಿಬರು. ಮೈನಡುಗು. ಬಲಿಗೊಡು—ಇವುಗಳನ್ನು ನಿಮ್ಮ ವಾಕ್ಯಗಳಲ್ಲಿ ಉಪಯೋಗಿಸಿರಿ.

೩) ತ್ಯಾಗ ಈ ಅರ್ಥವನ್ನು ಸೂಚಿಸುವ ಪರ್ಯಾಯ ಶಬ್ದಗಳನ್ನು ಈ ಪಾಠದಿಂದ ಎತ್ತಿ ಹೇಳಿರಿ. (ಉದಾ; ಆತ್ಮಾಹುತಿ).

'ಮಾರ್' ಪ್ರತ್ಯಯವನ್ನು ಹಚ್ಚಿ ಐದು ಶಬ್ದಗಳನ್ನು ಹೇಳಿರಿ.(ಉದಾ: ಮಾರ್ನುಡಿ.)

**ವಾಕ್–ಶಿಕ್ಷಣ:—**

೧) ಈ ಭಾಗವನ್ನು ಸಂವಾದ ರೂಪದಲ್ಲಿ ಬರೆದು ಅಭಿನಯಿಸಿರಿ.

೨) ಶ್ರಮದಾನ ಯಜ್ಞದಲ್ಲಿ ಭಾಗ ವಹಿಸಲು ಜನತೆಯನ್ನು ಪ್ರಚೋದಿಸುವ ಒಂದು ಭಾಷಣ ಮಾಡಿರಿ.

೩) ಅಂದು ರಾತ್ರಿಯಲ್ಲಿ......ಈ ವಾಕ್ಯವೃಂದವನ್ನು ಪಾಠಮಾಡಿರಿ.

**ಚರ್ಚೆ:—**

ತಾನು ದುಃಖಿಯಾಗಿ ದೇಶಸೇವೆಯನ್ನು ಮಾಡುವುದು ಅಸಾಧ್ಯ.

**ಬರೆಹ:—**

ಆಚಾರ್ಯ ವಿನೋಬಾಜಿಯವರ ಉಪನ್ಯಾಸ ಕೇಳಿ ಸಮಾಜಸೇವೆಗಾಗಿ ತನ್ನ ಆಯುಷ್ಯವನ್ನು ಮುಡಿಪಾಗಿಸುವ ನಿಶ್ಚಯಮಾಡಿದ ತರುಣನೊಬ್ಬನು ತನ್ನ ತಂದೆಗೆ ಬರೆದ ಪತ್ರ.

# ೧೨. ಬೈರಿಗೆ.

[ಎಗ್ಗರು ತಮ್ಮ ನಡೆನುಡಿಗಳಿಂದ ಹೇಗೆ ನಗೆಗೆ ಕಾರಣರಾಗಿರುತ್ತಾರೆ ಎಂಬುದನ್ನಿಲ್ಲಿ ಚಿತ್ರಿಸಲಾಗಿದೆ. ತನ್ನ ಮಾತೇ ಮಾತು: ಇನ್ನೊಬ್ಬರ ದೃಷ್ಟಿಯಿಂದ ನೋಡುವದನ್ನೇ ಅರಿಯದವನೆ ಎಗ್ಗ. ಎಗ್ಗನೆಂದರೆ ಏಕ—ಎಕ್ಕ ನೋಟದವ.]

ಹಾಸನದಿಂದ ಮೈಸೂರಿಗೆ ಬರುತ್ತಿದ್ದೆ ನಮ್ಮ ಗಾಡಿಯಲ್ಲಿ ತರುಣ ದಂಪತಿಗಳಿಬ್ಬರು ಕುಳಿತಿದ್ದರು, ಸುಮಾರು ನಲವತ್ತು ವಯಸ್ಸಿನ ಗುಮಾಸ್ತರೊಬ್ಬರೂ ಕುಳಿತಿದ್ದರು. ಅವರ ಬಾಯಿ ಸ್ವಲ್ಪ ಒಡಕು. ಗಾಡಿಯಲ್ಲಿ ಕುಳಿತೊಡನೆ, 'ಹಾಳು ರೈಲು ಎಷ್ಟು ಹೊತ್ತಾದರೂ ಹೊರಡುವದೇ ಇಲ್ಲ. ಮೈಸೂರವರೆಗೂ ಸಾಯಬೇಕಲ್ಲ, ಇದರಲ್ಲಿ ಕುಳಿತು! ಇದನ್ನು ಬಿಟ್ಟರೆ ನಮಗೆ ವಿಧಿ ಇಲ್ಲ' ಎಂದು ಎಲ್ಲರನ್ನೂ ಉದ್ದೇಶಿಸಿ ರೈಲಿಗೆ ಶಾಪ ಹಾಕಿದರು. ಅನಂತರ ನನ್ನ ಕಡೆ ತಿರುಗಿ ಮಾತಿಗೆ ಎರಗಿದನ್ನು. ಅವರ ವೇಷ-ಭೂಷಣಗಳನ್ನೂ ವರ್ತನೆಯನ್ನೂ ನೋಡಿ ಅವರೊಡನೆ ಮಾತಾಡಲು ನನಗೆ ಇಷ್ಟವಿರಲಿಲ್ಲ. ಅವರು ಬಿಡರು. ಆದ್ದರಿಂದ ಅವರ ಮಾತಿಗೆಲ್ಲಾ ಬರಿಯ 'ಹು.'

'ಏನು, ಮೈಸೂರಿಗೋ?'

'ಹುं.'

'ಒಬ್ಬರೇ ಹೊರಟಹಾಗಿದೆ?'

'ಹು.'

'ಸರ್ಕಾರಿ ಹುದ್ದೆಯಲ್ಲಿದ್ದೀರೊ?'

'ಹು.'

'ಯಾವ ಇಲಾಖೆ?'

'ವಿದ್ಯಾಭ್ಯಾಸ.'

'ಎಲ್ಲಿ? ಒಂದು ದಿನವೂ ಕಾಣಲಿಲ್ಲ?'

'ನಾನು ಇರುವುದು ಸಕಲೇಶಪುರದಲ್ಲಿ.'

'ಮಾಧ್ಯಮಿಕ ಶಾಲೆಯಲ್ಲೋ'

'ಇಲ್ಲ, ರೇಂಜ್ ಇನ್‌ಸ್ಪೆಕ್ಟರು.'

ಅನಂತರ ಸ್ವಲ್ಪ ಮರ್ಯಾದೆಯಾಗಿ— 'ಬೆಟ್ಟ ಸೀಮೆ ತಿರುಗುವುದು ಕಷ್ಟವಲ್ಲವೇ,

'ಹು.'

'ಸಂಸಾರ ಮೈಸೂರಲ್ಲೇ ಇದೆ ಎಂದು ಕಾಣುತ್ತದೆ?'

'ಹು.'

'ಮಕ್ಕಳು ಮರಿ ಇದಾರೋ?'

'ಹು.'

'ಎಷ್ಟೋ?'

'ಮೂರು—ಎರಡು ಗಂಡು, ಒಂದು ಹೆಣ್ಣು.'

'ತಂದೆ ತಾಯಿ ಇದಾರೊ?'

'ಹು.'

'ತಂದೆಯವರೂ ಹುದ್ದೆಯಲ್ಲಿದಾರೊ?'

'ಹು.'

'ನೀವೇ ಪುಣ್ಯವಂತರು ಸ್ವಾಮಿ! ಎಲ್ಲವೂ ಸರಿಯಾಗಿರುವುದು ಬಹಳ ಅಪರೂಪ. ಹಿಂದಿನ ಜನ್ಮದಲ್ಲಿ ಒಳ್ಳೆ ಪುಣ್ಯ ಮಾಡಿದ್ದೀರಿ. ತುಂಬ ಸಂತೋಷ ಸ್ವಾಮಿ. ಸಕಲೇಶಪುರದಲ್ಲಿ ನಮ್ಮವರು ಇದ್ದಾರೆ, ಬಂದಾಗ ಭೇಟಿ ತೆಗೆದುಕೊಳ್ಳುತ್ತೇನೆ.'

'ಇವರ ಹೊಗಳಿಕೆ ನನಗೆ ಬೇಕಾಗಿರಲಿಲ್ಲ. ಸದ್ಯ, ಇಷ್ಟು ಕಾಡಿಗೆ ನನ್ನನ್ನು ಬಿಟ್ಟರೆ ಸಾಕೆನ್ನಿಸಿತ್ತು. ಪ್ರಶ್ನಸ್ಥಿತಿಯನ್ನು ನನ್ನ ಎದುರುಗಡೆ ಕುಳಿತಿದ್ದ ತರುಣ

ಸುಮಾರಾದ ಸೂಟ್ ತೊಟ್ಟಿದ್ದನು. ನಡತೆಯಲ್ಲಿ ವಿಶ್ವವಿದ್ಯಾನಿಲಯದ ಕೈವಾಡ ಕಾಣುತ್ತಿತ್ತು. ಆದರೂ ಮುಖದಲ್ಲಿ ದುರಹಂಕಾರದ ಚಿಹ್ನೆಯಿರಲಿಲ್ಲ; ಹೆಚ್ಚು ಹೊಡೆತಕ್ಕೆ ಸಿಕ್ಕದೆ ಹಾಯಾಗಿ ಬೆಳೆದು ಯೌವನದ ಹೊರಬಿಸಿಲಿನಲ್ಲಿ ನಲಿದಾಡುತ್ತಿರುವಂತೆ ತೋರಿದನು. ಪಕ್ಕದಲ್ಲಿ ಪ್ರಿಯಳಿದ್ದುದರಿಂದ ಸ್ವಲ್ಪ ನಾಚಿಕೆಯಿಂದಲೋ ಏನೋ, ಅವನ ವರ್ತನೆಗಳು ನೈಜವಾಗಿರಲಿಲ್ಲ. ಅವರ ಜೊತೆಗೆ ನಾವು ಕುಳಿತಿದ್ದುದರಿಂದ ಅವರು ಏನೋ ಒಂದು ಬಿಕ್ಕಟ್ಟಿಗೆ ಸಿಕ್ಕಿಬಿದ್ದವರಂತಿದ್ದರು. ಆಕೆಯ ಮುಖದಲ್ಲಿಯೂ ಒಂದು ವಿಧವಾದ ಲಜ್ಜೆಯು ಆವರಿಸಿತ್ತು. ಸ್ವಲ್ಪ ವಿದ್ಯಾವಂತಳಂತೆ ಕಂಡಳು. ಲಕ್ಷಣವಾದ ಹುಡುಗಿ.

ಗುಮಾಸ್ತರು ನನ್ನನ್ನು ಆಶೀರ್ವಾದಮಾಡಿ ಅನಂತರ ಇವರಿಗೆ ತಮ್ಮ ವಾಕ್ಪ್ರಹಾರವನ್ನು ಪ್ರಾರಂಭಿಸಿದರು ತರುಣರು ಉತ್ತರ ಕೊಡಲೇಬೇಕಲ್ಲ!

'ತಾವೆಲ್ಲಿಯವರೆಗೆ?'

'ಮೈಸೂರಿಗೆ.'

'ಸರ್ಕಾರಿ ಉದ್ಯೋಗವೊ'

'ಹು.'

'ಯಾವ ಇಲಾಖೆ?'

'ವಿದ್ಯುಚ್ಛಕ್ತಿ ಇಲಾಖೆ'

'ಎಷ್ಟು ಸಂಬಳ?'

'ಎಪ್ಪತ್ತು.'

ತರುಣಿಯ ಕಡೆ ನೋಡಿ 'ತಮ್ಮ ಸಂಸಾರ ಅಂತ ಕಾಣುತ್ತೆ?'

ತರುಣನ ಮುಖವು ಒಡನೆ ಕೆಂಪೇರಿತು. ಸ್ವಲ್ಪ ನಿದಾನಿಸಿ ಬಿಗಿಯಾಗಿ ನುಡಿದನು,—'ಹು, ಸ್ವಾಮಿ.'

'ಓದಿದಾರೆ ಎಂದು ಕಾಣುತ್ತದೆ?'

'ಹು.'

'ಇಂಗ್ಲಿಷು ಬರುತ್ತದೆಯೋ?

'ಹು.'

'ಯಾವ ತರಗತಿಯಲ್ಲಿ ಓದುತ್ತಿದ್ದಾರೋ?'

'ನಾಲ್ಕನೆಯ ಫಾರಂ'

'ಮಕ್ಕಳುಗಿಕ್ಕಳು ಇಲ್ಲ ಎಂದು ತೋರುತ್ತದೆ?'

ಇದಕ್ಕೆ ಬೇಗನೆ ಉತ್ತರ ಬರಲಿಲ್ಲ. ಅನಂತರ ವಿಚಾರಿಸಿದ್ದರಲ್ಲಿ ಮೊದಲು ಒಂದು ಮಗು ಆಗಿದ್ದು ತೀರಿಹೋಗಿದ್ದಿತು. ಈಗ ಆಕೆ ಐದು ತಿಂಗಳು ಗರ್ಭಿಣಿ. ತವರುಮನೆಗೆ ಹೋಗುತ್ತಿದ್ದರು. ಆತನು ಗುಮಾಸ್ತರ ಪ್ರಶ್ನೆಗೆ ಉತ್ತರವನ್ನೇ ಕೊಡದೆ ನನ್ನೊಡನೆ ಇಂಗ್ಲಿಷಿನಲ್ಲಿ ಹಿಟ್ಲರನ ವಿಷಯ ಪ್ರಶ್ನಿಸತೊಡಗಿದನು.

ಗುಮಾಸ್ತರಿಗೆ ಸ್ವಲ್ಪ ಮುಖಭಂಗವಾದಂತಾಗಿ ಬಾಯಿಗೆ ಬೀಗ ಹಾಕಿದರು. ತರುಣನಿಗೆ ಇವರ ಮೇಲೆ ವಿಪರೀತ ಸಿಟ್ಟು ಬಂದಿತ್ತು. ಆ ಯುವತಿಗೂ ಸಿಟ್ಟು ಹತ್ತಿತ್ತು. ಸಿಟ್ಟಿಗಿಂತಲೂ ಹೆಚ್ಚಾಗಿ ವ್ಯಸನವು ಮೂಡಿತ್ತು. ಮುಖವು ಪೆಚ್ಚಾಗಿತ್ತು. ಇಷ್ಟು ವಯಸ್ಸಾಗಿ ಇವರಿಗೆ ತರುಣ–ತರುಣಿಯರ ನಾಚಿಕೆ–ನಾಣ್ಯ ತಿಳಿಯಬೇಡವೇ ? ಸ್ವಲ್ಪ ಹೊತ್ತಾದ ಮೇಲೆ ನಮಗೆ ಸಲಿಗೆಯಾಯಿತು. ಗುಮಾಸ್ತರ ಸಂಸ್ಕೃತಿಯ ವಿಷಯ ನಮ್ಮಷ್ಟಕ್ಕೆ ನಾವು ಮಾತನಾಡಿಕೊಂಡು ನಕ್ಕೆವು. ರೈಲಿನಲ್ಲಿ ಇಂಥ 'ಬೈರಿಗೆ ಭಯಾನಕ'ಗಳು ಆಗಿಂದಾಗ್ಗೆ ದೊರೆಯುತ್ತಾರೆ ಇವರ ನಾಲಗೆಯನ್ನು ನಿಲ್ಲಿಸುವುದು ಫಾಲಾಕ್ಷನಿಗೂ ಸಾಧ್ಯವಿಲ್ಲ.

—ಜಿ. ಅರ್. ರಂಗಸ್ವಾಮಿ

## ಅಭ್ಯಸನಗಳು

**ಪ್ರಶ್ನೆಗಳು:—**

೧) ಗುಮಾಸ್ತನು ಅಪರಿಚಿತರೊಡನೆ ಮಾತು ಆರಂಭಿಸುವ ರೀತಿ ಯಾವುದು ?

೨) ಗುಮಾಸ್ತನ ಪ್ರಶ್ನೆಗಳಿಂದ ಪ್ರವಾಸಿಯ ಯಾವ ವೃತ್ತಾಂತವು ತಿಳಿಯುವುದು ?

೩) ಮಾತನಾಡುವ ಮನಸ್ಸಿಲ್ಲದ ತರುಣನನ್ನು ನಮ್ಮ ಗುಮಾಸ್ತನು ಹೇಗೆ ಸಂಭಾಷಣೆಗೆ ಎಳೆಯುವನು?

೪) ಬಾಯಿಗೆ ಬೀಗ ಹಾಕಿಕೊಳ್ಳುವ ಪ್ರಸಂಗ ಗುಮಾಸ್ತನಿಗೇಕೆ ಬಂದಿತು ?

**ಭಾಷಾಭ್ಯಾಸ:—**

೧) ಕಾರಣವಿಲ್ಲದೆ ಹಂಟಿ ಹೊಡೆಯುವ ಸ್ವಭಾವವಿದ್ದವರ ಚಿತ್ರವು ಇಲ್ಲಿ ಮೂಡಿದೆ. ಅಪರಿಚಿತರು ಒಂದೆಡೆಗೆ ಸೇರಿದಾಗ ಗೊಡ್ಡು ಹರಟೆ ಆರಂಭವಾಗುವ ಸೂಕ್ಷ್ಮ ನಿರೀಕ್ಷಣೆ ಇಲ್ಲಿ ಇರುವುದು.

೨) ಪ್ರಶ್ನೆಗಳನ್ನು ಕೇಳುವ ಈ ರೀತಿಯ ಚಿತ್ರವು ಹೇಗೆ ಒಡಮೂಡಿದೆ ಎಂಬುದನ್ನು ನೋಡಿರಿ. ಪ್ರಶ್ನೆಗಳಿಗೆ 'ಹೂ' ಎಂಬ ಉತ್ತರ ಸಿಕ್ಕಕೂಡಲೆ ಗುಮಾಸ್ತನು ತನ್ನ ಪ್ರಶ್ನೆಯನ್ನು ಬದಲಿಸುವನು ಎಂಬುದನ್ನು ಅರಿಯಿರಿ.

೩) ತರುಣ ದಂಪತಿಗಳ ವರ್ಣನೆಯ ಶೈಲಿಯು ಬಹು ಮಾರ್ಮಿಕವಾಗಿದೆ. ಈ ವರ್ಣನೆಯ ನೆರವಿನಿಂದ ಅವರ ಚಿತ್ರವನ್ನು ತೆಗೆಯಿರಿ.

೪) 'ನಡತೆಯಲ್ಲಿ ವಿಶ್ವವಿದ್ಯಾನಿಲಯದ ಕೈವಾಡ ಕಾಣುತ್ತಿತ್ತು, ಆದರೂ ಮುಖದಲ್ಲಿ ದುರಹಂಕಾರ ಚಿಹ್ನೆಯಿರಲಿಲ್ಲ' ಇದನ್ನು ಸ್ಪಷ್ಟೀಕರಿಸಿರಿ.

೫) 'ಬೈರಿಗೆ' ಎಂಬ ಶಿರೋನಾಮದ ಔಚಿತ್ಯವನ್ನು ಹೇಳಿರಿ .ಬೇರೆ ಯಾವದಾದರೊಂದು ಶಿರೋನಾಮವನ್ನು ಸೂಚಿಸಿರಿ.

೬) ಇಲ್ಲಿಯ ವಿನೋದದ ರೀತಿಯನ್ನು ಅರಿಯಿರಿ.

**ಶಬ್ದ ವಿಚಾರ.—**

೧) ಬಾಯಿಗೆ ಬೀಗಹಾಕು, ನಾಲಗೆ ನಿಲ್ಲಿಸು— ಇದೇ ಅರ್ಥ ಕೊಡುವ ಇನ್ನೆರಡು ಪಡೆನುಡಿಗಳನ್ನು ಹೇಳಿರಿ.

೨) ಮುಖಭಂಗ, ಮುಖಹೀನ, ಮುಖಮುದ್ರೆ— ಇವುಗಳನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ಬರೆಯಿರಿ.

೩) ಗುಮಾಸ್ತರು ನನ್ನನ್ನು ಆಶೀರ್ವಾದ ಮಾಡಿ. ಅನಂತರ ಇವರಿಗೆ ತಮ್ಮ ವಾಕ್-ಪ್ರಹಾರವನ್ನು ಪ್ರಾರಂಭಿಸಿದರು. ಈ ವಾಕ್ಯದಲ್ಲಿ ಬಂದ ಆಶೀರ್ವಾದ, ವಾಕ್‌ಪ್ರಹಾರ ಈ ಶಬ್ದಗಳ ವಿಶೇಷಾರ್ಥವೇನು ?

೪) ಹರಟೆ—ಒಣ ಹರಟೆ, ಗೊಡ್ಡು ಹರಟೆ, ಸವಿಹರಟೆ— ಇವುಗಳಲ್ಲಿಯ ತಾರತಮ್ಯವನ್ನು ಹೇಳಿರಿ.

**ವಾಕ್-ಶಿಕ್ಷಣ:—**

ಈ ಸಂಭಾಷಣೆಯನ್ನು ಅಭಿನಯಿಸಿರಿ.

**ಚರ್ಚೆ:—**

ಗೆಳೆಯರನ್ನು ಸಂಪಾದಿಸುವುದಕ್ಕೆ ಅಧಿಕಪ್ರಸಂಗವು ಸಹಾಯಕವಿರುವುದು.

**ಬರೆಹ:—**

೧) ಹೆಣ್ಣುಮಕ್ಕಳ ಹರಟೆಯ ಪ್ರಸಂಗವನ್ನು ವರ್ಣಿಸಿರಿ.

೨) ಇದೇ ಪುಸ್ತಕದಲ್ಲಿ ಬಂದ 'ಅತ್ತೆ ಸೊಸೆ' ಎಂಬ ಪಾಠದಲ್ಲಿ ತಂಗೆಮ್ಮನ ತುದಿಮೊದಲಿಲ್ಲದ ಹರಟೆಯ ರೀತಿಯನ್ನು ಅರಿಯಿರಿ.

# ೧೩. ಚೋಮನ ದುಡಿ

[ ಒಂದು ಕಾಲಕ್ಕೆ ಜಾತಿ ಮನುಷ್ಯನ ವೃತ್ತಿಯನ್ನು ಸೂಚಿಸುತ್ತಿತ್ತು. ತಮತಮಗೆ ಸಾಧ್ಯವಿದ್ದ ಕೆಲಸಗಳನ್ನು ಎಲ್ಲರೂ ಎಲ್ಲರಿಗಾಗಿಯೂ ಮಾಡುತ್ತಿದ್ದರು. ಆದರೆ ಮುಂದೆ ಈ ಪಂಗಡಗಳು ಬೇರೆಯಾಗಿ ಜಾತಿಗಳಾದವು. ಮೇಲು ಕೀಳು ಎಂಬ ಭಾವನೆಗೆ ಅವಕಾಶವುಂಟಾಗಿ ಅನೇಕ ಅನ್ಯಾಯ ನಡೆದವು. ಹೊಲೆಯ ಕೀಳು ಜಾತಿಗೆ ಸೇರಿದವನೆಂಬ ಭಾವನೆ ಇಂದಿಗೂ ಅನೇಕರಲ್ಲಿದೆ. ಆತ ಆಳಾಗಿ ಕೀಳಾಗಿ ದುಡಿಯುತ್ತಲೇ ಇರಬೇಕು, ಎಂದು ಬಯಸುವವರನೇಕರಿದ್ದಾರೆ ಆತನೂ ಒಬ್ಬ ಮನುಷ್ಯ, ಯೋಗ್ಯತೆಗೆ ಸರಿಯಾಗಿ ಆತನಿಗೂ ಅವಕಾಶ ಸಿಕ್ಕಬೇಕು ಎಂಬ ವಿವೇಕವನ್ನು ಒಪ್ಪುವುದಿಲ್ಲ ಇಂಥ ಒಂದು ಅನ್ಯಾಯವನ್ನು ಇಲ್ಲಿ ಹೃದಯದ್ರಾವಕವಾಗಿ ಚಿತ್ರಿಸಿದ್ದಾರೆ. ಇಲ್ಲಿಯ ಚೋಮ ಒಂದು ವ್ಯಕ್ತಿಯಲ್ಲ. ಆತ ಪಟ್ಟೆ ಪಾಡು ಒಬ್ಬನವಲ್ಲ. ಆತ ಒಂದು ಸಮಾಜದ ಮತ್ತು ಧರ್ಮಾಂಧ ದೃಷ್ಟಿಯ ಪರಿಣಾಮವಾಗಿ ಆ ಸಮಾಜ ಅನುಭವಿಸಬೇಕಾದ ಸಂಕಷ್ಟಗಳ ಸಂಕೇತವಾಗಿ ನಿಲ್ಲುತ್ತಾನೆ. ವಿಖ್ಯಾತ ಕಾದಂಬರಿಕಾರರಾದ ಶಿವರಾಮ ಕಾರಂತರ ಕಾದಂಬರಿಯಿಂದ ಇಲ್ಲಿ ಸಂಗ್ರಹಿತವಾದ ಕತೆ 'ಚೋಮನ ದುಡಿ' ಎಂಬುದು.]

ಚೋಮನ ದುಡಿ ಬಾರಿಸುವದರಲ್ಲೊಂದು ವಿಶೇಷವೇನಿಲ್ಲ. ಅವನ ಬಾಳ್ವೆಯಲ್ಲಿ ವಿಶೇಷವಿದ್ದರಲ್ಲವೆ ಅವನ ದುಡಿಯಲ್ಲಿರುವುದು? ಕುಡಿಯುವುದು ದುಡಿಮೊಟ್ಟುವುದು, ಎಂದು ಅವನ ಧನಿಯರಾದ ಸಂಕಪ್ಪಯ್ಯನವರು ತಿಳಿದಿದ್ದರೂ, ಕುಡಿಯಲು ಸಿಕ್ಕದಿದ್ದಾಗ್ಯೂ ಅವನು ದುಡಿ ಬಾರಿಸುವ. ಅವನ ದುಡಿಗೆ ಅವನ ಮಗಳಾದ

ಬೆಳ್ಳಿಯು, ಲೇ, ಲೇ, ಎಂದು ಹಾಡಬೇಕು. ಮಕ್ಕಳು ಕುಣಿಯಬೇಕು. ರಾತ್ರಿಯು ಹೊತ್ತಾದರೆ ತೂಕಡಿಕೆ ಬರುತ್ತದೆ. ಎಚ್ಚರವಾಯಿತೆಂದರೆ ಅವರ ಹತ್ತಿರ ಆವೇಶ ದಿಂದ ಅದನ್ನು ಬಾರಿಸುವನು.

ಚೋಮ ಹೊಲೆಯರವನು. ಭೋಗನಹಳ್ಳಿಯ ಕಾಡಿನಲ್ಲಿಯ ಅವನ ಕೊಪ್ಪ ದಲ್ಲಿ ಇರುವವರು ಚೋಮ, ಅವನ ಐದು ಮಂದಿ ಮಕ್ಕಳು. ಹಿರಿಯ ಮಗನಿಗೆ ಅವನ ಧನಿಯರಾದ ಸಂಕಪ್ಪಯ್ಯನವರ ಪ್ರಾಯ. ಎಂದರೆ ೨೫–೨೬ ವರುಷ. ಅವನೇ ಚನಿಯ. ಅವನ ತಮ್ಮ ಗುರುವ. ಇವನಿಗೆ ತಮ್ಮನಿಲ್ಲ, ತಂಗಿ, ಬೆಳ್ಳಿ— ಚೋಮನ ಜೀವ. ಅವಳಿಗೆ ಕಿರಿದಾಗಿ ಕಾಳ ಹಾಗೂ ನೀಲರು.

ಚೋಮನ ದುಡಿಮೆ ಇಂಥದೇ ಎಂದು ನಿಯಮವಿಲ್ಲ. ಧನಿಯರು ಕರೆದಾಗ ಅಲ್ಲಿಯೇ ಇರಬೇಕು, ಮನೆಯವರೆಲ್ಲ ಶ್ರಮಿಸಿದಾಗ, ಒಂದು ಸೇರು ಅಕ್ಕಿ ದೊರೆ ಯುವುದು. ಅದರಲ್ಲಿ ಬೆಳ್ಳಿಯು ಉದ್ದನೆಯ ಗಂಜಿ ಮಾಡುವಳು. ಹೊತ್ತು ಮುಣುಗಿದ ಮೇಲೆ ಆ ಮನೆಯಲ್ಲಿ ದೀಪ ಉರಿಸಿದವರಿಲ್ಲ. ದೀಪ ಉರಿಸಲು ಅವರು ಮುತ್ತು ಸುರಿಯುತ್ತಾರೆಯೋ ?

ಈ ಸಂಪಾದನೆಯಲ್ಲಿ ಚೋಮನಿಗೆ ಹೆಂಡವಾಗಬೇಕು. ಹೆಂಡವನ್ನು ಬಿಟ್ಟ ದಿನವೇ ತನ್ನ ಪ್ರಾಣವಾಯು ಹಾರಿಹೋಗುವುದೆಂದು ಅವನ ಬಲವಾದ ನಂಬುಗೆ.

ದುಡಿ ಮತ್ತು ಹೆಂಡಗಳು ಅವನ ಎರಡು ಪ್ರಾಣವಾಯುಗಳಾಗಿದ್ದರೆ, ಪೂರೈಸದ ಇನ್ನೊಂದು ಆಸೆ ಅವನಿಗಿದೆ. ಅದು ತಾನು ಬೇಸಾಯಗಾರನಾಗಬೇ ಕೆಂಬುದು. ಆದರೆ ಅವನ ಊರಲ್ಲಿ ಹೊಲೆಯ ಬೇಸಾಯಗಾರರೆಂಬ ಜಾತಿಯೇ ಇಲ್ಲ. ಆದರೂ ನೇಗಿಲು ಹಿಡಿದೇನೆಂಬ ಆಸೆ ಅವನದು. ಅದಕ್ಕಾಗಿ ಮೂರು ವರ್ಷಗಳಿಂದ, ಅಡವಿಯಲ್ಲಿ ಸಿಕ್ಕಿದ್ದ ಎರಡು ಹಸುವಿನ ಕರುಗಳನ್ನು ಸಾಕುತ್ತ ಬಂದಿದ್ದಾನೆ.

ಇಂದು ಕುಳಿತಲ್ಲಿಯೇ ಚೋಮನಿಗೆ ಯೋಚನೆ ಹೊರಟಿದೆ. ಕರುಗಳು ಎತ್ತುಗಳಾದವು ಧನಿಗಳಲ್ಲಿ ಹೋಗಿ ಒಂದು ಮುಡಿ ಗದ್ದೆಯನ್ನಾದರೂ ಕೇಳಬೇ ಕೆಂಬ ಆಸೆ ಅವನದು ಆದರೆ ಬೆಳ್ಳಿಯು "ನೀನು ಧನಿಯರೊಂದಿಗೆ ಬಾಯಿಬಿಟ್ಟು ಮರ್ಯಾದೆಯನ್ನು ಕಳೆದುಕೊಳ್ಳಬೇಡ" ಎಂದಳು. ಹೊಲೆಯರು ನೇಗಿಲನ್ನು ಹಿಡಿದರೆ, ಪ್ರಳಯವೇ ಬಂದೀತೆಂದು ತಿಳಿಯುವರವರು. ಯಾವನೋ ಒಬ್ಬ ಹೊಲೆಯನು ಈ ಹಿಂದೆ ಸರಕಾರದ ನೆಲವನ್ನು ದರಖಾಸ್ತಿಗೆ ಪಡೆದು, ಏನೋ ನಾಲ್ಕು ಗಿಡ ಭತ್ತ ಬೆಳೆಯಿಸುತ್ತಾನೆಂದು ಕೇಳಿ, ಚೋಮನ ಕಿವಿ ನೆಟ್ಟಗಾಗಿ ಅವನ ನಾಲಿಗೆ ಮುಂದೆ ಬಿದ್ದರೆ ಅವನ ಬಾಳ್ವೆ ಒಳಿತಾಗುವುದುಂಟೇ ? ಆದುದರಿಂದ ಬೆಳ್ಳಿ ಬೇಡವೆಂದಳು. ಚೋಮನು ಇದೆಲ್ಲ ಕೇಳಿ ಸಿಟ್ಟಿನಿಂದ ಅತ್ತುಬಿಟ್ಟನು. "ಹೊಲತಿ ಯಿರುವಾಗಲೇ, ನೇಗಿಲು ಹಿಡಿಯಬೇಕೆಂದಿದ್ದೆ. ಸಾಯುವದರೊಳಗೆ ನಾನಾದರೂ ಈ ಭಾಗ್ಯ ಪಡೆದೇನು ಎಂದರೆ, ನನ್ನ ಆಸೆಗೆ ಕಲ್ಲು ಹಾಕುತ್ತೀ" ಎಂದನು.

ಆದರೆ ಮತ್ತೊಂದು ದಿನ ಧನಿಯರೇ, “ ಚೋಮ, ನಮ್ಮ ಮನೆಯ ಜೋಡಿ ಮುದಿಯಾಗುತ್ತ ಬಂತು. ನಿನ್ನ ಜತೆಯನ್ನು ಯಾಕೆ ಕಟ್ಟಬಾರದು ? ನೀನು ನಮಗೆ ಕ್ರಯಕ್ಕೆ ಕೊಟ್ಟರೂ ಚಿಂತಿಲ್ಲ—ಏನು ಸುಮ್ಮನೆ ಇದ್ದೀ ? ನಗದಿ ಕ್ರಯ ಬೇಕಾದರೆ ಕೊಡುವ ” ಎಂದರು.

“ ಕ್ರಯಕ್ಕೆ ಮಾರುವ ಮನಸ್ಸಿಲ್ಲ. ತಮ್ಮ ಕೆಲಸಕ್ಕೆ ಅಲ್ಲದ್ದೂ ಅಲ್ಲ. ಏನೋ ಒಂದು ಮನಸ್ಸಿನ ಭ್ರಮೆ ಇದೆ, ತಾವು ನಡೆಸಿಕೊಟ್ಟರೆ— ”

ಅದೇನೆಂದು ಸಂಕಪ್ಪಯ್ಯನವರಿಗೆ ತಿಳಿಯದು.

“ ಏನಿಲ್ಲ, ಧನಿಗಳಿಗೆ ಇಷ್ಟೆಲ್ಲ ಒಕ್ಕಲಿದ್ದಾರೆ. ಈ ಚೋಮನಿಗೂ ಒಂದು ಹಾಳು ಕೊಂಪೆ ಗೇಣಿಗೆ ಕೊಟ್ಟಿದ್ದರೆ ನಿಮ್ಮ ಹೆಸರು ಹೇಳಿ ಬದುಕುತ್ತಿದ್ದ. ”

ಚೋಮನ ಈ ಆಸೆ ಸಂಕಪ್ಪಯ್ಯನವರಿಗೆ ಅಚ್ಚರಿಯನ್ನುಂಟುಮಾಡಿತು. ಆದರೂ ಒಳಗೆ ಹೋಗಿ ತಾಯಿಯನ್ನು ಕೇಳಿ ಬಂದು, ಚೋಮ, ಇದುವರೆಗೆ ನಮ್ಮ ಹಿರಿಯರು ನಿಮ್ಮವರಿಗೆ ಗೇಣಿ ಕೊಟ್ಟದ್ದಿಲ್ಲ ’ ಎಂದರು ಒಳಗಿಂದ ಧನಿಯರ ತಾಯಿ, “ಅಬ್ಬಾ! ಹೊಲೆಯರಿಗೆ ಬಂದ ಸೊಕ್ಕೇ” ಎಂದು ಶಪಿಸುತ್ತಿದ್ದಳು.

ಅಷ್ಟರಲ್ಲಿ ಮಿಂಗೇಲ ದೊರೆಗಳ ಕಾಫೀ ತೋಟದ ಸೆರೇಗಾರನಾದ ಮನ್ವೇಲನು ಅಲ್ಲಿಗೆ ಬಂದು, “ ಸ್ವಾಮೀ, ನಿಮ್ಮ ಒಕ್ಕಲಿಗನಿಂದ ೨೦ ರೂ. ಬರಬೇಕಲ್ಲ” ಎಂದನು. ಹಿಂದೊಮ್ಮೆ ಹೆಂಡತಿಗೆ ಖಾಯಿಲೆಯಾದಾಗ ಚೋಮನು ಕಾಫೀ ತೋಟಕ್ಕೆ ದುಡಿಮೆಗೆ ಹೋದಾಗ, ಐದು ರೂಪಾಯಿಗಳ ಸಾಲ ಉಳಿದ ನೆನಪು. ಅದೀಗ ಹಲವು ವರ್ಷಗಳಲ್ಲಿ ಇಪ್ಪತ್ತಾಗಿತ್ತು.

ಏನಿದ್ದರೂ ಮನ್ವೇಲನ ಲೆಕ್ಕವನ್ನು ಜಗತ್ತು ನಂಬುತ್ತದಲ್ಲದೆ, ಚೋಮನದೇ? ಈ ಸಾಲ ತೀರಿಸಲು, ಎತ್ತುಗಳನ್ನು ಮಾರಬೇಕೆಂಬ ಮನೆಯಲ್ಲಿಯ ಯಾರ ಸಲಹೆಗೂ ಚೋಮನು ಒಪ್ಪಲಿಲ್ಲ. ಕೊನೆಗೆ ಚನಿಯ, ಗುರುವರನ್ನು ದುಡಿಮೆಗೆ ಕಳಿಸಬೇಕೆಂದಾಯಿತು.

ಹೋಗುವಾಗ ಚೋಮನು “ನನ್ನ ಜೀವಮಾನವೆಲ್ಲ ಭಿಕ್ಷೆ ಬೇಡಿ ಹೋಯಿತು. ಹೆಂಡದಂಗಡಿಯ ಹಾದಿ ಹಿಡಿದು ಸಾಲ ಹೆಚ್ಚಿಸಿಕೊಂಡು ಬರಬೇಡಿ. ನೀವಿನ್ನು ಮದುವೆಯಾಗಿ ಮನೆ ಬದುಕನ್ನು ಇರಿಸಿಕೊಳ್ಳುವ ಮಕ್ಕಳು ” ಎಂದು ಹೇಳುವಾಗಲೇ ದುಃಖ ತುಂಬಿಬಂದಿತು

ಮುಂದೆ ಚೋಮನು ಮಕ್ಕಳ ವಿರಹವನ್ನು ಮರೆತನಾದರೂ, ಮನೆಯಲ್ಲಿ ಆಲಸಿಯಾಗಿ ಉಳಿದ. ಅದರಿಂದ ದಿನದ ಸಂಪಾದನೆ ಕಡಿಮೆಯಾದರೂ ಅವನು ಎದೆಗಾರನೇ. ಆಗೆಲ್ಲ ಅವನ ಮುಂದೆ, ಮುನಿದು ನಿಂತ ನೇಗಿಲಿನ ಚಿತ್ರ ಕಾಣಿಸುವುದು. ಈವರೆಗೆ ಧನಿಯರು ಎಂದೊಡನೆ ಬಾಗಿ ಬಗ್ಗಿದ ಮನಸ್ಸು ಈಗ ನೆಟ್ಟಗೆ ನಿಲ್ಲಲು ಹೋರಾಡುತ್ತದೆ. “ ತನ್ನ ಆಸೆಯನ್ನು ಪೂರೈಸದ ಧನಿಯ ಹಂಗು ತನಗೇನು ? ” ಎಂದುಕೊಳ್ಳುತ್ತಾನೆ. ಹಾಗಾದರೆ ಧನಿಯ ಮನೆಯ ಕೂಲಿ ?

ಅಲ್ಲಿಂದ ಊಟಕ್ಕೇನು ಎಂದರೆ, ಕಾಡಿನಲ್ಲಿ ಕಟ್ಟಿಗೆಯಿದೆ, ಬೀಳಲನ್ನು ತಂದು ಚಾಪ ಯನ್ನೋ, ಬುಟ್ಟಿಯನ್ನೋ,' ಹೆಣೆಯುವೆ ಎಂದುಕೊಳ್ಳುತ್ತಾನೆ.

ಆದರೆ ಸಂಕಪ್ಪಯ್ಯನವರು ಖುದ್ದಾಗಿ ಒಮ್ಮೆ ಮನೆಗೆ ಬಂದು, ಕೆಲಸಕ್ಕೆ ಬರಲು ಹೇಳಿ ಹೋದಮೇಲೆ ಜೋಮನು ಉತ್ಸಾಹದಿಂದಲೇ ಅಣಿಯಾದನು ಅವರಲ್ಲೇ ಎರಡನೆಯ ಬಾರಿ ತನ್ನ ನೇಗಿಲ ಆಸೆಯನ್ನು ಹೇಳಿದನು.

ಅವನ ಮುಖ ಕಂಡು ಅವರಿಗೆ ಕನಿಕರವಾದರೂ ತಾಯಿಯ ವಿರುದ್ಧ ಇಂದಲ್ಲ ವಾದರೆ ನಾಳೆಗೆ ಏನಾದರೂ ಊರಲ್ಲಿ ಹೆಚ್ಚುಕಡಿಮೆಯಾದರೆ ಅನಾವಶ್ಯಕವಾಗಿ ಈ ನಿಮಿತ್ತ ಬರುವ ಕೆಟ್ಟ ಮಾತಿಗಾಗಿಯೂ, ಸಂಕಪ್ಪಯ್ಯನವರು ಅವನಿಗೆ ಎಲ್ಲವನ್ನು ತಿಳಿಸಿ ಹೇಳಿದರು ಜೋಮನ ಕಣ್ಣಿಂದ ನೀರು ಹರಿದುದನ್ನು ಕಂಡು 'ಜೋಮು, ನಮ್ಮ ಹಾಸಿಗೆಗೆ ಸರಿಯಾಗಿ ಕಾಲು ನೀಡಬೇಕು' ಎಂದು ಸಮಾಧಾನಪಡಿಸ ಲೆಳಸಿದರು.

ಆದರೆ ಜೋಮನ ಅಂತರದಲ್ಲಿ ಇಡಿಯ ಹಳ್ಳಿಯ ರೈತರ ಮೇಲೆಯೇ ಮತ್ಸರ ಮೂಡಿದೆ—ತನ್ನನ್ನು ಜೀವಿತದ ಕೂಲಿಯಾಗಿರಿಸಿ, ತಾವೆಲ್ಲ ಬೇಸಾಯಗಾರ ರಾದುದಕ್ಕೆ.

ಮಳೆಗಾಲ ಪ್ರಾರಂಭವಾಯಿತು. ಜೋಮ ಮೊದಲಬಾರಿ ತನ್ನ ಹತ್ತಿನ ಜೋಡಿಯನ್ನು ನೊಗಕ್ಕೆ ಕಟ್ಟಿದ್ದಾನೆ. ಮಳೆ ಬೀಳುತ್ತಿದ್ದರೂ ಲಕ್ಷಿಸದೆ, ತನ್ನ ಧನಿಯ ಹೊಲವನ್ನು ಉಳುತ್ತಿದ್ದಾನೆ. ಅವನು ಎತ್ತುಗಳನ್ನು ನಡೆಯಿಸಿಕೊಂಡು ಹೋಗುವ ಬದಲು, ಎತ್ತುಗಳೇ ಅವನನ್ನು ಸಾಗಿಸಿಕೊಂಡು ಹೋಗುತ್ತಿವೆ. ಇವ ನಿಗೋ, ಎತ್ತುಗಳು ಧನಿಯರ ಹೊಲದಲ್ಲಿ ಇಡುವ ಪ್ರತಿಯೊಂದು ಹೆಜ್ಜೆಯೂ ತನ್ನೆದೆಯ ಮೇಲೆ ಇಡುವಂತೆ ಕಾಣುತ್ತಿದೆ.

ಒಂದು ಬಾರಿ ಸಂಜೆಯಾದರೂ ಉಳುವ ಕೆಲಸ ನಡೆದೇ ಇತ್ತು. ಎತ್ತುಗಳು ಉಸಿರುಗರೆಯುತ್ತ, ಬಾಯಿಂದ ಜೊಲ್ಲನ್ನು ಸುರಿಸಿ ನಿಂತುಬಿಟ್ಟವು ಮುಂದೆ ಇವನ ಕೈಯಿಂದ ನೇಗಿಲನ್ನು ಎಳೆದುಕೊಂಡು ತಾವೇ ಗುಡಿಸಲಿಗೆ ಹೋದವು. ಬೆಳ್ಳಿಗೆ ಆಶ್ಚರ್ಯವಾಯಿತು. ಎತ್ತುಗಳನ್ನು ಕಳಚಿ, ಅವಕ್ಕೆ ಹುಲ್ಲು ಹಾಕಿ, ಕತ್ತ ಲಲ್ಲಿ ತಂದೆಯನ್ನು ಕೂಗಿದಳು. ಉತ್ತರವಿಲ್ಲ. ಮುಂದುವರಿಯಬೇಕೆಂದಾಗ ಅಲ್ಲಿಯೇ ಕುಳಿತಿದ್ದ ಅವನನ್ನು ಎಡವಿದಳು.

ಈಚೆಗೆ ಅವನ ಮನಸ್ಸು ಚೆನ್ನಾಗಿಲ್ಲವೆಂದು ಅವಳಿಗೆ ಗೊತ್ತು. ಆದುದರಿಂದ ಕೈಹಿಡಿದು ಎಬ್ಬಿಸಿ ಅವನನ್ನು ಒಳಗೆ ಕರೆದೊಯ್ದಳು. ಚಿಕ್ಕ ಮಗುವು ತಾಯಿ ಯನ್ನು ಹಿಂಬಾಲಿಸುವಂತೆ, ಜೋಮ ಅವಳನ್ನು ಹಿಂಬಾಲಿಸಿದ. ಅವನನ್ನು ಮಾತನಾಡಿಸಲು ಎಲ್ಲವೂ ನಿರರ್ಥಕವಾದುದನ್ನು ಕಂಡು, ದುಡಿಯನ್ನು ಅವನ ಮುಂದಿಟ್ಟು "ಲೇ, ಲೇ, ಲೇ, ಲೇ ಚನ್ನ" ಎಂದು ಸೊಲ್ಲು ತೆಗೆದಳು. ಮಳೆ ಗಾಲವು ತೊಡಗಿದಂದಿನಿಂದ ದುಡಿಯನ್ನು ಮುಟ್ಟಿ ನೋಡಿರಲಿಲ್ಲ. ಈಗ ಸ್ಫೂರ್ತಿ

ಬಂದಂತಾಗಿ ಅದನ್ನು ಬಾಚಿ ಹಿಡಿದು ಬಾರಿಸತೊಡಗಿದನು. ಹಾಡೂ ನಡೆಯಿತು.

ಎಷ್ಟು ಹೊತ್ತಾಗಿದ್ದಿತೋ ಅವರ ಈ ಲೀಲೆ ಮುಗಿದು ಬೆಳ್ಳಿ ಈಗ ಅವನನ್ನು ಮಾತನಾಡಿಸಿದಳು. "ಏನು, ಇವತ್ತು ಮೈ ಚೆನ್ನಾಗಿಲ್ಲವೇ?" ಎಂದು, ಮೈಯೆಂದು ಕೇಳಿದಳು; ಮನಸ್ಸೆನ್ನಲಿಲ್ಲ. ಚೋಮನು ಮೆಲ್ಲನೆ ಏನು "ಚೆನ್ನಾಗಿದ್ದರೇನು? ಅದೃಷ್ಟ ಚೆನ್ನಾಗಿಲ್ಲದ ಮೇಲೆ" ಎಂದನು. ಮಾತು ಮುಂದರಿದು, ಮನದಾನೆಯನ್ನು ಮಗಳೆದುರು ಬಿಚ್ಚಿದನು. ಬೆಳ್ಳಿಯು ಜಾಣೆ, ತಮ್ಮ ನೆಲೆಯನ್ನರಿತವಳು. ಕರಿನಾಯಿ ಬಿಳಿಯಾಗಲಾರದೆಂದು ಇತರರಂತೆ ತಿಳಿದವಳು. ಈಗಿದ್ದುದೇ ಚೆನ್ನಾಗಿದೆ, ಎಂಬುದರ ಬಗ್ಗೆ ವಿವರವಾಗಿ ತಂದೆಗೆ ತಿಳಿಸಿ ಹೇಳಿದಳು. ಚೋಮನಿಂದ ಯಾವ ಉತ್ತರವೂ ಇಲ್ಲ.

(೨)

ಇವರಿರುವ ಹಳ್ಳಿಯ ನೆರೆಯಲ್ಲಿ ವರುಷಾವಧಿಯ ಜಾತ್ರೆ ಬಂದಿತು. ಈ ಸಲದ ಜಾತ್ರೆಗೆ ಚೋಮನ ಬಳಿ ಅವನ ಹಿರಿಯ ಮಕ್ಕಳಿಲ್ಲ ಬೆಳ್ಳಿಗೂ ಅಣ್ಣಂದಿರನ್ನು ಕಾಣುವ ಬಯಕೆ ಬಹಳವಾಗಿತ್ತು. ಅದರಲ್ಲೂ ಗುರುವನ ಮೇಲೆ ಅವಳ ಮಮತೆ ತುಸು ಹೆಚ್ಚು.

ಜಾತ್ರೆಯ ಹಿಂದಿನ ರಾತ್ರಿ "ಅಪ್ಪಾ, ಅಪ್ಪಾ" ಎಂದು ಕೂಗು ಕೇಳಲು ಚೋಮನು ಎಚ್ಚತ್ತು "ಯಾರು?" ಎಂದನು "ನಾನು ಚನಿಯ" ಎಂದು ಉತ್ತರ ಬರಲು, ಹಾಸಿಗೆಯಿಂದ ಜಿಗಿದು ಕದವನ್ನು ತೆರೆದನು. ಬೆಳ್ಳಿಯನ್ನು ಎಬ್ಬಿಸಿದನು. ಆಕೆ, ಅಣ್ಣಂದಿರು ಬಂದರೆಂದು, ಸ್ವಲ್ಪ ಬೆಳಕು ಮಾಡಲು ಹವಣಿಸಿದಳು. ಎಲ್ಲಿಯೂ ತುಸು ಕಿಡಿ ಇರಲಿಲ್ಲ. ಕತ್ತಲೆಯಲ್ಲೇ ಚೋಮನು 'ಮಕ್ಕಳೇ ಚೆನ್ನಾಗಿದ್ದೀರಾ' ಎಂದು ಬಾಚಿಕೊಳ್ಳಹೋದನು.

ಇಷ್ಟರತನಕ ಗುರುವನ ದನಿಯೇ ಹೊರಡದ್ದನ್ನು ಕಂಡು "ಏನು? ಗುರುವಣ್ಣ ಭಾರಿ ಸಿಟ್ಟೇ?" ಎಂದಳು

ಚನಿಯನ ದನಿ ನಡುಗಿತು. "ಗುರುವ ಬರಲಿಲ್ಲ" ಎಂದ.

"ಹಾಗಾದರೆ ಅವನೆಲ್ಲಿ? ಸುಮ್ಮನೆ ನಾವು ಮಾತ್ರ ಇಲ್ಲಿ 'ಮಕ್ಕಳು ಮಕ್ಕಳು' ಎಂದು ಬಡಿದುಕೊಳ್ಳುವುದು. ಇವುಗಳಿಗೆ ಮೀಸೆ ಕುಡಿ ಮೊಳೆಯಿತೆಂದರೆ, ದೇಶ ಕಾಣುವುದಿಲ್ಲ."

"ಅಣ್ಣ ಹಾಗಿನವನಲ್ಲ. ಏನೋ, ತೋಟದವರು ಬಿಡಲಿಲ್ಲವೋ ಏನೋ" ಎಂದಳು ಬೆಳ್ಳಿ.

ಚನಿಯ ಅಧೈರ್ಯದಲ್ಲಿಯೇ ತಾನು ಗುರುವನ ಬಗ್ಗೆ ತಿಳಿದುದನ್ನು ಸ್ವಲ್ಪದರಲ್ಲಿ ಹೇಳಿದ. ಅದುದು ಇಷ್ಟು. ಕಾಫೀ ತೋಟದಲ್ಲಿ ಇವರಿರುವ ಜಾಗದ ಪಕ್ಕದಲ್ಲೇ ಮಾರಿಯೆಂಬ ಹುಡುಗಿಯ ತಂದೆತಾಯಿಗಳು ಇದ್ದರು. ಗುರುವನಿಗೆ ಅವಳ

ಮೇಲೆ ಮೋಹ. ತೋಟದ ಕೆಲಸದಿಂದ ಒಂದು ತಿಂಗಳು ರಜೆ ದೊರೆತಾಗ, ಎಲ್ಲರೂ ಊರಿಗೆ ಹೊರಟರು. ಗುರುವನು ಆ ಹುಡುಗಿಯ ಮನೆಯವರೊಟ್ಟಿಗೆ ಹೊರಟು ಚನಿಯನಿಂದ ತಪ್ಪಿಸಿಕೊಂಡ.

ಈ ಕತೆ ಕೇಳಿ ಬೆಳ್ಳಿಗೆ ಕೋಪ ಬಂದಿತು. "ಇದು ಸುಳ್ಳು. ಗುರುವಣ್ಣ ಎಂದೂ ಹಾಗೆ ಮಾಡಲಾರ. ಇವನು ಏನೋ ಅವನ ಹತ್ತಿರ ಜಗಳ ಕಟ್ಟಿಕೊಂಡಿರ ಬೇಕು" ಎಂದಳು. ಚೋಮನಿಗೂ ಹಾಗಿರಲು ಸಾಕು ಎಂದು ಕಂಡಿತು. ಚನಿಯನ ಮೇಲೆ ಗರ್ಜಿಸಿದ. ಆದರೆ ಚನಿಯನೇನು ಮಾಡಿಯಾನು? "ಕೊಕ್ಕಡದ ಮಾರಿಯಮ್ಮನನ್ನು ಹಿಂಬಾಲಿಸಿ ಹೋಗಿದ್ದಾನೆ"—ಎಂದೇ ಹೇಳಿದನು. ಅವನಿಗೆ ಅಳು ಬಂದಿತು.

ಚೋಮನ ಕೋಪ ಅದರಿಂದ ತುಸು ತಗ್ಗಿತು. ಚನಿಯನೂ ಅವರ ಪ್ರಣಯಸಮಾಚಾರವನ್ನು ವಿವರವಾಗಿ ತಿಳಿಸಿದನು. ಅದರಲ್ಲಿ ಚೋಮನ ಪಾಲಿಗೆ ಇನ್ನೊಂದು ಬರಸಿಡಿಲು ಕಾದಿತ್ತು. ಅವಳು "ಮಾರಿಯಮ್ಮ" ಅಲ್ಲ. ಕಿರಸ್ತಾನರ ಮೇರಿ ಎಂದು ತಿಳಿದಾಗಲಂತೂ ಅವನ ಎದೆಯೇ ಒಡೆಯಿತು. "ಹಿರಿಯರು ಹಿಡಿದು ಬಂದ ನೀತಿಕಟ್ಟುಗಳನ್ನು ಬಿಟ್ಟು ಒಂದು ಹುಡುಗಿಗಾಗಿ ಅವನು ಜಾತಿ ಬಿಡುವನಾದರೆ ಅವನ ಮೋರೆ ನೋಡುವುದಿಲ್ಲ." ಎಂದು ಶಪಥ ಮಾಡಿದನು. ಬೆಳ್ಳಿಯು ಅತ್ತಳು. ಕೊನೆಗೆ ಅವನೆಲ್ಲಿದ್ದರೂ ಕರೆದುಕೊಂಡು ಬರುವುದೆಂದು ಸೂಚಿಸಿದಾಗ, ಚೋಮನಿಗೆ ಏನು ತಿಳಿಯಿತೋ, ದೊಣ್ಣೆಯನ್ನೆತ್ತಿಕೊಂಡು ಕೊಕ್ಕಡದ ಹಾದಿಯನ್ನು ಹಿಡಿದೇ ಬಿಟ್ಟನು

ಅಂದು ಜಾತ್ರೆಯಿತ್ತಲ್ಲ? ಅದರ ಅಭಿಲಾಷೆ ನಿನ್ನೆಯವರೆಗೂ ಬೆಳ್ಳಿಗಿತ್ತು. ಗುರುವನ ಈ ಸುದ್ದಿ ತಿಳಿದ ಮೇಲೆ ಎಲ್ಲಿಯ ಜಾತ್ರೆ! ಇತ್ತ ಚನಿಯ ಬೇರೆ, 'ಚಳಿ ಚಳಿ' ಎಂದು ಮಲಗಿದ. ಕಾಫೀ ತೋಟದಿಂದ ಬಂದ ಚಳಿಜ್ವರದ ಬಳುವಳಿಯದು; ಚನಿಯನನ್ನು ಬಿಡಲೇ ಇಲ್ಲ. ನಾಲದ್ದಕ್ಕೆ ನಾಲ್ಕನೆಯ ದಿನ ಕಫವೂ ಸೇರಿ ಉಸಿರಾಡಿಸುವುದಕ್ಕೂ ಕಷ್ಟವಾಯಿತು. ಬೆಳ್ಳಿ ಕಂಗೆಟ್ಟು ಹೋದಳು ಕಾಸಿ ಪಾಸಿ ನೋಡಿದಳು. ಇದ್ದ ಬಿಡಿಗಾಸುಗಳನ್ನು ಹಿಡಿದುಕೊಂಡು, ಹೊಲೆಯರಲ್ಲೇ ಬ್ರಾಹ್ಮಣನ ಹಾಗಿದ್ದ ಅಜಲ ಚಿನ್ನನನ್ನು ಪ್ರಶ್ನೆ ಕೇಳಿ ಬಂದಳು.

ಇತ್ತ ಗುರುವ–ಮೇರಿಯರ ಮದುವೆ ಮುಗಿದುಹೋದುದರ ಸುದ್ದಿಯನ್ನು ಎತ್ತಿಕೊಂಡು ಭಾರವಾದ ಮನದಿಂದ ಚೋಮ ಮನೆಗೆ ಬರುತ್ತಾನೆ, ಅಲ್ಲಿ ಚನಿಯನ ಶವ. ಪಂಜುರ್ಲಿ ಭೂತವೇ ತಮ್ಮ ಮೇಲೆ ಮುನಿದಿದೆ ಎಂದು ಅವನ ಗ್ರಹಿಕೆಯಾಯಿತು. ಭ್ರಾಂತನಾಗಿ ಏನು ಮಾಡಬೇಕೆಂಬುದೇ ತಿಳಿಯದಾಯಿತು. ದೃಷ್ಟಿಯು ಎದುರುಗೋಡೆಯ ಮೇಲೆ ತೂಗಿದ್ದ ದುಡಿಯ ಕಡೆಗೆ ಹೋಯಿತು. ಕೂಡಲೆ ಅದನ್ನು ತಂದು ಬಡಿಯತೊಡಗಿದನ .

ಶವದ ಮುಂದೆ ಸಂಗೀತವೇ! ಬೆಳ್ಳಿಯು ಆವೇಶದಿಂದ ತಂದೆಯತ್ತ ಹಾರಿ, "ನಿನ್ನ ದುಡಿ ಹಾಳಾಗಲಿ! ಅದಕ್ಕೆ ಹೊತ್ತು ಗೊತ್ತು ಇಲ್ಲವೇ?" ಎಂದು

ದುಡಿಯನ್ನು ಕಿತ್ತಿಸೆದಳು. ಆಗ ತನ್ನ ತಂದೆಯು ಮನುಷ್ಯಾವಸ್ಥೆಯಲ್ಲಿಯೇ ಇಲ್ಲ ವೆಂದು ಬೆಳ್ಳಿಗೆಲ್ಲಿ ತಿಳಿದಿತ್ತು ?

ಚನಿಯನಿಗೆ ಅಂದು ಸಂಜೆಯೊಳಗಾಗಿ ಮಣ್ಣು ಮುಟ್ಟಿಸುವ ವಿಧಿ ಮುಗಿದ ಮೇಲೆ, ಆ ರಾತ್ರಿ ಮಾತ್ರ ಚೋಮನಿಂದ ದುಡಿಯು ಬಾರಿಸುವಿಕೆಯನ್ನು ಬೆಳ್ಳಿಯು ತಡೆಯಲಿಲ್ಲ ನಡುರಾತ್ರಿಗೆ ಸಂಕಪ್ಪಯ್ಯನವರಿಗೆ ಆ ಘೋರ ಗರ್ಜನೆಯಿಂದ ಎಚ್ಚರವಾಯಿತು. ಮಗ ಸತ್ತ ದಿನ ! ಇವನ ದುಡಿಯೇ ? ಪ್ರಾಯಶಃ ಮೂಗಿನ ಸೊಳ್ಳೆಯವರೆಗೆ ಕುಡಿದಿರಬೇಕು ಎಂದುಕೊಂಡರು. ಆ ರಾತ್ರಿ ಚೋಮನು ಅದಕ್ಕೂ ಮಿಗಿಲಾಗಿ ಕುಡಿದಿದ್ದನು ಇನ್ನಾವುದು ಅವನ ಸಂಕಟವನ್ನು ಮುಳುಗಿಸ ಬಲ್ಲದು ?

ಅಲ್ಲಿಂದ ಕೆಲವೇ ದಿನಗಳಲ್ಲಿ ಎರಡನೆಯ ಮಳೆಗಾಲ ಬರುತ್ತಲೂ, ಒಂದು ಸಂಜೆ ಸಂಕಪ್ಪಯ್ಯನವರು, ಚೋಮನಿಗೆ ' ನಾಳೆ ಹೂಡಲು ಬಂದುಬಿಡು ' ಎಂದು ಅಪ್ಪಣೆಯಿತ್ತರು. ಚೋಮನು ನಸುನಕ್ಕು, ಮನೆಗೆ ಬಂದು ಮಾವಿನ ಮರದ ನೆರಳಿನಲ್ಲಿ ಕುಳಿತಿದ್ದ. ಸಿಟ್ಟಿನ ತೆರೆಗಳು ಮಾಯವಾಗಿ, ಚೋಮನ ಮನಸ್ಸಿನಲ್ಲಿ ವಿಚಾರದ ತರಂಗಗಳು ಬರುತ್ತಿವೆ. ವಿಚಾರವು ಒಂದೇ ! " ಇನ್ನೂ ತನ್ನ ಎತ್ತು ಗಳನ್ನು ಒಯ್ದು ಧನಿಯರ ನೆಲವನ್ನು ಉಳಬೇಕೇ?" ಎಂಬುದು. ತನಗಿಲ್ಲದ ತುತ್ತು ಪರರಿಗೇಕೆ ಎಂದು ಪ್ರಶ್ನೆ ಸುತ್ತುತ್ತಿತ್ತು. ತನ್ನಷ್ಟಕ್ಕೆ ಮಾತನಾಡುತ್ತ ಒಳಗೆ ಹೋದನು. ಅಲ್ಲಿ ಎತ್ತುಗಳೊಡನೆ ಬಲುಹೊತ್ತಿನ ತನಕ ಸಂಭಾಷಣೆಯಾಯಿತು. ಎಷ್ಟೊತ್ತಿಗೆ ಅದು ಮುಗಿಯಿತೋ ? ಬೆಳಗಾಗುವಾಗ ಮಾವಿನ ಮರದ ಕೆಳಗೇ ಚೋಮ ಗೊರಕೆ ಹೊಡೆಯುತ್ತಿದ್ದಾನೆ. ಬೆಳ್ಳಿಯು ಎತ್ತುಗಳನ್ನು ಮೇವಿಗೆ ಅಟ್ಟಲೆಂದು ಅವುಗಳ ಕೊರಳಿನ ಹಗ್ಗ ತಪ್ಪಿಸಿ ನೋಡುತ್ತಾಳೆ.— ಎರಡೂ ಎತ್ತು ಗಳು ಮುಂಗಾಲಿನಿಂದ ಕುಂಟುತ್ತವೆ. ಒಂದರ ಕಾಲಿನಿಂದ ತುಸು ರಕ್ತವೂ ಇಳಿ ಯುತ್ತಿತ್ತು. ಕೂಡಲೆ ತಂದೆಯನ್ನು ಎಬ್ಬಿಸಲು ಬಂದಾಗ, ಚೋಮನ ಮಗ್ಗು ಲಲ್ಲೇ ಅವನ ದೊಣ್ಣೆ. ಬೆಳ್ಳಿಗೆ ಅರ್ಥವಾಯಿತು.

ಅಂದಿನಿಂದ ಧನಿಯರಲ್ಲಿ ಚೋಮನ ಇತರ ಕೆಲಸವು ಬಿಟ್ಟಿಯಾಗುತ್ತಬಂದಿತು. ಒಂದು ದಿನ ಅವನಿಗೆ ತೋಟಕ್ಕೆ ಹೋಗಿ ತೆಂಗಿನಕಾಯಿಯನ್ನು ಕಿತ್ತು ತಾ ಎಂದು ಕೆಲಸ ಹೇಳಿದರೆ, ಮಧ್ಯಾಹ್ನದ ತನಕ ವೇಳೆ ಮಾಡಿ, ಬರಿಯ ಹತ್ತೆಂಟು ಕಾಯಿ ಗಳನ್ನು ತಂದನು. ಅವರಿಗೆ ಕೋಪ ಬಂದಿತು. " ಏನು ! ಬೆಳಗ್ಗೂ ಸೇಂದಿ ಅಂಗಡಿಗೆ ಹೋಗತೊಡಗಿದ್ದೀಯಾ ? " ಎಂದು ಗದರಿಸಿದರು. " ಹೊಂ, ನೀವು ಕೈತುಂಬ ಕೂಲಿ ಕೊಡುವಾಗ ಬೆಳಿಗ್ಗೇನು, ಸಂಜೆಯೇನು?" ಎಂದುಬಿಟ್ಟ ಚೋಮ. ಸಂಕಪ್ಪಯ್ಯನವರಿಗೆ ಚೋಮನು ಮುದಿಯಾಳು, ನಂಬಿಗೆಯವನು ಎಂಬ ಅಭಿಮಾನ ವೆಲ್ಲ ಹೋಯಿತು " ಸೀನಿನ್ನು ನಮ್ಮ ಮನೆಯ ಅಂಗಣಕ್ಕೆ ಕಾಲಿಡಕೂಡದು " ಎಂದರು.

ಈ ಸುದ್ದಿ ತಿಳಿದು ಬೆಳ್ಳಿಗೆ ನಿಂತ ನೆಲವೇ ಹಿಂದೋಡಿದಂತಾಯಿತು. ತಂದೆಯನ್ನು ಮನಸ್ವೀ ಬೈದಳು. ಧನಿಯರ ಕಾಲಿಗೆ ಉದ್ದಂಡ ಕೆಡೆದು, ಅವರಿಂದ ಮತ್ತೆ ದಿನದ ಪಡಿಯನ್ನು ತರುವುದಕ್ಕೆ ಅನುಮತಿ ಪಡೆದುಕೊಂಡಳು

ಇದೊಂದು ಮುಗಿಯುವಾಗಲೇ, ಮನ್ವೇಲನ ಸವಾರಿ ಆ ಮನೆಗೆ ಮತ್ತೊಮ್ಮೆ ದಯಮಾಡಿಸಿತು. ತನ್ನ ಮನೆಯನ್ನು ಹಾಳುಮಾಡಿದವನೇ ಇವನೆಂದು ಚೋಮ ಸುಮ್ಮನೆ ಎದ್ದು ಒಳಗೆ ಹೋದನು. ಬೆಳ್ಳಿಯೂ ಸಿಡುಕಿನಲ್ಲೇ ಅವನಿಗೆ ಉತ್ತರ ಕೊಟ್ಟರೂ, ಇಪ್ಪತ್ತರ ಸಾಲ ಇಪ್ಪತ್ತೈದಕ್ಕೇರಿದುದಕ್ಕೆ ಏನಾದರೂ ಆಗಬೇಕಲ್ಲ? ಮನ್ವೇಲನು "ಮುಂದಿನ ಶುಕ್ರವಾರ ಬರುತ್ತೇನೆ. ಯಾರಾದರೂ ಮೂವರು ಸಿದ್ಧರಾಗಿರಿ. ನೀನೇ ಏಕೆ ಬರಬಾರದು? ಇಲ್ಲಿ ಬಿದ್ದು ಏನು ಮಾಡುತ್ತೀ?" ಎಂದು ಹೇಳಿಹೋದನು.

ಬೆಳ್ಳಿಯ ಮನಸ್ಸಿಗೆ ಕೊನೆಯ ಮಾತು ನಿಜವೆಂದು ತೋರಿತು. ಇರಲಿ, ಎಂದುಕೊಂಡು, 'ಆ ಎರಡು ಎತ್ತುಗಳನ್ನು ಕಾಲುನೋವು ಗುಣವಾದೊಡನೆ ಧನಿಯರಿಗೆ ಕ್ರಯಕ್ಕೆ ಕೊಟ್ಟು ಬಿಡುವ' ಎಂದು ಇನ್ನೊಮ್ಮೆ ತಂದೆಗೆ ಹೇಳಿ ನೋಡಿದಳು. "ನೀನು ಎತ್ತು ಮಾರುವ ಬದಲು, ನನ್ನನ್ನೇ ಯಾರಿಗಾದರೂ ಮಾರಿಬಿಡು. ಇಲ್ಲವಾದರೆ ಹೊಳೆಗೆ ನೂಕು. ಆಮೇಲೆ ಎತ್ತನ್ನು ಮಾರಿ, ನಾಲ್ಕು ಕಾಸು ಹೆಚ್ಚಿಗೆ ಸಿಕ್ಕಿದರೆ ನೀನೊಂದು ಒಳ್ಳೇ ಸೀರೆಯನ್ನು ತೊಟ್ಟು ಕುಣಿ" ಎಂದು ಚೋಮ ಉತ್ತರಿಸಿದನು.

ಬೆಳ್ಳಿ ಮೌನವಾದಳು. ಆದರೆ ಶುಕ್ರವಾರ ಮನ್ವೇಲನು ಸ್ವತಃ ಬಂದು ನಿಂತಾಗಲೇ ಬೆಳ್ಳಿಯು ಹೊರಡುವವಳೆಂದಾಯಿತು. ಚೋಮನಿಗೆ ಅವಳ ಮೇಲೆ ಇನ್ನಿಲ್ಲದಷ್ಟು ಹೃದಯ ಉಕ್ಕಿ ಬಂತು. ಕೊನೆಗೆ ನೀಲನನ್ನೂ ಅವಳಿಗೆ ಜತೆಮಾಡಿ ಮಗಳನ್ನು ಪಂಜುರ್ಲಿಯ ತನಕ ಕಳಿಸಹೋಗಿ ಅಲ್ಲಷ್ಟು ಅತ್ತು ತಿರುಗಿ ಬಂದನು.

ಕಾಫೀ ತೋಟದಲ್ಲಿ ಬೆಳ್ಳಿಗೆ ತಿಂಗಳಿಗೆ ಆರು ರೂಪಾಯಿ ಸಂಬಳ. ನೀಲನಿಗೆ ಮೂರು ತಾವಿಬ್ಬರೂ ದುಡಿದು ನಾಲ್ಕಾರು ತಿಂಗಳಲ್ಲಿ ತೋಟದವರ ಸಾಲ ಮುಗಿಸಿ, ತಂದೆಯ ಬಳಿ ಓಡುವ ಆಲೋಚನೆ ಅವಳದು. ಆದರೆ ಬಂದ ಎರಡು ವಾರಗಳಲ್ಲೇ ನೀಲನು ಚಳಿಜ್ವರದಿಂದ ನೆಲಕಟ್ಟಿದ. ಅವನ ಆರೈಕೆಯಲ್ಲಿ ಉಳಿದ ಳಾಗಿ ಬೆಳ್ಳಿಯ ಸಂಪಾದನೆಯೂ ಕಡಿಮೆಯಾಯಿತು. ಮನ್ವೇಲನು ಅವಳಿಗೆ "ಇನ್ನು ಮೇಲೆ ನಿನಗೆ ಬೇರೆ ಕೆಲಸ ಕೊಡಿಸುವೆ. ನೀನಿನ್ನು ನಮ್ಮ ಮನೆಕೆಲಸಕ್ಕೆ ಬಾ" ಎಂದು ಕರೆದನು.

ಮರುದಿನದಿಂದ ಬೆಳ್ಳಿ ಮನ್ವೇಲನ ಮನೆಯ ಕಸ, ಮುಸುರೆ, ಬಟ್ಟೆಗಳನ್ನು ನೋಡತೊಡಗಿದಳು ಊಟಕ್ಕೆ ಅಲ್ಲಿಯದೇ ಅನ್ನ ದೊರಕುತ್ತಿತ್ತು. ತಮ್ಮನ ಆರೈಕೆಗೆ ವೇಳೆಯೂ ಸಿಕ್ಕುತ್ತಿತ್ತು. ಮನ್ವೇಲನು ಅವಳ ಹರಕುಚಿಂದಿಯನ್ನು ಕಂಡು ಒಂದು ಸೀರೆಯನ್ನು ಕೊಡಿಸಿದನು ನೀಲನಿಗೆ ಒಂದು ಹಳೆಯ ಕಂಬಳಿಯನ್ನು ಕೊಟ್ಟನು. ಏಕೋ ಅವನು ಬೆಳ್ಳಿಯ ಜೀವನದಲ್ಲಿ ವಿಶೇಷ ಆಸಕ್ತಿ ವಹಿಸಿದಂತೆ

ಕಂಡಿತು. ಅವಳಿಗೂ ಕ್ರಮೇಣ ಅದರ ಅರ್ಥವಾಯಿತು. ಮೊದಲನೆಯ ಬಾರಿಗೆ ತಾರುಣ್ಯದ ದುಡುಕನ್ನು ಅವಳಾದರೂ ಅನುಭವಿಸತೊಡಗಿದಳು. ಅವನ ಸಹಾಯದಿಂದ ತಂದೆಯ ಸಾಲವು ತೀರುವುದಾದರೆ ಏನಾದರೇನು ಎಂದು ಉದಾಸೀನ ಭಾವವನ್ನು ತಾಳಿದಳು. ಮನ್ವೇಲನು ಆಗಾಗ ಕೊಡುತ್ತಿದ್ದ ಆಣೆ, ಕಾಸುಗಳನ್ನು ಕೂಡಿಟ್ಟುಕೊಂಡಿದ್ದಳು.

ಒಂದು ದಿನ ನೀಲನು ಬೇರೊಬ್ಬ ಹುಡುಗನೊಡನೆ ಜಗಳ ಕಾಯ್ದುಕೊಂಡು ಬಂದು ಅದರ ವರದಿಯನ್ನು ಕೊಡುತ್ತ, ಆ ಹುಡುಗನು ಇವನನ್ನು ಒಯ್ಯುವಾಗ 'ಸೇರೆಗಾರರ ಭಾವನಂಟ' ಎಂದನಾಗಿ ಹೇಳಿದನು. ಅದರಿಂದ ಬೆಳ್ಳಿಗೆ ಬಲು ದುಃಖವಾಯಿತು. ತೋಟದಲ್ಲಿ ತನ್ನ ಸುದ್ದಿಯು ಹಬ್ಬಿದೆಯೆಂದು ಬೆಳ್ಳಿಗೆ ತಿಳಿದಿರಲಿಲ್ಲ

ಇಷ್ಟರಲ್ಲಿ ಮಿಂಗೇಲ ದೊರೆಗಳ ಕಣ್ಣಿಗೂ ಒಮ್ಮೆ ಆಕೆ ಬಿದ್ದು, ಲೆಕ್ಕ ನೋಡುವುದರ ಸಲುವಾಗಿ, ಅವರ ಬಂಗಲೆಯ ಕಡೆಗೆ ಕರೆ ಬಂದಿತು. ಬೆಳ್ಳಿ ಬೆದರಿದಳು – ನಾಲ್ಕು ದಿನ ಹೋದರೆ, ನೀಲನಿಗೆ " ದೊರೆಗಳ ಭಾವನೆಂಟ " ಎಂಬ ಬಿರುದೂ ಬರಲಿಕ್ಕೆ ಸಾಕು ಎಂದು. ಆದರೆ ಮನ್ವೇಲನು ಸ್ವತಃ ಅವಳನ್ನು ದೊರೆಗಳಲ್ಲಿಗೆ ಬಿಟ್ಟುಬಂದರೆ ಏನು ಮಾಡಿಯಾಳು ?

ಮರುದಿನ ಬೆಳ್ಳಿಯು ಹಿಂದಿನ ರಾತ್ರಿ ದೊರೆಗಳು ಕೊಟ್ಟ ಐದು ರೂಪಾಯಿಗಳನ್ನೂ, ಮನ್ವೇಲನಿಂದ ಕೂಡಿಸಿದ್ದ ಬಿಡಿ ಕಾಸುಗಳಲ್ಲಿ ಹೆಚ್ಚಿನ ಹಣವನ್ನೂ ಮನ್ವೇಲನ ಮುಂದಿಟ್ಟು, ಅವನೆಷ್ಟು ಹೇಳಿದರೂ ಕೇಳದೆ ಊರಿಗೆ ಹೊರಟುಬಿಟ್ಟಳು. ಒಂದು ವಾರದೊಳಗಾಗಿ ಅವನ ಹೆಂಡತಿ ಬರುವವಳಿದ್ದುದರಿಂದ, ಮನ್ವೇಲನೂ ಹೆಚ್ಚು ಒತ್ತಾಯಿಸಲಿಲ್ಲ.

ಗಂಡುಮಕ್ಕಳಿಂದಾಗದೆ, ಸಾಲವನ್ನು ಬೆಳ್ಳಿ ತೀರಿಸಿ ಬಂದಳೆಂದು ಚೋಮನಿಗೆ ಅತಿಯಾದ ಸಂತೋಷ. ಬೆಳ್ಳಿಗೂ ಅವನ ಮುಖವನ್ನು ನೋಡುವುದಕ್ಕೂ ಭಯವಾದಂತಿತ್ತು. ಈ ಸಲದ ಜಾತ್ರೆಯಲ್ಲಿ ಅವನ ಸಡಗರಕ್ಕೆ ಮಿತಿಯೇ ಇರಲಿಲ್ಲ. ಬೇಗ ಬೆಳ್ಳಿಗೊಂದು ಹುಡುಗನನ್ನು ನೋಡುವ ಆಲೋಚನೆ ಹುಟ್ಟಿದೆ, ಅವನಿಗೆ. ಜಾತ್ರೆಯಲ್ಲಿ ಯಾವನೋ ದೃಢಕಾಯದ ತರುಣನನ್ನು ಕಂಡು, ಸರಿ ಇವನೇ ಬೆಳ್ಳಿಗೆ ವರನೆಂದು ನಿರ್ಧರಿಸಿಬಿಟ್ಟನು. ಮುಂದೆ ಅವನಿಗೆ ಮದುವೆಯಾಗಿದೆಯೆಂದು ತಿಳಿದು ಬಂತು. ಆ ಹುಡುಗಿ ಸತ್ತಿದ್ದರೂ, ಆ ದಿನದ ಮಟ್ಟಿಗೆ ಚೋಮನಿಗೆ ಪಶ್ಚಾತ್ತಾಪದ ಬದಲು ಹರುಷವೇ ಆಗುತ್ತಿತ್ತು.

ಜಾತ್ರೆ ಮುಗಿಯಿತೆಂದೊಡನೆ, ಮಳೆಗಾಲ ಬರುವುದು ತಾನೇ. ಚೋಮನ ಮುಖದಲ್ಲಿ ನೆರಿಗೆಗಳು ಕಾಣಿಸಿಕೊಂಡಿವೆ. " ಈ ಸಲವಾದರೂ ನನಗೆ ನೇಗಿಲ ಯೋಗವಿದೆಯೇ ? ಈಗ ಬಾರದ್ದು ಎಂದು ಬಂದೀತು " ಎಂದು ಧನಿಯರನ್ನು ಇನ್ನೊಮ್ಮೆ ಕೇಳುವುದು, ಅವರೊಪ್ಪದಿದ್ದರೆ, ಧನಿಯರ ನೆಲದ ಋಣ ಮುಗಿಯಿ

ತೆಂದು ತಿಳಿದು ಸರಕಾರದವರ ಜಾಗದಲ್ಲಿ ನಿಲ್ಲುವುದು ಎಂದು ನಿರ್ಧರಿಸಿಬಿಟ್ಟು ಧನಿಯರಿಗೆ ತನ್ನ ಆಶೆಯನ್ನು ಮತ್ತೆ ಮುಂದಿಟ್ಟನು.

"ಚೋವಾ, ನಿನಗೆ ಕೊಡಬಾರದೆಂದಲ್ಲ. ಊರವರು ಮಾಡದ ಕೆಲಸ ನನ್ನಿಂದಾಗಬೇಕಾದರೆ, ನಮ್ಮಮ್ಮ ಸಾಯಬೇಕು." ಎಂದು ಸಂಕಪ್ಪಯ್ಯನವರು ವಿರಸಗೊಂಡು ಹೇಳಿದರು.

ಸರಿ, ಅವರ ಮುಂದೆ ತಾನು ಪ್ರಾಣ ಬಿಟ್ಟರೂ, ತನ್ನ ಬೇಡಿಕೆಯು ಪೂರ್ಣ ವಾಗುವಂತಿಲ್ಲ. ಅದೇ ಸಮಯ ಅವನಿಗೆ ಗುರುವನ ಯೋಚನೆ ಬಂದಿತು. ಅವನೀಗ ಗದ್ದೆ ಬೇಸಾಯ ಮಾಡಿಕೊಂಡಿರುವನೆಂದು ಕೇಳಿದ್ದ. ಅವನ ಬಗ್ಗೆ ಕೋಪ ಅಸೂಯೆ ಗಳೆಲ್ಲ ಹೊರಟು ಹೋಗಿ, "ಅವನಂತೆ ನಾನೂ ಆಗಬಾರದೇನು" ಎಂದು ಎಣಿಸಿದ. ತನ್ನ ದೇವರನ್ನು ನಂಬಿ ತನ್ನ ಆಸೆ ಕೈಗೂಡದಾಗ ಪಾದ್ರಿಯ ದೇವರನ್ನು ನಂಬಿದ ರೇನು ಹಾನಿ? ಕೂಡಲೇ ಅವನಲ್ಲಿ ಆ ವಿಚಾರ ಹೆಮ್ಮರದಂತೆ ಬೆಳೆದು ನಿಂತಿತು. ಮಗಳೆದುರಿಗೆ ಹಾಗೆಂದು ಹೇಳಿಯೂ ಬಿಟ್ಟನು. ಗುರುವಣ್ಣ ಹತ್ತಿರದವನಾಗುವ ನೆಂದು ಅವಳೂ ಆದೀತು ಎಂದಳು. ಅದರಲ್ಲೇ ಹಾಳು ಮನ್ವೇಲನ ಹಂಬಲ ವಾಯಿತು. ತಾನು ಮನ್ವೇಲನ ಮಡದಿಯಾಗುವೆನೆಂದೂ ಚಿತ್ರಿಸಿಕೊಂಡಳು. ಗುರುವನು ಮೇರಿಯ ಪತಿಯಾಗಲಿಲ್ಲವೆ? ಯಾವುದಕ್ಕೂ ಗುರುವಣ್ಣನನ್ನು ಮುಂದಿಟ್ಟುಕೊಳ್ಳಬೇಕು, ಎಂಬ ಬೆಳ್ಳಿಯ ಸೂಚನೆಯನ್ನು ಕಾರ್ಯಗತ ಮಾಡುವು ದಕ್ಕೆ ಸರಿಯಾಗಿ, ಮನ್ವೇಲನು ಕಾಣಿಸಿಕೊಂಡನು. ಮತ್ತು ಗುರುವ ಇವರೆಲ್ಲರನ್ನು ಕಾಣುವ ಆಸೆಯನ್ನು ವ್ಯಕ್ತಪಡಿಸಿದ್ದಾನೆಂದೂ ಹೇಳಿದ.

ಅದನ್ನು ಕೇಳಿದ ಚೋಮ, ತನ್ನ ದೊಣ್ಣೆಯನ್ನು ಬಗಲಲ್ಲಿರಿಸಿಕೊಂಡು ಹೊರಟೇಬಿಟ್ಟನು. ಅವನ ಬೆನ್ನು ಹತ್ತಿ ಅವನ ಬಾಡು ನಾಯಿಯೂ ಹೊರಟಿತು. ಆ ಹಾದಿಯಲ್ಲಿ ಪಂಜುರ್ಲಿ ಭೂತದ ಗುಡಿಯಿದೆ. ಅಲ್ಲಿ ಬರುತ್ತಲೆ ಬಾಡು ಯಥಾಪ್ರಕಾರ ನಿಂತಿತು. ಚೋಮನೂ ಅಭ್ಯಾಸಬಲದಿಂದ ಮೊಣಕಾಲನ್ನೂರಿದನು. ಮರುಕ್ಷಣ ಅವನ ಎದೆ ಜುಮ್ಮೆಂದಿತು. ಇನ್ನೂ ಪಂಜುರ್ಲಿಗೆ ಡೊಗ್ಗಾಲು ಊರು ವುದೇ? ಎಂದುಕೊಂಡಾಗ ಭೂತವೇ ಮುಂದೆ ನಿಂತು, "ಮೀಸೆ ಹಣ್ಣಾಗುವ ತನಕ ನನ್ನನ್ನು ನಂಬಿ, ಈಗ ಸಾಯುವ ಮೂರುದಿನ ಮುಂಚೆ, ಪಾದ್ರಿಯ ಮತಕ್ಕೆ ಓಡು ವಿಯಾ!" ಎಂದಿತು. ಅಲ್ಲಿಂದ ಚೋಮನ ಧೈರ್ಯ ಎಷ್ಟೂ ನಿಲ್ಲಲಿಲ್ಲವಾಗಿ ಹಿಂತಿರುಗಿಬಿಟ್ಟನು

ಬರುವಾಗ ಗುಡಿಸಲು ಬಾಗಿಲು ತೆರೆದೇ ಇದ್ದುದರಿಂದ ನೇರವಾಗಿ ಒಳಗೇ ಬಂದನು. ಕಣ್ಣೆದುರಿಗೆ ಮನ್ವೇಲನೂ, ಬೆಳ್ಳಿಯೂ ಒಂದೇ ಚಾಪೆಯ ಮೇಲೆ ಕುಳಿತು ಮಾತನಾಡುತ್ತಿದ್ದರು. ಚೋಮನ ಮೈ ಕಂಪಿಸಿತು. ಕುಳಿತಿದ್ದವರು ತಟ್ಟನೆ ಎದ್ದರು. ಚೋಮನ ಡೊಣ್ಣೆಯು ಮನ್ವೇಲನ ಕಾಲಿಗೆ ಬಲವಾದ ಏಟು ಕೊಟ್ಟಿತು—ಆದರೂ ಪ್ರಾಣಭಯದಿಂದ ಅವನು ಹೊರಕ್ಕೋಡಿದನು. ಚೋಮನ

ಕೈಗೆ ಬೆಳ್ಳಿಯು ಸಿಕ್ಕಳು. ಅವಳ ಕತ್ತನ್ನು ಅಮುಕಿ ಹಿಡಿದು, ಮರುಳನಂತೆ ಅವಳನ್ನು ಚುಂಬಿಸಿದನು. ಅವಳ ಪಂಚಪ್ರಾಣಗಳು ಕ್ಷೀಣಿಸುತ್ತ ಬಂದುವೆಂದು ಅವಳನ್ನು ಹೊರಗೆ ತಳ್ಳಿ ಕದವಿಕ್ಕಿಕೊಂಡನು.

ಬೆಳ್ಳಿಯು ಮಾವಿನ ಮರದಡಿ ಹಾಗೆ ಬಿದ್ದಿದ್ದಳು. ಮಧ್ಯಾಹ್ನ ಕಾಳನು ಮನೆಗೆ ಬಂದ. ಚೋಮ ದೊಣ್ಣೆಯನ್ನೆತ್ತಿ 'ಹೋಗು, ನಿನ್ನ ಅಕ್ಕನಿರುವಲ್ಲಿಗೆ ನನಗೆ ಮಕ್ಕಳೇ ಇಲ್ಲ' ಎಂದು ಗದರಿಸಿದನು ಸಂಜೆ ತಾನು ಹೊರಗೆ ಹೋಗುವಾಗ, ಹೊರಗಿದ್ದ ಬೆಳ್ಳಿಯನ್ನು ಕಂಡು, 'ಇದು ನನ್ನ ಮನೆ, ಯಾರೂ ಕಾಲಿರಿಸಕೂಡದು' ಎಂದಪ್ಪಣೆಯಿತ್ತು, ಕೊಟ್ಟಿಗೆಗೆ ಹೋಗಿ ಎತ್ತುಗಳನ್ನೂ ನೊಗವನ್ನೂ ಒಯ್ದನು. ಧನಿಯರ ಹೊಲವನ್ನು ಚೆನ್ನಾಗಿ ಉತ್ತು ಬಂದು, ಅವುಗಳ ನೊಗ ಕಳಚಿ ತೋಡಿಗೆ ಒಯ್ದು ಮೀಯಿಸಿ, ಮತ್ತೆ ಹೊರಕ್ಕೆ ಹೊಡೆದುಕೊಂಡು ಹೋದನು.

ಅದನ್ನು ಕಂಡ ಬೆಳ್ಳಿಗೆ ಎಲ್ಲಿಗೆಂದು ಕೇಳುವ ಸಾಹಸವಾಗಲಿಲ್ಲ. ಕತ್ತೆತ್ತಿ ನೋಡಲೂ ಇಲ್ಲ. ಹಾಗೆಯೇ ಉಪವಾಸ ಬಿದ್ದು, ಅವನಲ್ಲಿ ಕ್ಷಮೆ ಕೇಳುವೆನೆಂದಳು ಕತ್ತಲಾದರೂ ಒಳಗೆ ಹೋಗದೇ ಅಲ್ಲೇ ಉರುಳಾಡುತ್ತಿದ್ದಳಲ್ಲದೆ, ನಿದ್ರೆ ಹತ್ತಲೊಲ್ಲದು.

ಎತ್ತುಗಳನ್ನು ಕಾಡಿನಲ್ಲಿ ಬಿಟ್ಟು ಬಂದು, ನಡುರಾತ್ರಿಗೆ ಚೋಮನೊಬ್ಬನೇ ಬಂದನು. ಒಳಕ್ಕೆ ತುಸು ಹೊತ್ತು ಕುಳಿತಿದ್ದು, ಹೊರಬಂದು, ನೇಗಿಲ ನೊಗವನ್ನು ನೆಲಕ್ಕೆ ಕುಟ್ಟಿ ಮುರಿದು ಅಂಗಣದಲ್ಲಿ ರಾಶಿಹಾಕಿ, ಪಂಜುರ್ಲಿ ಗುಡಿಯಿಂದ ಬೆಳಕನ್ನು ತಂದು ನೇಗಿಲಿನ ಯಜ್ಞವನ್ನು ಮಾಡಿದನು. ಅದನ್ನು ನೋಡಿದಳು. ದಳದಳನೆ ಕಣ್ಣೀರು ಸುರಿಯಿತು. ಆದರೆ ಚೋಮನು ಯಾಗದ ಅಧ್ವರಿಯಂತೆ ಕುಳಿತಿದ್ದಾನೆ.

ಅಲ್ಲಿಂದ ಒಳಗೆ ಬಂದು, ಕದವನ್ನು ಮುಂದೆ ಮಾಡಿಕೊಂಡು, ಒಮ್ಮೆ ದುಡಿಯನ್ನು ಹಿಡಿದು ಬಾರಿಸತೊಡಗಿದನು. ಅದರಂತೆ ದುಡಿಯನ್ನು ಅವನು ಜೀವಮಾನದಲ್ಲಿ ಬಾರಿಸಿರಲಿಲ್ಲ. ಆದರೆ ನಿಜಕ್ಕೂ ಅದು ಪ್ರಳಯತಾಂಡವದ ಡಮರುನಿನಾದ !

ಆದರೆ ದುಡಿಯ ಢಮುಢಮ್ಮವು ಒಮ್ಮೆಗೇ ನಿಂತುದನ್ನು ಕಂಡು, ಏನೋ ಭೀತಿಯಾಗಿ ಬೆಳ್ಳಿಯು ಎದ್ದು ಬಂದಳು. ಅಡ್ಡವಾಗಿ ಎತ್ತುಗಳು ಬಂದು ನಿಂತವು. ಅವನ್ನು ತಳ್ಳಿಕೊಂಡು ಬೆಳ್ಳಿಯು ಒಳಕ್ಕೆ ಬಂದಳು ! ಅರೆಗತ್ತಲಲ್ಲಿ ಕಂಡಿತು— ಚೋಮನ ಸಮಾಧಿ !

ಹಿಡಿದ ದುಡಿ, ಎತ್ತಿದ ಕೈ, ತುಂಬಿದ ಆವೇಶ. ಎಲ್ಲವೂ ಇದ್ದಕ್ಕಿದ್ದಂತೆಯೇ ಇದೆ. ಚೋಮನು ಮಾತ್ರ ಇಲ್ಲ.

ಕಾರಂತರ ಕಾದಂಬರಿಯಿಂದ ಸಂಗ್ರಹಿತ ಕಥೆ

**ಎಸ್. ಕೆ. ಹಾವನೂರ**

## ಅಭ್ಯಾಸಗಳು

**ಪ್ರಶ್ನೆಗಳು:—**

೧. ಚೋಮನಿಗಿದ್ದ ಹಿರಿಯಾಸೆ ಯಾವುದು ?

೨. ಸಂಕಪ್ಪಯ್ಯ ಧನಿಗಳು ಚೋಮನಿಗೆ ಭೂಮಿಯನ್ನು ಏಕೆ ಕೊಡಲಿಲ್ಲ ?

೩. ಚೋಮನ ಮಕ್ಕಳು ಕಾಫೀ ತೋಟದಲ್ಲಿ ದುಡಿಯಲು ಹೋದ ಕಾರಣವೇನು ?

೪. ಕ್ರಿಸ್ತಧರ್ಮವನ್ನು ಸ್ವೀಕರಿಸಲು ಚೋಮನ ಮನಸ್ಸು ಹಿಂಜರಿಯಿತೇಕೆ ?

೫. ಚೋಮನು ನೇಗಿಲಯಜ್ಞವನ್ನೇಕೆ ಮಾಡಿದನು ?

**ಭಾಷಾಭ್ಯಾಸ.—**

೧. ಚೋಮನ ಉಳುವ ಆಶೆಗೆ ಆಘಾತವಾದಾಗ ಅವನ ಮನದ ಸ್ಥಿತಿಯನ್ನು ಬಣ್ಣಿಸುವ ವಾಕ್ಯಗಳನ್ನು ಎತ್ತಿ ಹೇಳಿರಿ.

೨. ಕೆಳಗಿನ ವಾಕ್ಯಗಳನ್ನು ಸ್ಪಷ್ಟೀಕರಿಸಿರಿ.

(೧) ಹೊಲೆಯರು ನೇಗಿಲವನ್ನು ಹಿಡಿದರೆ ಪ್ರಳಯವೇ ಬಂದಿತೆಂದು ತಿಳಿಯುವವರು ಅವರು.

(೨) ಏನಿದ್ದರೂ ಮನ್ವೇಲನ ಶಿಕ್ಷವನ್ನು ಜಗತ್ತು ನಂಬುತ್ತದಲ್ಲದೆ, ಚೋಮನದೇ ?

**ಶಬ್ದವಿಚಾರ :—**

೧. ಊದು, ಬಾರಿಸು, ನುಡಿಸು; ಎತ್ತು, ಹೋರಿ, ಗೂಳಿ, ಇವುಗಳಲ್ಲಿಯ ಅರ್ಥಭೇದವನ್ನು ಹೇಳಿರಿ.

೨. ಬಾಯಿಬಿಟ್ಟು ಮಾತನಾಡು, ಕಲ್ಲುಹಾಕು, ಕಾಲುಕೀಳು, ಕಾಲುಕೆದರು—ಇವುಗಳನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ಬರೆಯಿರಿ.

೩. ಕೈಹಿಡಿ, ಕಟ್ಟೆಡವಿ, ನೆಲೆಯರಿ, ನಿಟ್ಟುಸಿರು—ಈ ಸಮಸ್ತಪದಗಳನ್ನು ವಿಗ್ರಹಿಸಿ ಸಮಾಸದ ಹೆಸರು ಬರೆಯಿರಿ.

**ವಾಕ್-ಶಿಕ್ಷಣ:—**

ಗುರುವನು ಕ್ರಿಸ್ತಧರ್ಮವನ್ನು ಸ್ವೀಕರಿಸಿದುದನ್ನು ಕೇಳಿದಾಗ, ಚೋಮ ಮತ್ತು ಬೆಳ್ಳಿ ಇವರ ನಡುವೆ ಆಗಿರಬಹುದಾದ ಸಂಭಾಷಣೆಯನ್ನು ಬರೆದು ಅಭಿನಯಿಸಿರಿ.

**ಚರ್ಚೆ:—**

ಬೆಳ್ಳಿಯು ಕರಿನಾಯಿ, ಬಿಳಿನಾಯಿ ಆಗಲಾರದೆಂದು ತಿಳಿದುಕೊಂಡುದು ಯುಕ್ತ.

**ಬರೆಹ:—**

ಚೋಮನ ಸ್ವಾಭಿಮಾನವನ್ನು ಚಿತ್ರಿಸಿರಿ

# ೧೪. ಅರಬರ ಜ್ಞಾನಲಾಲಸೆ

[ ಜಗತ್ತಿನಲ್ಲಿ ಹಿಂದುದೇಶದ ಕೀರ್ತಿಯನ್ನು ಪ್ರಸಾರಮಾಡಲು ಕಾರಣರಾದ ಅರಬರ ಜ್ಞಾನಲಾಲಸೆ ಕೌತುಕಾಸ್ಪದವಾಗಿದೆ. ]

ಜಗತ್ತಿನ ಇತಿಹಾಸದಲ್ಲಿ ಎರಡು ಜನಾಂಗಗಳ ಕರ್ತೃತ್ವವು ಪ್ರಾಮುಖ್ಯದಿಂದ ತೋರಿಬರುತ್ತದೆ; ಮೊದಲನೆಯದು ಹಿಂದು ಜನಾಂಗ ಎರಡನೆಯದು ಸೆಮಿಟಿಕ್ ಜನಾಂಗ ಇವೇ ಎರಡು ಜನಾಂಗಗಳು ಜಗತ್ತಿನ ಇನ್ನಿತರ ಜನಾಂಗಗಳ ಮೇಲೆ ತಮ್ಮ ಪ್ರಭಾವವನ್ನು ಬೀರಿ ಕಾಲಾಂತರದಿಂದ ಅವುಗಳಿಗೂ ಹಿರಿಮೆಯನ್ನು ತಂದು ಕೊಟ್ಟಿವೆ. ಆರ್ಯಜನಾಂಗವು ಯುರೋಪ ಹಾಗು ಏಶಿಯಾ ಖಂಡಗಳಲ್ಲಿ ಹಬ್ಬಿಕೊಂಡಿದ್ದರೂ ಹಿಂದೀ ಜನಾಂಗದ ಐತಿಹಾಸಿಕ ಬೆಳವಣಿಗೆಯು ಭಾರತದಲ್ಲಿಯೇ ಆಗಿದೆ. ಆರ್ಯರು ಬರುವ ಮುನ್ನ ಇಲ್ಲಿ ನೆಲಸಿದ್ದ ಹರಪ್ಪಾ, ಮೊಹೆಂಜೊ ದಾರೊ ಮೊದಲಾದ ಕಡೆಗೆ ಅಗೆತದಲ್ಲಿ ದೊರೆತ ಪ್ರಾಚೀನ ಅವಶೇಷಗಳಿಂದ ಈ ಸಂಗತಿ ನಿಶ್ಚಿತವಾಗಿ ತಿಳಿದುಬಂದಿದೆ ಈ ಆರ್ಯಪೂರ್ವ ಜನಾಂಗದೊಡನೆ ಪ್ರಾರಂಭದ ಸಂಘರ್ಷಣೆಯು ಕಡಿಮೆಯಾದ ಬಳಿಕ ಇವೆರಡೂ ಜನಾಂಗಗಳ ಸಮ್ಮಿಶ್ರಣದಿಂದ ತಲೆಯೆತ್ತಿದ ಹಿಂದೀ ಸಂಸ್ಕೃತಿಯು, ಭಾರತಕ್ಕೆ ಜಗತ್ತಿನಲ್ಲಿಯೇ ಮೇಲ್ಮೆಯನ್ನು ತಂದುಕೊಟ್ಟಿತು. ಅದೇ ಪ್ರಕಾರ ಒಂದು ಕಾಲಕ್ಕೆ ಸೆಮಿಟಿಕ್ ವಂಶದ ಜನರು ಜಗತ್ತಿನಲ್ಲಿಯ ಎಲ್ಲ ದೇಶಗಳಲ್ಲಿ ವಾಸಿಸಿ ತಮ್ಮ ಅಸಾಮಾನ್ಯವಾದ ಕರ್ತೃತ್ವಶಕ್ತಿಯನ್ನು ತೋರಿದ್ದರೂ ಆ ಜನಾಂಗದ ಐತಿಹಾಸಿಕ ಬೆಳವಣಿಗೆಯು ಪಾಲಿಸ್ಟಾಯಿನ್ ಹಾಗು ಅರಬಸ್ತಾನ ಈ ದೇಶಗಳಲ್ಲಿ ಮಾತ್ರ ಕಂಡುಬರುತ್ತದೆ. ಜಾಗತಿಕ ಸ್ವರೂಪದ ಧರ್ಮಗಳ ಸಂಸ್ಥಾಪಕರಲ್ಲಿ ಹಿಂದು ಜನಾಂಗದ ಗೌತಮ ಬುದ್ಧರೂ ಸೆಮಿಟಿಕ್ ಜನಾಂಗದ ಏಸು ಕ್ರಿಸ್ತ ಹಾಗು ಹಜರತ್ ಮೊಹಮ್ಮದ ಇವರೂ ಪ್ರಮುಖರೆಂದು ಹೇಳಬಹುದು.

ಪಾಲಿಸ್ಟಾಯಿನ್ ಮೂಲನಿವಾಸಿಗಳು ಯಹೂದಿಯರು ಈ ಜನಾಂಗವು ಚಿಕ್ಕದಾದರೂ ಇವರು ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಅಸಾಮಾನ್ಯವಾದ ಬುದ್ಧಿ ವಂತಿಕೆಯನ್ನು ತೋರಿಸಿದ್ದಾರೆ. ಆಲ್ಬರ್ಟ ಆಯಿನ್‌ಸ್ಟಾಯಿನ್, ಚಿತ್ರಪಟದ 'ಮೂಕನಾಯಕ'ನೆಂದು ಹೆಸರಾದ ಚಾರ್ಲಿ ಚಾಪ್ಲಿನ್ ಮತ್ತು ವಿಖ್ಯಾತ ಕಥೆ-ಕಾದಂಬರಿ-ನಾಟಕಕಾರರೆಂದು ಕೀರ್ತಿಪಡೆದ ಸ್ಟಿಫನ್ ಝವಿಗ್ ಈ ಮುಂತಾದವರ ಹೆಸರುಗಳನ್ನು ಕೇಳದೆ ಇದ್ದವರು ತೀರ ವಿರಳ. ಆದರೂ ಯಹೂದಿಗಳು, ಜ್ಞಾನಾರ್ಥವಾಗಿ ಪರದೇಶಗಳೊಡನೆ ಸಂಬಂಧವನ್ನು ಸ್ಥಾಪಿಸಿದ ಹಾಗೆ ಐತಿಹಾಸಿಕ ಆಧಾರಗಳು ದೊರೆತಿಲ್ಲ.

ಅರಬಸ್ತಾನದ ಇತಿಹಾಸವು ಇದಕ್ಕಿಂತ ಬೇರೆಯಾಗಿದೆ. ಮೂಲ ಅರಬಸ್ತಾನವು(ಅರ್ವಾಚೀನ ಕಾಲದಲ್ಲಿ ಶೋಧಿಸಲ್ಪಟ್ಟ ಕಲ್ಲೆಣ್ಣೆಯ ಕಣಿಗಳನ್ನು ಬಿಟ್ಟರೆ)

ಭೌಗೋಲಿಕ ದೃಷ್ಟಿಯಿಂದ ತೀರ ಪ್ರತಿಕೂಲ ಪರಿಸ್ಥಿತಿಯಲ್ಲಿದೆ. ಸಮುದ್ರ ಕಂಠ ವಳಿಯ ಮೇಲೆ ಜನವಸತಿಯು ಇದ್ದು ಮಧ್ಯಭಾಗದಲ್ಲಿ ಮರುಭೂಮಿಯೇ ಇದೆ. ಇದರ ಪರಿಣಾಮವಾಗಿ ಅಲ್ಲಿಯ ನಿವಾಸಿಗಳಿಗೆ ಅನ್ನ ಹಾಗು ವಸ್ತ್ರ ಇವು ಅತಿ ಬಿಕ್ಕಟ್ಟಿನ ಸಮಸ್ಯೆಯಾಗಿವೆ. ಉಗಿಹಡಗಗಳು ಬರುವವರೆಗೆ ಅರಬರು ನೌಕಾನಯನದಲ್ಲಿ ನಿಪುಣರೆಂದು ಹೆಸರಾಗಿದ್ದರು. ಆದುದರಿಂದಲೇ ಯುರೋಪ, ಆಫ್ರಿಕಾ ಹಾಗು ಏಶಿಯದ ಅನೇಕ ದೇಶಗಳೊಡನೆ ಪ್ರತ್ಯಕ್ಷ ಸಂಬಂಧವನ್ನು ಸ್ಥಾಪಿಸಿಕೊಂಡಿದ್ದರು.

ಹಿಂದುಸ್ತಾನ ಮತ್ತು ಅರಬಸ್ತಾನಗಳ ಸಂಬಂಧವು ಪ್ರಾಚೀನ ಕಾಲದಿಂದಲೂ ನಡೆದುಬಂದಿದೆ. ಕ್ರಿಸ್ತ ಶಕಕ್ಕೆ ಮೊದಲು ಸಾವಿರಾರು ವರುಷಗಳಿಂದ ಇವೆರಡೂ ದೇಶಗಳಲ್ಲಿ ವ್ಯಾಪಾರ ವ್ಯವಹಾರಗಳ ನಿಕಟ ಸಂಬಂಧವಿದ್ದಿತೆಂದು ಸಿದ್ಧಪಡಿಸುವ ಅನೇಕ ಅವಶೇಷಗಳು ಇತ್ತೀಚಿನ ಉತ್ಖನನದಲ್ಲಿ ದೊರೆತಿವೆ. ಆದರೆ ಇಜಿಪ್ತ—ಯುರೋಪಗಳ ಸಂಗಡ ನಡೆಯುತ್ತಿದ್ದ ವ್ಯಾಪಾರವು ಈ ದಾರಿಯಿಂದಲೇ ಸಾಗುತ್ತಿದ್ದಿತೆಂದು ತೋರುತ್ತದೆ. ಆದರೆ ಇವಾವ ಸಂಗತಿಗಳ ನೆನಹೂ ಆ ಜನಾಂಗದಲ್ಲಿ ಉಳಿದುಕೊಂಡು ಬಂದಿಲ್ಲ. ಐತಿಹಾಸಿಕ ಕಾಲದಲ್ಲಿ ಅರಬಸ್ತಾನಕ್ಕೆ ಜಾಗತಿಕ ಮಹತ್ತ್ವವು ಹಜರತ್ ಮೊಹಮ್ಮದ ಹಾಗು ಅವರು ಸ್ಥಾಪಿಸಿದ ಇಸ್ಲಾಮದ ಮೂಲಕ ಪ್ರಾಪ್ತವಾಗಿದೆ.

ಕ್ರಿ. ಶ. ೧೧ನೆಯ ಶತಮಾನದಲ್ಲಿ ಹಿಂದುಸ್ತಾನದ ಮೇಲೆ ದಾಳಿ ಮಾಡಿದ ಮಹಮೂದ ಗಝ್ನಿಯಿಂದಲೇ ಮುಸಲ್ಮಾನೀ ಕಾಲದ ಗಣನೆಯನ್ನು ಮಾಡಲಾಗುತ್ತಿದೆ. ಆದರೆ ಇದು ಐತಿಹಾಸಿಕ ದೃಷ್ಟಿಯಿಂದ ಸಮರ್ಪಕವಾಗಿ ಕಾಣುವುದಿಲ್ಲ. ಅರಬಸ್ತಾನ ಮತ್ತು ಇರಾಕಗಳಿಂದ ಅರಬರು ಕುದುರೆಗಳ ವ್ಯಾಪಾರದ ಸಲುವಾಗಿಯೂ ಧರ್ಮಪ್ರಸಾರದ ಸಲುವಾಗಿಯೂ ಹಿಂದುಸ್ತಾನದ ಪಶ್ಚಿಮಕರಾವಳಿಯಲ್ಲಿ ಈ ಮೊದಲಿನಿಂದಲೇ ಅಲ್ಲಲ್ಲಿ ತಮ್ಮ ವಸತಿಗಳನ್ನು ಸ್ಥಾಪಿಸಿಕೊಂಡಿದ್ದರು. ಏಳನೆಯ ಶತಮಾನದಲ್ಲಿ ಮಹಮ್ಮದ ಬಿನ್ ಕಾಶೀಮನು ಸಿಂಧವನ್ನು ಜಯಿಸಿ ಅಲ್ಲಿ ಮೊದಲನೆಯ ಮುಸ್ಲಿಮ್ ರಾಜ್ಯವನ್ನು ಸ್ಥಾಪಿಸಿದನು. ಆದುದರಿಂದಲೇ ಹಿಂದುಸ್ತಾನ ಮತ್ತು ಅರಬಸ್ತಾನಗಳ ಸಂಬಂಧದಲ್ಲಿ ನಮ್ಮ ದೇಶದ ಪಶ್ಚಿಮ ಕರಾವಳಿಗೆ ಪ್ರಾಮುಖ್ಯವು ಬಂತು. ಹಿಂದುಸ್ತಾನದಲ್ಲಿ ಮುಸಲ್ಮಾನರು ಮೊದಲು ಖೈಬರ ಮತ್ತು ಬೋಲನ್‌ಘಟ್ಟಗಳ ಮುಖಾಂತರವಾಗಿ ಬಂದರು, ಎಂಬ ವಿಚಾರವು ಅಷ್ಟು ಸಯುಕ್ತಿಕವಾದುದಲ್ಲ. ಪ್ರಾಚೀನ ಕಾಲದಿಂದಲೂ ಸಂಪತ್ತು, ವಿದ್ಯೆ ಹಾಗು ಹುಟ್ಟುವಳಿ ಇವುಗಳ ಸಲುವಾಗಿ ಹಿಂದುಸ್ತಾನವು ಪ್ರಸಿದ್ಧವಾಗಿದೆ. ಈ ಪ್ರಸಿದ್ಧಿಯನ್ನು ಜಗತ್ತಿನಲ್ಲಿ ಹರಡಲಿಕ್ಕೆ ಅರಬ ನಾವಿಕರೇ ಕಾರಣೀಭೂತರಾಗಿದ್ದರು. ಇದರ ಮೂಲಕವೇ ಹಿಂದುಸ್ತಾನದ ಚಂದನ, ಉಕ್ಕು ಹಾಗು ವಸ್ತ್ರ ಇವುಗಳು ಯುರೋಪ ಖಂಡಕ್ಕೆ ಗೊತ್ತಾದುವು. ಚಂದನಕ್ಕೆ ಅರಬ ಭಾಷೆಯಲ್ಲಿ "ಸಂದಲ್" ಅನ್ನುತ್ತಾರೆ.

ಯುರೋಪದಲ್ಲಿ "ಸ್ಯಾಂಡಲ್" ಎಂದು ಚಂದನಕ್ಕೇ ಹೆಸರಿದೆ. ಅರಬ ಹಾಗು ಮಧ್ಯ-ಪೂರ್ವದಲ್ಲಿ ಖಡ್ಗದ ಉಕ್ಕಿಗೆ "ಹಿಂದು" ಎಂದು ಅನ್ನುವ ಪಾರಿಪಾಠವಿದ್ದಿತು. ಇದೇ ಬಗೆಯಾಗಿ ಅರಬರು ಹಿಂದುಸ್ತಾನದಲ್ಲಿಯ ಐಶ್ವರ್ಯ ಹಾಗು ಬುದ್ಧಿಮತ್ತೆಗೆ ಮನಸೋತಿದ್ದರು ಅರಬ ಪ್ರವಾಸಿಕರು ಬರೆದಿಟ್ಟ ಗ್ರಂಥಗಳಿಂದ ನಮ್ಮ ದೇಶದ ಅದೆಷ್ಟೋ ಪ್ರಾಚೀನ ಇತಿಹಾಸವು ಬೆಳಕಿಗೆ ಬಂದಿದೆ. ಇಸ್ಲಾಮ ಧರ್ಮದ ಸ್ಥಾಪನೆಯಾದ ನಂತರ ಧಾರ್ಮಿಕ ದೃಷ್ಟಿಯಿಂದಲೂ ಹಿಂದುಸ್ತಾನದ ಪರಿಶೀಲನೆಯನ್ನು ಅರಬ ವಿದ್ವಾಂಸರು ಮಾಡಿರುವರು; ಇವರಲ್ಲಿ ಇಬ್ನ ಬತೂತಾ ಹಾಗೂ ಅಲ್-ಬರುನಿ ಇವರ ಹೆಸರುಗಳನ್ನು ಉಲ್ಲೇಖಿಸಬಹುದು. ಆ ಕಾಲದಲ್ಲಿ ಅಂದರೆ, ಕ್ರಿ. ಶ. ೧೧ನೆಯ ಶತಮಾನದಲ್ಲಿ ಹಿಂದುಸ್ತಾನದ ವಿದ್ವಾಂಸರ ಕರ್ಮಠತನವು ಅವರ್ಣ-ನೀಯವಾಗಿತ್ತು. ಆದರೂ 'ಮ್ಲೇಂಛ'ನೆಂದೆನಿಸಿಕೊಂಡ ಅಲ್‌ಬರುನಿಯು ಸಂಸ್ಕೃತ ಭಾಷೆಯ ಅಭ್ಯಾಸಮಾಡಿ ನಮ್ಮ ದೇಶದ ಸಾಹಿತ್ಯ ಹಾಗೂ ಆಧ್ಯಾತ್ಮಿಕ ವಿದ್ಯೆಯ ಮಹಿಮೆಯನ್ನು ಜಗತ್ತಿಗೆ ಸಾರಿದನು.

ಅರಬಸ್ತಾನವು ಏಶಿಯಾ ಮತ್ತು ಯುರೋಪ ಖಂಡಗಳ ಮಧ್ಯದಲ್ಲಿ ಇರುವುದರಿಂದ ಅರಬರು ಗ್ರೀಸ ಹಾಗು ರೋಮನ್ ಸಂಸ್ಕೃತಿಗಳ ಅಭ್ಯಾಸವನ್ನು ಮಾಡಿದ್ದರು. ಹಿಪ್ಪೋಕ್ರೆಟಿಸ್, ಸಾಕ್ರೆಟಿಸ್ (ಸೂಕರಾತ), ಅರಿಸ್ಟಾಟಲ್, ಪ್ಲೇಟೊ ಇವರ ಗ್ರಂಥಗಳು ಅರಬರಿಗೆ ಚೆನ್ನಾಗಿ ತಿಳಿದಿದ್ದವು. ಆ ದೇಶದ ತತ್ತ್ವಜ್ಞಾನ ಹಾಗು ವೈದ್ಯಕದ ವಿಷಯದಲ್ಲಿ ಅರಬರಿಗೆ ತುಂಬ ಆಸ್ಥೆಯಿತ್ತು. ಅರಬರು ಭಾರತದಿಂದ ಕೆಲವು ಶಾಸ್ತ್ರ-ವಿದ್ಯೆಗಳನ್ನು ಕಲಿತರು. ಅರಬರಿಂದ ಈ ವಿದ್ಯೆಗಳು ಯುರೋಪದಲ್ಲಿ ಪ್ರಸಾರ ಹೊಂದಿದುವು. ಯುರೋಪೀಯರು ಈ ವಿದ್ಯೆಗಳು ಮೂಲತಃ ಅರಬರವೇ ಎಂದು ಭಾವಿಸಿದರು. ಉದಾಹರಣಾರ್ಥವಾಗಿ, ರೋಮನ್ ಸಂಖ್ಯೆಗೆ ಸಮಾನವಾಗಿ 'ಅರೇಬಿಕ್' ಸಂಖ್ಯೆಗಳೆಂಬ ಒಂದು ಸಂಖ್ಯಾಪದ್ಧತಿಯು ಜಗತ್ತಿನಲ್ಲಿ ರೂಢವಾಗಿದೆ. ಅದಕ್ಕೆ "ಅಂತರ್‌ರಾಷ್ಟ್ರೀಯ ಸಂಖ್ಯಾಪದ್ಧತಿ" ಎಂದು ಮನ್ನಣೆ ದೊರೆತಿದೆ. ತೀರ ಹೊಸತಾಗಿ ನಮ್ಮ ದೇಶದ ಸಂವಿಧಾನದಲ್ಲಿ ಅದರ ಸೇರ್ಪಡೆಯನ್ನು ಮಾಡುವಾಗ ಈ ಅಂತರ್‌ರಾಷ್ಟ್ರೀಯ ಸಂಖ್ಯಾಪದ್ಧತಿಯು ಮೂಲದಲ್ಲಿ ಭಾರತೀಯ ಸಂಖ್ಯಾಪದ್ಧತಿಯೇ ಆಗಿದೆಯೆಂದು ಈ ಮೊದಲು ಸಂಶೋಧಕರು ಕಂಡುಹಿಡಿದ ಸಂಗತಿಯನ್ನು ಪಂಡಿತ ಜವಾಹರಲಾಲ ನೆಹರು ಅವರು ಎತ್ತಿ ಹೇಳಿದರು. ಭಾರತೀಯ ಸಂಖ್ಯಾಪದ್ಧತಿಯೇ ಅರಬರ ಮುಖಾಂತರವಾಗಿ ಜಾಗತಿಕ ಸಂಖ್ಯಾಪದ್ಧತಿಯಾಯಿತು. ಅರಬರು, ಭಾರತದಿಂದ ಯಾವ ಯಾವ ವಿದ್ಯೆಗಳನ್ನು ಯಾವಯಾವ ಬಗೆಯಿಂದ ಕಲಿತುಕೊಂಡರೆಂಬ ವೃತ್ತಾಂತವು ಬಹಳ ಮನೋರಂಜಕವಾಗಿದೆ. ಪ್ರಾಚೀನಕಾಲದಲ್ಲಿ ಸ್ಥಳದಿಂದ ಸ್ಥಳಕ್ಕೆ ಒಂಟೆ, ಡೇರೆಗಳ ಸಹಾಯದಿಂದ ಅಲೆಯುತ್ತ ಜೀವಿಸುತ್ತಿದ್ದ ಒಂದು ಜನಾಂಗದಲ್ಲಿ ಇಸ್ಲಾಮ ಧರ್ಮದ ಸ್ಥಾಪನೆಯಾದ ನಂತರ ದೊಡ್ಡ ವೈಚಾರಿಕ ಕ್ರಾಂತಿಯಾಗಿ ಅದೇ ಜನಾಂಗವು ಜಗತ್ತಿನಲ್ಲಿ

ಜ್ಞಾನಲಾಲಸೆ, ವಿಜಿಗೀಷುವೃತ್ತಿ, ಧೈರ್ಯ ಹಾಗು ಸ್ಥೈರ್ಯ ಈ ಗುಣಗಳಿಗಾಗಿ ಪ್ರಸಿದ್ಧವಾಯಿತು.

ಅರಬರು ಸಿಂಧ ಪ್ರಾಂತವನ್ನು ಗೆದ್ದುಕೊಂಡರು. ಸಿಂಧಪ್ರಾಂತದೊಡನೆ ಬಂದ ಸಂಬಂಧದಲ್ಲಿ ಅರಬರು ಹಿಂದುದೇಶದ ಅನೇಕ ಶಾಸ್ತ್ರ-ವಿದ್ಯೆಗಳನ್ನು ಕಲಿತುಕೊಳ್ಳಲು ಶಕ್ಯವಾಯಿತು. ಇವರು ತಮ್ಮ ಧರ್ಮವನ್ನು ಹಿಂದುಸ್ಥಾನದಲ್ಲಿ ಪ್ರಚಾರ ಮಾಡಲು ತುಂಬ ಹೆಣಗಿದರು. ಹಿಂದುಸ್ಥಾನದಲ್ಲಿಯ ಪ್ರತಿಷ್ಠಿತ ವಿದ್ವಾಂಸರನ್ನು ಅರಬಸ್ತಾನಕ್ಕೆ ಕರೆದೊಯ್ದು ಅವರಿಂದ ಭಾರತೀಯ ವಿದ್ಯೆಗಳನ್ನು ಕಲಿತರು. ಅರಬರು ಕಲಿತ ವಿಷಯಗಳಲ್ಲಿ ಸಂಖ್ಯಾಪದ್ಧತಿ ಹಾಗೂ ಗಣಿತ ಪದ್ಧತಿಗಳು ಮುಖ್ಯವಾಗಿವೆ.

ಸಂಸ್ಕೃತದಲ್ಲಿ ಯಾವ ರೀತಿಯಿಂದ ಎಣಿಕೆಯನ್ನು ಮಾಡುವರೋ ಅದೇ ರೀತಿಯಿಂದ ಅರಬೀ ಭಾಷೆಯಲ್ಲಿ ಎಣಿಕೆಯನ್ನು ಮಾಡಲಾಗುತ್ತಿದೆ. ಉದಾ:— “ಪಂಚಾಧಿಕಮ್ ಶತಮ್” ಇದರಲ್ಲಿ ಐದು ಮುಂಚೆ ತರುವಾಯ ನೂರು ಹೀಗೆ. ಎರಡನೆಯದಾಗಿ ಅರಬೀ ಲಿಪಿಯು ಎಡದಿಂದ ಬಲಕ್ಕೆ ಬರೆಯಲ್ಪಡುತ್ತಿದ್ದರೂ ಅಂಕೆಗಳನ್ನು ಮಾತ್ರ ಭಾರತೀಯ ಪದ್ಧತಿಯಂತೆ ಬಲದಿಂದ ಎಡಕ್ಕೆ ಬರೆಯುತ್ತಾರೆ.

ಅರಬರು ಇಸ್ಲಾಮ ಧರ್ಮದ ಏಕನಿಷ್ಠ ಅನುಯಾಯಿಗಳು. ಆದುದರಿಂದ ತಮ್ಮ ಸಾಂಪ್ರದಾಯಿಕತೆಯ ಕಟ್ಟಾಚರಣೆಗಳಿಗೆ ಸರಿಹೋಗದ ಸಾಂಖ್ಯ, ನ್ಯಾಯ, ವೇದಾಂತ ಮುಂತಾದ ತತ್ತ್ವಜ್ಞಾನವನ್ನಾಗಲಿ, ಅಥವಾ ಲಲಿತ ಸಾಹಿತ್ಯವನ್ನಾಗಲಿ ಅವರು ಗಮನಿಸಲಿಲ್ಲ ಆದರೆ ವಿಶ್ವಕಥಾ ಸಾಹಿತ್ಯದ ಮೂಲವಾದ ಪಂಚತಂತ್ರವನ್ನು ಅಭ್ಯಸಿಸಿ ಅದರ ಪರಿಚಯವನ್ನು ಪೂರ್ವ-ಪಶ್ಚಿಮದವರಿಗೆ ಮಾಡಿಕೊಟ್ಟರು ಯುರೋಪಕ್ಕೆ ಪಂಚತಂತ್ರವು ಅರಬರ ಮುಖಾಂತರವಾಗಿಯೇ ಹೋಯಿತು.

ವೈದ್ಯಕ ಹಾಗು ಖಗೋಲ ಶಾಸ್ತ್ರಗಳಲ್ಲಿಯೂ ಭಾರತೀಯ ಪದ್ಧತಿಗಳನ್ನು ಪರಿಶೀಲಿಸಿ ತಮಗೆ ಉಪಯುಕ್ತವೆನಿಸಿದ ಭಾಗವನ್ನು ಅವರು ಸ್ವೀಕರಿಸಿದರು. ಆದರೆ ಈ ವಿಷಯಗಳಲ್ಲಿ ಅವರು ಟಾಲೆಮಿ ಹಾಗು ಹಿಪ್ಪೊಕ್ರೆಟ್ಸ ಇವರಿಂದ ಪ್ರಣೀತವಾದ ಶಾಸ್ತ್ರಕ್ಕೆ ಕೊಟ್ಟಷ್ಟು ಮಹತ್ವವನ್ನು ಭಾರತೀಯ ಪದ್ಧತಿಗಳಿಗೆ ಕೊಡಲಿಲ್ಲ. ಅರಬರು ಭಾರತದಿಂದ ಕಲಿತ ವಿಷಯಗಳಲ್ಲಿ ಚದುರಂಗದ ಆಟವೂ ಒಂದಾಗಿದೆ. ಸಾಮಾನ್ಯ ಮನುಷ್ಯನಿಗೆ ಸೇರದ ಈ ಆಟವನ್ನು ಅರಬರು ಮೆಚ್ಚಿಕೊಂಡರು. ಅವರ ಮೂಲಕ ಮುಂದೆ ಅದು ಯುರೋಪ ಖಂಡದಲ್ಲಿ ಪ್ರಚಾರಕ್ಕೆ ಬಂದಿತು.

ಅರ್ವಾಚೀನ ಕಾಲದಲ್ಲಿ ಡಚ್, ಫ್ರೆಂಚ್, ಜರ್ಮನ್, ಪೊಲಿಶ್ ಹಾಗು ಬ್ರಿಟಿಶ್ ವಿದ್ವಾಂಸರು ಹಿಂದುಸ್ಥಾನದ ವಿದ್ಯಾಭಾಂಡಾರದ ಬಾಗಿಲುಗಳನ್ನು ಜಗತ್ತಿನ ಜನರಿಗಾಗಿ ತೆರೆದಿರುವರಾದರೂ ಹಿಂದುಸ್ಥಾನದ ವಿದ್ಯೆಗಳ ವ್ಯಾಸಂಗಮಾಡಿ ಅವರ ಬುದ್ಧಿಮತ್ತೆಯನ್ನು ಜಗತ್ತಿನಲ್ಲಿ ಸಾರಿದವರಲ್ಲಿ ಅರಬರೇ-ಮೊದಲಿಗರೆಂದು ಹೇಳಬಹುದು.

—ಗುರುನಾಥ ದಿವೇಕರ

## ಅಭ್ಯಸನಗಳು

**ಪ್ರಶ್ನೆಗಳು —**

೧. ಯಹುದೀಯ ಜನಾಂಗವು ಏತಕ್ಕೆ ಪ್ರಸಿದ್ಧವಾಗಿದೆ ?

೨. ಅರಬರು ಒಂದು ಕಾಲಕ್ಕೆ ನಾವಿಕರಾಗಲು ಕಾರಣವೇನು ?

೩. ಅರಬರ ಮತ್ತು ಹಿಂದೀಯರ ಪ್ರಾಚೀನ ಬಳಕೆಯನ್ನು ತೋರಿಸುವ ಸಂಗತಿಗಳಾವುವು ?

೪. ಹಿಂದುಸ್ಥಾನದ ಕೀರ್ತಿ ಅರಬರಿಂದ ಜಗತ್ತಿನಲ್ಲಿ ಹೇಗೆ ಬೆಳೆಯಿತು ?

೫. ಅರಬರು ಭಾರತದಿಂದ ಕಲಿತ ಮುಖ್ಯ ವಿದ್ಯೆಗಳಾವುವು ?

೬. ಅರಬರ ಭಾಷೆಯಲ್ಲಿ ಅಂಕೆಗಳನ್ನು ಎಡದಿಂದ ಬಲಕ್ಕೆ ಏಕೆ ಬರೆಯುವದಿಲ್ಲ ?

**ಭಾಷಾಭ್ಯಾಸ:—**

೧. ಇಲ್ಲಿ ಬಂದಿರುವ ಆಡಂಬರವಿಲ್ಲದ ನಿರೂಪಣ, ಸರಳಶೈಲಿಯನ್ನು ನಿರೀಕ್ಷಿಸಬೇಕು.

೨. ಅರಬರ ಪ್ರತಿಕೂಲ ಪರಿಸ್ಥಿಯನ್ನು ಪರಿಣಾಮಕಾರಿಯಾಗುವಂತೆ ವರ್ಣಿಸಿರಿ.

೩. ಅರ್ವಾಚೀನರು ಹಿಂದುಸ್ಥಾನದ ವಿದ್ಯಾಭಾಂಡಾರದ ಬಾಗಿಲುಗಳನ್ನು ಜಗತ್ತಿನ ಜನರಿಗಾಗಿ ತೆರೆದಿರುವರು.

ಇದೇ ಸಂಗತಿಯನ್ನು ಬೇರೆ ಬೇರೆ ರೀತಿಯಿಂದ ಬರೆಯಿರಿ.

**ಶಬ್ದ ವಿಚಾರ:—**

೧. ಇತಿಹಾಸ-ಐತಿಹಾಸಿಕ—ಇದರಂತೆ ಜಗತ್, ಭೂಗೋಲ, ತತ್ತ್ವ, ಧರ್ಮ ವಿಚಾರ, ಪುರಾಣ ಇವುಗಳಿಂದ ಉಂಟಾಗುವ 'ಇಕ' ಪ್ರತ್ಯಯಾಂತ ವಿಶೇಷಣಗಳನ್ನು ಸಿದ್ಧಪಡಿಸಿರಿ.

೨. ಪ್ರಾಚೀನ, ವರ್ಣನೀಯ, ಸೋಲು, ಮೂಢ, ಜಯ, ಐಹಿಕ—ಇವುಗಳ ಪ್ರತಿ ನುಡಿಗಳನ್ನು ಹೇಳಿರಿ.

೩. ಕರ್ಮಠತನ, ಅಂತರ್‌ರಾಷ್ಟ್ರೀಯ, ಪ್ರಣೀತ, ವಿಜಿಗೀಷುವೃತ್ತಿ, ಇವುಗಳ ಅರ್ಥ ಹೇಳಿರಿ.

**ವಾಕ್-ಶಿಕ್ಷಣ:—**

೧. ಅಲ್‌ಬರುನಿಯ ಚರಿತ್ರೆಯನ್ನು ನಮ್ಮ 'ಅಭಿನವ ವಾಚನಮಾಲೆ'ಯ ಒನೆಯ ಪುಸ್ತಕದಲ್ಲಿ ಕೊಡಲಾಗಿದೆ.

**ಚರ್ಚೆ:—**

ನೀರನಾಗಬಯಸುವವನಿಗೆ ಜ್ಞಾನಲಾಲಸೆ ತರವಲ್ಲ.

**ಬರೆಹ:—**

ಚೀನ ಮತ್ತು ಹಿಂದುಸ್ಥಾನದ ಪ್ರಾಚೀನ ಸಂಬಂಧವನ್ನು ಕುರಿತು ಬರೆಯಿರಿ.

# ೧೫. ಮುಕ್ತಿ

ಪಂ. ಜವಾಹರಲಾಲರ ವ್ಯಕ್ತಿತ್ವವು ಅವರ ಈ ಪ್ರಬಂಧದಲ್ಲಿ ಸಂಪೂರ್ಣವಾಗಿ ಮೂಡಿ ನಿಂತಿದೆ. ಶೈಲಿಯ ವೈಶಿಷ್ಟ್ಯವೂ ಅಭ್ಯಸನೀಯವಾಗಿದೆ. ಲೋಕವು ದುಃಖದಲ್ಲಿ ತೊಳಲು

ತ್ತಿರುವಾಗ ಹಿಮಾಲಯದ ಅನುಪಮ ಸೌಂದರ್ಯವು— ಆ ಏಕಾಂತದ ದಿವ್ಯಾನಂದವು ಪಂ. ಜವಾಹರಲಾಲರಿಗೆ ಸೊಗಸದಾಯ್ತು ! ಪ್ರಪಂಚವನ್ನು ಅನ್ಯಾಯಿಗಳೂ ಪಾಪಿಗಳೂ ಆದವರ ಕೈಗೆ ಒಪ್ಪಿಸಿ ವಿರಕ್ತಿಯನ್ನು ತಾಳುವ ಕಲ್ಲೆದೆಯ ನಿಷ್ಕರುಣೆಗಳು ತಾವು ಅಲ್ಲ ಎಂಬುದನ್ನು ಅವರು ಇಲ್ಲಿ ವಿಶದಪಡಿಸಿದ್ದಾರೆ. ಜಗತ್ತಿನ ಅನ್ಯಾಯ ಅನೀತಿಗಳನ್ನು ಪ್ರತಿಭಟಿಸುವಲ್ಲೇ ಮಾನವನ ನಿಜವಾದ ತತ್ತ್ವದ ಪರೀಕ್ಷೆಯಾಗುವುದು. ' ಈಸಬೇಕು ಇದ್ದು ಜಯಿಸಬೇಕು ' ಎಂಬುದು ಪಂ. ಜವಾಹರಲಾಲರ ಮಾರ್ಗ. ]

ಹರಿಪುರ ರಾಷ್ಟ್ರೀಯ ಮಹಾಸಭೆಯು ಮುಗಿದಿತು. ತಾಪೀ ನದಿಯ ದಂಡೆಯಲ್ಲಿ ಬಿದುರಿನ ತಟ್ಟಿಗಳಿಂದ ನಿರ್ಮಾಣವಾದ ಆಶ್ಚರ್ಯಕರವಾದ ಆ ಕಾಂಗ್ರೆಸ್ ನಗರವು ಹಾಳು ಸುರಿಯುತ್ತಿತ್ತು.

ಒಂದೆರಡೇ ದಿನಗಳ ಹಿಂದೆ ಇದರ ಬೀದಿಗಳಲ್ಲಿ ಉತ್ಸಾಹಪೂರಿತವಾದ ಜನಸಂದಣಿಯು ಗಂಭೀರ ಹಾಗು ಆನಂದದಾಯಕವಾದ ಸಂಭಾಷಣೆ, ಚರ್ಚೆಗಳಲ್ಲಿ ನಗುತ್ತ ಕೆಲೆಯುತ್ತ ಓಡಾಡುತ್ತಿದ್ದಿತು. ಭಾರತದ ಭವಿತವ್ಯತೆಯನ್ನು ರೂಪಗೊಳಿಸುತ್ತೇವೆಂದು ಧಾವಿಸಿ, ಇಲ್ಲಿ ಸೇರಿದ ಸಾವಿರಾರು ಜನರೆಲ್ಲ ತಮ್ಮ ದೂರದೂರದ ಮನೆಗೆ ಒಮ್ಮೆಲೆ ಹೊರಟುಹೋದರು. ಆದರಿಂದ ನೋಡಿದಲ್ಲೆಲ್ಲ ಭಣಭಣ! ಭಣ ! ಭಣ ! ಇಲ್ಲಿಯ ಸುಂಟರಗಾಳಿಯೂ ಕೂಡ ತಣ್ಣಗಾಗಿತ್ತು; ನಾನು ಇಲ್ಲಿಗೆ ಬಂದಂದಿನಿಂದ ನನಗೆ ವಿಶ್ರಾಂತಿ ದೊರೆತುದು ಇಂದೇ. ನಾನು ಅಲೆಯುತ್ತ ತಾಪೀ ನದಿಯ ಕಡೆಗೆ ಹೊರಟೆ. ಕತ್ತಲಾಗುತ್ತ ನಡೆದಿತ್ತು. ಹಾಗೆಯೇ ನದಿಯ ಪ್ರವಾಹದ ವರೆಗೂ ನಡೆದೆ.

ಹೊಲ ಮತ್ತು ಪಡಭೂಮಿಯ ಮೇಲೆ ತಲೆಯೆತ್ತಿದ ಆ ವಿಸ್ತಾರವಾದ ಪಟ್ಟಣವು ಮತ್ತು ಬಿಡಾರಗಳು ಬೇಗನೇ ಹೇಳಹೆಸರಿಲ್ಲದಂತೆ ಆಗುವವಲ್ಲಾ ಎಂದು ಸ್ವಲ್ಪ ವಿಷಾದವು ನನ್ನನ್ನೂ ಆವರಿಸಿತು.

ಈ ವಿಷಾದವು ಕಡಿಮೆಯಾಯಿತು. ಎಲ್ಲಿಗಾದರೂ ದೂರ ಹೋಗಬೇಕೆಂದು ಹಲವು ದಿನಗಳಿಂದ ನನ್ನೊಳಗೆ ಬೆಳೆಯುತ್ತಲಿದ್ದ ಭಾವನೆಯು ಪ್ರಬಲವಾಯಿತು; ಅದು ನನ್ನನ್ನು ನಿಲ್ಲಗೊಡದಾಯಿತು. ಹೀಗೆ ಎನಿಸುತ್ತಿದ್ದುದು ನನ್ನ ದೈಹಿಕ ದಣಿವಿಗಾಗಿ ಅಲ್ಲ; ಆದರೆ ಮಾನಸಿಕ ಬೇಸರಕ್ಕಾಗಿ, ಅನುದಿನದ ಅದೇ ಮಾತು, ಅದೇ ಕೆಲಸ ಸಾಕಾಗಿತ್ತು. ಮನಸ್ಸು ಬದಲನ್ನು ಬೇಡುತ್ತಿತ್ತು. ಹೊಸದನ್ನು ಹಾರೈಸುತ್ತಿತ್ತು. ರಾಜಕೀಯ ಜೀವನವು ಬೇಗನೆ ಬೇಸರವನ್ನು ತರುತ್ತದೆ, ನನಗೆ ಇದರ ಸಂಕಷ್ಟ ಅನುಭವವೂ ಈಗ ಉಂಟಾಗಿತ್ತು. ಹಲವು ದಿನಗಳಿಂದ ವೈಯುಂಡ ರಾಜಕೀಯ ಚಳವಳಿಯ ಚಟವೂ ದಿನದ ನೈಮಿತ್ತಿಕ ಕೆಲಸಗಳೂ ನನ್ನನ್ನು ಹಿಡಿದಿಟ್ಟಿದ್ದುವು. ಹಲವರ ಪ್ರಶ್ನೆಗಳಿಗೆ ಸೌಹಾರ್ದ ಮತ್ತು ಪ್ರೇಮದಿಂದ ಉತ್ತರ ಕೊಡುವ ಯತ್ನ ಮಾಡುತ್ತಿದ್ದೆ. ಆದರೂ ಮನಸ್ಸು ಮಾತ್ರ ಎಲ್ಲ

ದೂರ ಅಲೆಯುತ್ತಿತ್ತು. ಅದು ಹಿಮಾಲಯದ ತಪ್ಪಲುಗಳಲ್ಲಿ, ಆಳವಾದ ಕೊಳ್ಳಗಳಲ್ಲಿ, ಹಿಮಾಚ್ಛಾದಿತ ಶಿಖರಗಳಲ್ಲಿ, ದೇವದಾರು, ಪೀತದಾರು ವೃಕ್ಷರಾಜಿಗಳಲ್ಲಿ ವಿಹರಿಸುತ್ತಿತ್ತು. ನನ್ನ ಜೀವನವು, ನಮ್ಮನ್ನು ಮುತ್ತಿದ ತೊಡಕು ತೊಂದರೆಗಳಿಂದ ಪಾರಾಗಿ, ಏಕಾಂತದಲ್ಲಿ ಶಾಂತಿ ಸಮಾಧಾನಗಳನ್ನೀಯುವ ಮಂದಾನಿಲವು ತೀಡುವಲ್ಲಿಗೆ ಹೋಗಲು ಹಲುಬುತ್ತಿತ್ತು.

ಕೊನೆಗೊಮ್ಮೆ ಹೃದಯದಲ್ಲಿ ಹುದುಗಿಸಿಟ್ಟ ಹಲವು ದಿನಗಳ ಹಾರೈಕೆಯನ್ನು ಪೂರೈಸುವ ನನ್ನ ಹಾದಿಯನ್ನು ಹಿಡಿದೆ. ಪಾರಾಗಿ ಹೋಗುವ ಅನುವು ದೊರೆತಾಗ ಮಂತ್ರಿಗಳ ಆಗಮನ ನಿರ್ಗಮನಗಳ ಮತ್ತು ಜಾಗತಿಕ ರಾಜಕಾರಣದ ಅಲ್ಲೋಲ ಕಲ್ಲೋಲಗಳ ಉಸಾಬರಿ ನನಗೇಕೆ?

ನನ್ನ ಊರಿಗೆ— ಅಲಹಾಬಾದಿಗೆ, ನಾನು ಧಾವಿಸಿದೆ. ಆದರೇನು? ಅಲ್ಲಿ ಬೇಗನೆ ಕೆಲವೊಂದು ತೊಂದರೆಗಳು ತಲೆದೋರುವ ಲಕ್ಷಣಗಳು ಕಂಡವು. ನನ್ನ ಮೇಲೆ ನನಗೇ ಕೋಪವುಂಟಾಯಿತು. ಮನಸ್ಸು ರೇಗಿತು. ಮೂರ್ಖರೂ ಧರ್ಮಾಂಧರೂ ಜಾತೀಯ ಗಲಭೆಯನ್ನುಂಟುಮಾಡುವರೆಂದು, ನಾನು ನನ್ನ ಹಿಮಾಲಯದ ಪ್ರವಾಸವನ್ನು ತಡೆಯಬೇಕೆ? ತಿಳಿದವರೂ ವಿಚಾರವಂತರೂ ಹಲವರಿದ್ದಾರೆ. ಆದುದರಿಂದ ಇಂತಹ ಯಾವ ಅನಾಹುತವೂ ಒದಗಲಿಕ್ಕಿಲ್ಲ, ಪರಿಸ್ಥಿತಿಯು ಸುಧಾರಿಸಬಹುದು ಎಂದು ನಾನು ಎಣಿಸಿದೆ. ಇದರೊಳಗಿಂದ ಒಮ್ಮೆ ಕಿತ್ತುಕೊಂಡು ದೂರ ಹೋಗುವ ಹಂಬಲವು ತೀವ್ರವಾಗಿತ್ತು. ಆದುದರಿಂದ ನಾನು ಹೀಗೆ ಎಣಿಸಿ ಭ್ರಾಂತನಾದೆ. ನನ್ನವಿಲ್ಲಿ ಕರ್ತವ್ಯಗಳಿರುವಾಗ, ಒಬ್ಬ ಹೇಡಿಯಂತೆ ನಾನು ಜಾರಿದೆ.

ಅಲ್ಪಾವಧಿಯಲ್ಲಿಯೇ, ಪ್ರಯಾಗವು ಮರೆತಿತು. ಅದರ ಸಮಸ್ಯೆಗಳೂ ಮಾಯವಾದವು. ಹಿಂದುಸ್ತಾನದ ವಿಚಾರವು ಕೂಡ ಮನಸ್ಸಿನ ಯಾವದೋ ಒಂದು ಮೂಲೆಯಲ್ಲಿ ಅವಿತುಕೊಂಡಿತು. ಕುಮಾವುನ ಪರ್ವತಶ್ರೇಣಿಯಲ್ಲಿರುವ ಆಲ್ಮೋರಾಕ್ಕೆ ಹೋಗುವ ಅಂಕುಡೊಂಕಾದ ದಾರಿಯನ್ನು ಸಾಗಿದಾಗ, ಆ ಪರ್ವತಪ್ರದೇಶದೊಳಗಿನ ಉನ್ಮಾದಕ ವಾತಾವರಣವು ನನ್ನ ಮನಸ್ಸನ್ನು ಸೂರೆಗೊಂಡಿತು ಆಲ್ಮೋರಾದಿಂದ ಖಾಲಿಯುವರೆಗೆ ಗುಡ್ಡಗಾಡಿನ ತಟ್ಟುವಿನ ಮೇಲೆ ಪ್ರವಾಸದ ಕೊನೆಯ ಭಾಗವನ್ನು ಮುಗಿಸಿದೆ.

ಎರಡು ವರ್ಷಗಳಿಂದ ಹೋಗಲು ಹಾರೈಸುತ್ತಿದ್ದ ಖಾಲಿಗೆ ಬಂದು ತಲುಪಿದೆ. ನಿಜವಾಗಿಯೂ ಇದೊಂದು ಹಿಗ್ಗಿನ ಬೀಡು. ಅದು ಸೂರ್ಯಾಸ್ತ ಸಮಯ. ಸಂಜೆಯ ಹೊಂಬೆಳಕು ಪರ್ವತಪ್ರದೇಶದ ಮೇಲೆ ವಿರಾಜಿಸುತ್ತಿತ್ತು. ಎಲ್ಲೆಲ್ಲಿಯೂ ಶಾಂತಿಯು ಪಸರಿಸಿತ್ತು. ನಂದಾದೇವಿ ಮತ್ತು ಅದರ ನೆರೆಯ ಶಿಖರಗಳನ್ನು ಕಾಣಲು ನನ್ನ ಕಣ್ಣುಗಳು ತವಕಿಸುತ್ತಿದ್ದವು. ಆದರೆ ಅವೆಲ್ಲವೂ ತಿಳಿಮೋಡಗಳ ಹಿಂದೆ ಮರೆಯಾಗಿದ್ದವು.

ದಿನದಿನಗಳು ಉರುಳಿದವು ಎಲ್ಲೆಲ್ಲೂ ಪಸರಿಸಿದ ಹಿಮವನ್ನು ಮತ್ತು ಕೊಳ್ಳಗಳನ್ನು ಕಣ್ತುಂಬ ನೋಡಿದೆ. ಅಲ್ಲಿ ಗಾಳಿಯನ್ನು ಮನಸಾರೆ ಸೇವಿಸಿದೆ ಇಲ್ಲಿ ಅದೇನು ಅಂದ! ಅದೆಂತಹ ಶಾಂತಿ! ಪ್ರಪಂಚದ ತಾಪತ್ರಯಗಳು ಎಲ್ಲಿಯೋ ಮಾಯವಾದಂತೆನಿಸಿತು. ಅವುಗಳಿಗೆ ನಿಜವಾದ ಅಸ್ತಿತ್ವವಿಲ್ಲವೆಂದೂ ಎನಿಸಿತು. ನಿಂತಲ್ಲಿಂದ ಪಶ್ಚಿಮಕ್ಕೂ, ಇಗ್ನೇಯ ದಿಕ್ಕಿಗೂ, ಕೆಳಗೆ ಎರಡು ಮೂರು ಸಾವಿರ ಅಡಿಯಷ್ಟು ಆಳವಾದ ಕಂದರಗಳು ದೂರದವರೆಗೆ ವಕ್ರವಕ್ರವಾಗುತ್ತ ಹೋಗಿದ್ದವು. ಉತ್ತರ ದಿಕ್ಕಿನಲ್ಲಿ ನಂದಾದೇವಿ ಹಾಗು ಅವಳ ಪರಿವಾರದ ಹಿಮಾಚ್ಛಾದಿತ ಶಿಖರಗಳು ಕತ್ತೆತ್ತಿಕೊಂಡು ನಿಂತಿದ್ದವು. ಕೆಳಗೆ ನೋಡಿದರೆ ಕಣ್ಣು ತಿರುಗುವ ಭಯಾನಕ ಕಡಿದಾದ ಬೆಟ್ಟದ ಸಾಲುಗಳು ಕೆಲವೆಡೆಗೆ. ಇನ್ನು ಹಲವೆಡೆಗೆ ಸಣ್ಣನೆಯ ದುಂಡನ್ನ ಗುಡ್ಡಗಳು ನಿಂತಿದ್ದವು. ಈ ಗುಡ್ಡಗಳನ್ನು ಅಲ್ಲಲ್ಲಿ ಕಡಿದು ಮಾಡಿದ ಹೊಲಗದ್ದೆಗಳಲ್ಲಿ ಕಾಣುತ್ತಿದ್ದ ಹಸಿರು, ಮಾನವನ ಉದ್ಯಮ ಶೀಲತೆಯ ಸಾಕ್ಷಿಯಾಗಿ ನಿಂತಿತ್ತು. ಅರುಣೋದಯ ಕಾಲದಲ್ಲಿ ನಾನು ಬರಿಮೈಯಿಂದ ಬಯಲಿನಲ್ಲಿ ಒರಗಿಕೊಳ್ಳುತ್ತಿದೆ. ಸೂರ್ಯನ ಮಂದಸ್ಮಿತ ರಶ್ಮಿಯ ಅಪ್ಪುಗೆಯಿಂದ ನನ್ನಲ್ಲಿ ಕಾವೇರುತ್ತಿತ್ತು. ಹಿಮದ ಮೇಲಿಂದ ಬರುವ ಬೆಳಗಿನ ತಂಗಾಳಿಯು ನನ್ನಲ್ಲಿ ಸ್ವಲ್ಪ ನಡುಕವನ್ನುಂಟುಮಾಡುತ್ತಿತ್ತು. ಸೂರ್ಯಪ್ರಕಾಶದಿಂದ ನನಗೆ ಉಷ್ಣತೆ ಮತ್ತು ಪ್ರಸನ್ನತೆಯೂ ಉಂಟಾಗುತ್ತಿತ್ತು.

ಕೆಲಬಾರಿ ಪೀತದಾರು ವೃಕ್ಷಗಳ ಅಡಿಯಲ್ಲಿ ನಾನು ಮಲಗುತ್ತಿದ್ದೆ. ಗಾಳಿಯು ಸುಳಿಯುತ್ತಿತ್ತು ಅದು ನನ್ನೊಡನೆ ಹಲವು ವಿಲಕ್ಷಣ ಕಿವಿಮಾತುಗಳನ್ನಾಡುತ್ತಿತ್ತು. ನನ್ನ ತಲೆಯೊಳಗಿನ ವಿಚಾರದ ಉಮ್ಮಳವನ್ನು ಶಾಂತಮಾಡುತ್ತಿತ್ತು. ನನಗೆ ಇದು ಸ್ವರ್ಗಸುಖವೆಂದೆನಿಸಿತು. ನಾನು, ತನ್ನ ಮೋಹಪಾಶದಲ್ಲಿ ಸಿಲುಕಿರುವುದನ್ನು ಕಂಡು ಮಂದಮಾರುತನು ನನ್ನೊಡನೆ ಇನ್ನಷ್ಟು ಸಲುಗೆಯನ್ನು ಹೆಚ್ಚಿಸಿದನು. ಧೂರ್ತತನದಿಂದ ಮೆಲ್ಲಗೆ ಭೂಲೋಕದೊಳಗಿನ ಜನಗಳ ಕುಂದುಕೊರತೆಗಳನ್ನು, ಅನ್ಯಾಯ ಅಪರಾಧಗಳನ್ನು ಕಿವಿಯಲ್ಲಿ ಹಾಕತೊಡಗಿದನು. ಅಲ್ಲಿ ನಡೆದ ಎಡೆಬಿಡದ ಕಾದಾಟವೇನು ? ಅವರ ರಾಗದ್ವೇಷಗಳೇನು ? ಧರ್ಮದ ಹೆಸರಿನಲ್ಲಿ ನಡೆಸಿದ ಧರ್ಮಾಂಧರ ಅನ್ಯಾಯಗಳೇನು ? ರಾಜಕಾರಣದೊಳಗಿನ ಮೋಸಗಾರಿಕೆಯೇನು ? ಲಂಚಗುಳಿತನವೇನು ? ಆದರ್ಶಗಳಿಂದ ಆದ ಅಧಃಪಾತವೇನು ? ಇಂತಹ ಜನಗಳಲ್ಲಿ ಮರಳಿ ಹೋಗುವುದು ಯುಕ್ತವೇ ? ಇಂತಹರಿಗಾಗಿ ತನ್ನ ಆಯುಷ್ಯವನ್ನು ಹಾಳುಮಾಡಿಕೊಳ್ಳುವುದು ಜಾಣತನವೇ ? ಇಲ್ಲಿ ಶಾಂತಿಯಿದೆ, ಸಮಾಧಾನವಿದೆ; ಆರೋಗ್ಯವಿದೆ; ಮತ್ತು ಸಂಗಾತಿಗಳೆಂದು ಹಿಮ ಉಂಟು; ಬೆಟ್ಟಗಳುಂಟು; ಇತ್ತ ಬೆಟ್ಟದ ಇಳುಕಲಿನ ಅಂದವಾದ ಪ್ರದೇಶಗಳು, ಅಲ್ಲಿ ನಾನಾಪ್ರಕಾರದ ಗಿಡಮರಗಳೇನು ? ಬಣ್ಣಬಣ್ಣದ ಹೂವುಗಳೇನು ? ಹಾಡುವ ಹಕ್ಕಿಗಳೇನು ? ಎಂದು ತೆಂಕಣಗಾಳಿ ಮೆಲ್ಲನೆ ಧೂರ್ತತನದಿಂದ ನನ್ನ ಕಿವಿಯೂದಿತು. ಅದು ವಸಂತಕಾಲ

ಬೇರೆ. ನಾನೂ ಸುಮ್ಮನಿದ್ದೆ.

ದೇಶದಲ್ಲಿ ಬೇಸಗೆಯು ತಲೆದೋರಿದ್ದರೂ, ಈ ಪರ್ವತಪ್ರದೇಶದಲ್ಲಿ ಇನ್ನೂ ವಸಂತಕಾಲದ ಪ್ರಾರಂಭವೇ ಇತ್ತು. ಪರ್ವತಗಳ ಇಳುಕಲುಗಳಲ್ಲಿ ಹೂವಿನ ಹಾಸುಗೆಗಳು ಅಲ್ಲಲ್ಲಿ ಕಾಣುತ್ತಿದ್ದವು. ಹಣ್ಣಿನ ಗಿಡಗಳು ಕೊನರಿ ನಿಂತಿದ್ದವು. ನಳನಳಿಸುವ ಕೋಮಲವಾದ ಚಿಗುರೆಲೆಗಳು ಆ ವೃಕ್ಷರಾಜಿಗಳ ನಗ್ನತೆಯನ್ನು ಮುಚ್ಚಲು ಅದೇ ತಾನೆ ಹೊರಹೊರಟಿದ್ದವು.

ಖಾಲಿಯಿಂದ ನಾಲ್ಕು ಮೈಲು ದೂರದಲ್ಲಿ ೧೫೦೦ ಅಡಿಗಳ ಎತ್ತರದಲ್ಲಿ ಬಿನಸಾರವು ಕಂಗೊಳಿಸುತ್ತಿತ್ತು. ನಾನು ಅಲ್ಲಿಗೆ ಹೋದೆ. ಆಯುಷ್ಯದಲ್ಲಿಯೇ ಎಂದಿಗೂ ಮರೆಯಲಾಗದಂತಹ ನಿತಾಂತ ರಮಣೀಯ ದೃಶ್ಯವನ್ನು ಅಲ್ಲಿ ಕಂಡೆನು. ಅರುನೂರು ಮೈಲು ವಿಸ್ತಾರವಾದ ಹಿಮಪ್ರದೇಶ! ಚೀನದಿಂದ ನೇಪಾಳದ ವರೆಗೆ ಹಬ್ಬಿಕೊಂಡಿದೆ; ಆ ವಿಸ್ತೀರ್ಣಪ್ರದೇಶದ ಮಧ್ಯದಲ್ಲಿ ನಂದಾದೇವಿ ಶಿಖರವು ರಾರಾಜಿಸುತ್ತಿದೆ! ಅತ್ತ ಸುವಿಖ್ಯಾತ ಬದರೀನಾಥ, ಕೇದಾರನಾಥ ಮೊದಲಾದ ಪವಿತ್ರ ಕ್ಷೇತ್ರಗಳಿವೆ. ಅದರಾಚೆಗೆ, ಅಲ್ಲಿಯೇ ಕೈಲಾಸ ಶಿಖರವುಂಟು. ಮಾನಸ ಸರೋವರವುಂಟು. ಅದೆಂತಹ ದಿವ್ಯ ದೃಶ್ಯ! ಆ ವೈಭವವು ನನಗೆ ಹುಚ್ಚು ಹಿಡಿಸಿತು. ಮೂಕವಿಸ್ಮಿತನಾಗಿ ನೋಡಿದೆ! ನೋಡಿದೆ! ನೋಡಿಯೇ ನೋಡಿದೆ! ಜಗತ್ತಿನ ಬಹುಭಾಗವನ್ನು ಸುತ್ತಿ ಹಿಂದೂ ದೇಶದಲ್ಲೆಲ್ಲ ಅಲೆದು, ಇಷ್ಟು ವರುಷಗಳವರೆಗೆ ನನ್ನ ಪ್ರಾಂತದ ಒಂದು ಮೂಲೆಯಲ್ಲಿ ಇದ್ದುಕೊಂಡು, ಗಿರಿರಾಜನ ಈ ದಿವ್ಯವಾದ ಮಹದೈಶ್ವರ್ಯವನ್ನು ಇಲ್ಲಿಂದ ಒಮ್ಮೆ ಕಾಣಬೇಕೆಂಬ ಬುದ್ಧಿಯು ಈವರೆಗೂ ನನಗೆ ಹುಟ್ಟದೆ ಇದ್ದುದಕ್ಕೆ ನನ್ನ ಮೇಲೆ ನಾನೇ ಮುನಿಸುಗೊಂಡೆ. ಇದನ್ನು ನೋಡುವ ಸೌಭಾಗ್ಯವು ದೊರೆತ ಹಿಂದೀಯರು ಎಷ್ಟು ಜನ! ಇಲ್ಲವೇ ಇಂತಹದೊಂದು ಅನುಪಮ ರಮಣೀಯ ಸ್ಥಳವುಂಟೆಂದು ಕೇಳಿ ತಿಳಿದವರಾದರೂ ಏಸು ಜನ!

ಮನಸ್ಸು ತಣಿವವರೆಗೂ ನಾನು ಅಲ್ಲಿ ನಿಂತೆನು. ದಿನಗಳು ಜಾರಿಹೋದವು ಆದರೆ ಇದೇ ಹೊತ್ತಿಗೆ ಈ ಪವಿತ್ರ ದಿನಗಳು ಇನ್ನು ಬೇಗನೆ ಮುಕ್ತಾಯಗೊಳ್ಳುವವಲ್ಲ, ಎಂಬ ಭೀತಿಯೂ ಏಕೊ ಅಂಕುರಿಸಿತು. ಕೆಲವುಬಾರಿ ಕಾಗದ–ಪತ್ರಗಳ ಹಾಗು ವೃತ್ತಪತ್ರಗಳ ಹೊರೆಯೇ ಬರುತ್ತಿತ್ತು ಅವುಗಳ ವಿಷಯದಲ್ಲಿ ನನಗೆ ತಾತ್ಸಾರವಿತ್ತು. ಪೋಸ್ಟ್ ಆಫೀಸು ೧೦ ಮೈಲು ದೂರವಿತ್ತು. ನನ್ನ ಟಪಾಲು ಅಲ್ಲಿಯೇ ಬಿದ್ದಿರಲೆಂದು ನನಗೆ ಎನಿಸುತ್ತಿತ್ತು. ಆದರೆ ನನ್ನ ಚಟವು ದುರ್ನಿವಾರ್ಯವಾಗಿತ್ತು. ಅಲ್ಲದೆ ದೂರದಿಂದ ಬಂದ ಪ್ರೀತಿಯ ಒಲವಿನ ಓಲೆಯೊಂದು ಅವರಲ್ಲಿ ಇದ್ದಿರಬಹುದೇ ಎಂಬ ಆಶೆಯು ಆ ಆಗಂತುಕ ಟಪಾಲನ್ನು ಬರಮಾಡಿಕೊಳ್ಳುತ್ತಿತ್ತು.

ಆದರೆ, ನನಗೆ ದೊರೆತುದು ಬಲವಾದ ಆಘಾತ! ಹಿಟ್ಲರನು ಆಸ್ಟ್ರಿಯಾದಲ್ಲಿ ನುಗ್ಗಿದ್ದಾನೆ. ವ್ಹಿಯನ್ನಾ ಪಟ್ಟಣದ ರಮ್ಯ ಉದ್ಯಾನಗಳ ಮೇಲಣ ಆ ಉದ್ದಾಮ ಸೈನಿಕರ ಪದಾಘಾತವು ನನಗೆ ಕೇಳಬರುತ್ತದೆ. ಇದು ಬರಲಿರುವ ಅನಾಹೂತ

ಘೋರ ಸಂಗ್ರಾಮದ ಪೀಠಿಕೆಯೋ ! ಅಥವಾ ಪ್ರತ್ಯಕ್ಷ ಯುದ್ಧವೋ! ಖಾಲಿಯು ವಿಸ್ಮೃತಿಯಾಯಿತು. ಹಿಮಾಲಯವು ಮರೆತುಹೋಯಿತು. ವ್ಯಸನ ಪಟ್ಟಿಯಿತು. ಮನಸ್ಸು ಬಿಮ್ಮನೆ ಬಿಗಿದುಕೊಂಡಿತು. ನಾನು ಇಲ್ಲಿ ಒಂದು ಪರ್ವತದ ಮೂಲೆಯಲ್ಲಿ ನಡೆಸಿದ್ದೇನು? ಯುದ್ಧವು ಆರಂಭವಾಗುವ ಹೊತ್ತಿನಲ್ಲಿ, ಅನ್ಯಾಯಕ್ಕೆ ಗೆಲವು ದೊರೆಯುವುದೆಂದು ಕಾಣುತ್ತಿರುವ ಕಾಲದಲ್ಲಿ ಅದನ್ನು ಪ್ರತಿಭಟಿಸುವ ಕರ್ತವ್ಯವು ನನ್ನೆದುರಿಗೆ ಇರುವಾಗ ನಾನು ಇಲ್ಲಿ ! ಆದರೆ, ನಾನೇನು ಮಾಡಬಲ್ಲೆ ?

ಇನ್ನೂ ಒಂದು ಆಘಾತವು ಬಂದಿತು. ಅಲಹಾಬಾದಿನಲ್ಲಿ ಜಾತೀಯ ಗಲಭೆ! ಹಲವರ ತಲೆ ಒಡೆದಿವೆ ! ಕೆಲವರು ಜೀವಕ್ಕೆ ಎರವಾಗಿದ್ದಾರೆ ! ಸ್ವಲ್ಪ ಜನ ಸತ್ತರು ಅಥವಾ ಉಳಿದರು ಎಂಬುದು ಇಲ್ಲಿ ಮಹತ್ತ್ವದ ಪ್ರಶ್ನೆಯಲ್ಲ. ಆದರೆ ಕಾಲಕಾಲಕ್ಕೆ ನಮ್ಮ ಜನಗಳನ್ನು ಅಧಃಪಾತಕ್ಕೆ ಒಯ್ದು ಹೇಸಿಕೆಯನ್ನುಂಟುಮಾಡುವ ಈ ಜಾತೀಯತೆಯ ಹುಚ್ಚು ಮತ್ತು ಮೂರ್ಖತನ, ಇದು ಹೀಗೆಯೆ ಉಳಿಯತಕ್ಕದ್ದೋ ಎಂಬುದು ಮಹತ್ತ್ವದ ಸಮಸ್ಯೆ.

ನಾನು ಹಿಮಾಲಯದಲ್ಲಿ ಇದ್ದರೂ, ನನ್ನ ಮನಸ್ಸಿಗೆ ಶಾಂತಿಯಿಲ್ಲದಾಯಿತು. ನನಗೆ ಕರ್ಮದಿಂದ ಮುಕ್ತಿಯಿಲ್ಲ. ನಾನು ನನ್ನ ವಿಚಾರಚಕ್ರದೊಳಗಿಂದ ಪಾರಾಗುವ ಬಗೆ ಯಾವುದು? ನನ್ನ ಉದ್ವಿಗ್ನತೆಯ ಕೈಯಿಂದ ತಪ್ಪಿಸಿಕೊಳ್ಳುವುದು ಹೇಗೆ? ಲೋಕದ ಲೋಭ, ಮೋಹ ಮತ್ತು ದೌರ್ಜನ್ಯಗಳನ್ನು ನಾವು ಎದುರಿಸಲೇಬೇಕು. ಪ್ರಪಂಚದ ತಾಪತ್ರಯಗಳನ್ನು ಸಹಿಸಲೇಬೇಕು. ಈ ತಾಪತ್ರಯಗಳೊಳಗಿಂದ ಮುಕ್ತನಾಗುವ ದೃಷ್ಟಿಯಿಂದ, ಇಂತಹ ಸ್ಥಳಗಳಲ್ಲಿ ಒಂದು ಸೌಂದರ್ಯಾನುಭೂತಿಯ ಆನಂದವನ್ನು ಪಡೆಯುವುದಕ್ಕೂ ಜೀವನದಲ್ಲಿ ಕೆಲವೊಮ್ಮೆ ಸ್ಥಾನವಿದೆ. ಇದು ಕೇವಲ ರಸಿಕನ ಒಂದು ಕನಸೋ? ಇಲ್ಲವೆ ಇದರಲ್ಲಿ ಏನಾದರೂ ಹುರುಳಿದೆಯೋ ? ಎಂದಾದರೂ ಈ ಕನಸು ನನಸಾಗಬಹುದೇ ?

ನಾನು ಮತ್ತೆ ಸ್ವಲ್ಪ ದಿನ ಖಾಲಿಯಲ್ಲಿ ಇದ್ದೆನು. ಆದರೆ ಯಾವದೊ ಒಂದು ಬಗೆಯ ಅಸಮಾಧಾನವು ನನ್ನ ಮನವನ್ನು ಆವರಿಸಿತು. ಮಾನವನ ಮೂರ್ಖತೆಯ ಸ್ಪರ್ಶವಿಲ್ಲದ, ಅಕೃತ್ರಿಮವಾದ, ಅಗಮ್ಯವಾದ ಆ ಪ್ರಶಾಂತ ಹಿಮಶಿಖರಗಳನ್ನು ನೋಡಿನೋಡಿದ ಹಾಗೆ ಮೆಲ್ಲಗೆ ಮತ್ತೆ ನನ್ನ ಮನಸ್ಸು ತಂಪಾಯಿತು. ಮಾನವನು ಎಂತಹ ಮೂರ್ಖತನವನ್ನೇ ಎಸಗಲಿ, ಅಥವಾ ಇಂದಿನ ಪೀಳಿಗೆಯು ಆತ್ಮಹತ್ಯೆ ಮಾಡಿಕೊಳ್ಳಲಿ, ಇಲ್ಲವೆ ಕ್ರಮವಾಗಿ ಸರ್ವನಾಶಕ್ಕೀಡಾಗಲಿ, ಇಲ್ಲಿ ಮಾತ್ರ ವಸಂತಕಾಲವು ಬಂದೇ ಬರುವುದು. ದೇವದಾರು, ಪೀತದಾರು ವೃಕ್ಷಗಳೊಳಗಿಂದ ಮಂದಾನಿಲವು ತೀಡಿಯೇ ತೀಡುವುದು. ಹಕ್ಕಿಗಳು ಹಾಡಿಯೇ ಹಾಡುವುವು.

ನಾಳೆ ಒಳಿತಾಗಲಿ, ಕೆಡಕಾಗಲಿ— ಕರ್ಮದ್ದೈ ನನಗೆ ಮಾತ್ರ ಮುಕ್ತಿಯಿಲ್ಲ. ಕೆಲವೊಂದು ಕರ್ತವ್ಯದಲ್ಲಿ ತೊಡಗಿರುವುದೇ ಒಂದು ಬಗೆಯ ಮುಕ್ತಿ. ಹಿಮಾಚಲದ ಏಕಾಂತವು ಮನಸ್ಸಿನ ಉದ್ವಿಗ್ನತೆಯನ್ನು ಕಳೆಯಲಾರದು, ಅಥವಾ ಹೃದಯವನ್ನು

ಕಲ್ಲಾಗಿಸಲಾರದು. ಹದಿನಾರು ದಿನಗಳ ಅನುಪಮ ಆನಂದವನ್ನು ಅನುಭವಿಸಿ, ಅಂತೂ ಜೋಲಿಗೆ ಕೊನೆಯ ಪ್ರಣಾಮವನ್ನು ಮಾಡಿದೆ. ಉತ್ತರ ದಿಕ್ಕಿನ ದಿವ್ಯ ಭವ್ಯವಾದ ಶ್ವೇತಶಿಖರಗಳನ್ನು ಮತ್ತೊಮ್ಮೆ ಕಣ್ತಣಿಯೆ ನೋಡಿದೆ. ಏಕೆ, ಏನು, ಎಂಬುದನ್ನು ಬಿಡಿಸಿ ಹೇಳಲಿಕ್ಕಾಗದ ಆಶಾಪೂರ್ಣ ದೃಷ್ಟಿಯಿಂದ ಕೊನೆಯ ದರ್ಶನ ತೆಗೆದುಕೊಂಡೆ. ಅದರಿಂದ ದೊರೆವ ಉದಾತ್ತ ಭಾವವನ್ನು ನನ್ನ ಹೃದಯಭಿತ್ತಿಯಲ್ಲಿ ಕೊರೆದಿಟ್ಟುಕೊಂಡೆ.

ಏಪ್ರಿಲ್ ೭–೨–೧೯೩೮

—ಪಂ. ಜವಾಹರಲಾಲ ನೆಹರು

ಅನುವಾದಕರು —ವೆಂಕಣ್ಣಾಚಾರ್ಯ ಹೋಳೀಕಟ್ಟಿ

## ಅಭ್ಯಸನಗಳು

**ಪ್ರಶ್ನೆಗಳು**—

೧. ಮುಕ್ತಿ ಎಂಬುದರ ಸಾಮಾನ್ಯ ಅರ್ಥವೇನು ?

೨. ಪಂಡಿತ ಜವಾಹರಲಾಲ ನೆಹರೂ ಅವರು ಮುಕ್ತಿಗೆ ಯಾವ ಅರ್ಥವನ್ನು ಕೊಟ್ಟಿದ್ದಾರೆ?

೩. ಎಲ್ಲಿಗಾದರೂ ದೂರ ಹೋಗಬೇಕೆಂಬ ಭಾವನೆಯು ಅವರಲ್ಲಿ ಏಕೆ ಪ್ರಬಲ ವಾಯಿತು ?

೪. ಅದಕ್ಕಾಗಿ ಅವರು ಎಲ್ಲಿಗೆ ಪ್ರಯಾಣ ಮಾಡಿದರು ?

೫. ಅವರು ಏಕಾಕಿಯಾಗಿ ಹೋಗಿದ್ದರೂ ಶಾಂತಿ–ಸಮಾಧಾನಗಳು ಅವರಿಗೆ ಏತರಿಂದ ದೊರೆತವು ?

೬. ಜವಾಹರರ ಮನಸೆಳೆದ ದೃಶ್ಯವಾವುದು ?

೭. ಜವಾಹರರ ಸೌಂದರ್ಯೋಪಾಸನೆಗೆ ಭಂಗ ಬರಲು ಕಾರಣವೇನು ?

**ಭಾಷಾಭ್ಯಾಸ**:—

೧. ನಿರ್ಜನತೆಯನ್ನು ಯಾವ ರೀತಿಯಲ್ಲಿ ವರ್ಣಿಸಲಾಗಿದೆ ?

೨. ಹೊಸದನ್ನು ಹಾರೈಸುತ್ತಿತ್ತು; ಹಿಗ್ಗಿನ ಬೀಡು; ಮೂಕವಿಸ್ಮಿತನಾಗಿ ನೋಡಿದೆನು; ಮನಸ್ಸು ಬಿಮ್ಮನೆ ಬಿಗಿದುಕೊಂಡಿತು ಇವುಗಳ ಔಚಿತ್ಯ ಹೇಳಿರಿ.

೩. ಇಲ್ಲಿಯ ಭಾಷಾಶೈಲಿಯಲ್ಲಿ ಲೇಖಕರ ಭಾವನಾಪ್ರಧಾನ ಸ್ವಭಾವವನ್ನು ನಿದರ್ಶನಕ್ಕೆ ತಂದುಕೊಡುವ ವಾಕ್ಯಗಳನ್ನು ಎತ್ತಿ ಹೇಳಿರಿ.

**ಶಬ್ದವಿಚಾರ**:—

೧. ಕನ್ನಡ ಶಬ್ದ ಹೇಳಿರಿ.
ದುರ್ದೆಸೆ, ಆಗಮನ, ನಿರ್ಗಮನ.

೨. ಕೆಳಗಿನವುಗಳಲ್ಲಿಯ ಭೇದವೇನು ?
೧. ಅಲೆ–ನಡೆ. ತಣಿ–ದಣಿ.
೨. ಕಣ್ಣಿನಿಂದ, ಕಣ್ಣಾರೆ, ಕಣ್ತುಂಬ, ಕಣ್‌ತಣಿಯೆ.

೩. ಕನಸು, ನನಸು, ಎಂಬವು ವಿರುದ್ಧಾರ್ಥ ಸೂಚಿಸುವ ಜೋಡುನುಡಿಗಳು; ಇಂಥ

**ವಾಕ್-ಶಿಕ್ಷಣ:—**

೧. ವರ್ಗದಲ್ಲಿ ಎರಡು ಸಂಗಡ ಮಾಡಿ ಸೌಂದರ್ಯಸೂಚಕ ಸೃಷ್ಟಿ ವಸ್ತುಗಳ ಹೆಸರುಗಳನ್ನು ಹೇಳುವ ಏರ್ಪಾಟುವಿಡಬೇಕು. ಕ್ಲಪ್ತ ಕಾಲದಲ್ಲಿ ತಡವರಿಸದೆ ಯಾವ ಸಂಗಡದವರು ಹೆಚ್ಚು ಹೆಸರು ಹೇಳುವರೆಂಬುದರ ಮೇಲೆ ಸೋಲು ಗೆಲವುಗಳ ತೀರ್ಪು ಕೊಡಬೇಕು.

೨. ಪಂ. ಜವಾಹರಲಾಲರು ಮರಳಿ ಅಲಹಾಬಾದಿಗೆ ಬಂದು ಒಂದು ಸಾರ್ವಜನಿಕ ಸಭೆಯಲ್ಲಿ ಜಾತೀಯ ಗಲಭೆಯನ್ನು ಕುರಿತು ಭಾಷಣ ಮಾಡುತ್ತಿರುವರೆಂದು ಕಲ್ಪಿಸಿ ಒಬ್ಬರು ಭಾಷಣ ಮಾಡಬೇಕು. ಅದಕ್ಕೂ ಮೊದಲು ಸಭೆಯಲ್ಲಿ ಗಲಭೆಯೊಳಗೆ ಆದ ವಿತ್ತಹಾನಿ ಪ್ರಾಣಹಾನಿಯ ಹೃದಯದ್ರಾವಕ ವರ್ಣನೆಗಳನ್ನು ಹಿಂದೂ ಹಾಗೂ ಮುಸಲ್ಮಾನರ ಪರವಾಗಿ ಇಬ್ಬಿಬ್ಬರು ಹೇಳಬೇಕು.

**ಚರ್ಚೆ:—**

'ಜಾತಿ ಅಳಿದರೆ ಧರ್ಮವು ನಷ್ಟವಾಗುವುದಿಲ್ಲ'

**ಬರೆಹ:—**

ರಾಷ್ಟ್ರೀಯ ಐಕ್ಯಕ್ಕೆ ಜಾತಿಭೇದದಿಂದ ಉಂಟಾಗಿರುವ ಆತಂಕಗಳನ್ನು ಹೋಗಲಾಡಿಸುವ ಉಪಾಯಗಳನ್ನು ವಿವರಿಸಿರಿ.

# ೧೬ ಹೆಂಡತಿಯ ಕಾಗದ

[ ರಸಿಕತನದ ಹುಡುಗಾಟದ ಒಂದು ಮಾದರಿ. ಕಥೆಯನ್ನು ಒಮ್ಮೆ ಓದತೊಡಗಿದ ಬಳಿಕ ಅದನ್ನು ಮುಗಿಸುವ ವರೆಗೆ ಕೆಳಗಿಡುವುದಕ್ಕೆ ಮನಸ್ಸಾಗದಂತೆ ವಾಚಕರನ್ನು ಹಾಗೆಯೇ ಮುಂದುಮುಂದಕ್ಕೆ ಸೆಳೆದುಕೊಂಡೊಯ್ವ ಈ ಕಥಾರಚನೆಯೊಳಗಿನ ಕೌಶಲವು ಮನೋಹರವಾಗಿದೆ ]

ಅಂದು ಭಾನುವಾರ! ಭಾನುವಾರ ವಾರಕ್ಕೊಂದು ಸಲ ಹೇಗೆ ಬರುತ್ತದೆಯೋ ಹಾಗೆಯೇ, ರಾಮನಾಥನಿಗೆ ಅವನ ದೇವಿಯಿಂದ ವಾರಕ್ಕೊಂದು ಸಲ ಕಾಗದ ಬರುತ್ತಿತ್ತು. ಅದೂ ಭಾನುವಾರವೇ ಬರುತ್ತಿತ್ತು. ಭಾನುವಾರ ಒಂದು ವೇಳೆ ತಪ್ಪಿದರೂ ತಪ್ಪಬಹುದು! ಆದರೆ ಅವನ ಹೆಂಡತಿಯ ಕಾಗದ ಬರುವುದು ಮಾತ್ರ ತಪ್ಪುತ್ತಿರಲಿಲ್ಲ! ಅದು, ಅವನು ವಾಣಿಯ ಸಂಗಡ ಮಾಡಿಕೊಂಡಿದ್ದ ಕರಾರಿನಲ್ಲಿ ಒಂದು ಮುಖ್ಯವಾದ ಷರತ್ತು. ಈಗ ವಾಣಿ ಮೈಸೂರಿನಲ್ಲಿ ತನ್ನ ತೌರುಮನೆಯಲ್ಲಿದ್ದಳು. ಇವನು ಬೆಂಗಳೂರಿನಲ್ಲಿ, ತನ್ನ ಚಿಕ್ಕಪ್ಪನ ಮನೆಯಲ್ಲಿ ಇದ್ದುಕೊಂಡು, ಮೆಡಿಕಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದ.

ಅಂದು ಭಾನುವಾರ ಎಂದು ಹೇಳಿದೆನಲ್ಲವೆ? ಅಂದು ವಾಣಿಯ ಕಾಗದ ಬರುವ ದಿನ. ರಾಮನಾಥ ಬಹಳ ಆಸೆಯಿಂದ ಕಾದಿದ್ದ. ಅವನ ಆಸೆ ಶನಿವಾರ ರಾತ್ರಿಯಿಂದಲೇ

ಪ್ರಾರಂಭವಾಗಿತ್ತು. ಆ ರಾತ್ರಿ, ನಿದ್ದೆ ಬರುವ ಮೊದಲು, ವಾಣಿಯ ಕಾಗದದ ಯೋಚನೆಯು ಕೊನೆಯದಾಗಿತ್ತು. ಭಾನುವಾರ ಬೆಳಗಿನ ಒಂಬತ್ತು ಗಂಟೆಗೆ ಎದ್ದಾಗ, ಅದೇ ಮೊದಲನೆಯ ಯೋಚನೆ! ಹಿಂದಿನ ವಾರ ವಾಣಿಯ ಕಾಗದ ಬಹಳ ಸಂಕ್ಷೇಪವಾಗಿತ್ತು. ಅದರಲ್ಲಿ "........ ಈಗ ಹೆಚ್ಚು ಬರೆಯೋಕೆ ಪುರಸತ್ತಿಲ್ಲ; ಮುಂದಿನ ವಾರ ದೊಡ್ಡದಾಗಿ ಕಾಗದ ಬರೀತೀನಿ, ಕ್ಷಮಿಸಬೇಕು...." ಎಂದು, ಕೊನೆಯಲ್ಲಿ ಆಸೆ ಹುಟ್ಟಿಸುವ ಒಂದು ಮಾತು ಸೇರಿಸಿದ್ದಳು. ಅವನಿಗೆ ಆ ಕಾಗದ ಓದಿದಾಗ ವಿಪರೀತ ಕೋಪ ಬಂತು. ಆದರೂ, ಕೊನೆಯಲ್ಲಿ ಬರೆದಿದ್ದ ಮಾತುಗಳನ್ನು ಓದಿ, ಕೋಪವನ್ನು ನುಂಗಿಕೊಂಡ. ವಾಣಿ ಚತುರೆ! ರಾಮನಾಥ ಹೇಗೆಹೇಗೋ ಒಂದು ವಾರವನ್ನು ಕಳೆದ. ಅಂದು ಪುನಃ ಭಾನುವಾರ! ವಾಣಿ ಹಿಂದಿನ ಕಾಗದದಲ್ಲಿ ಒಡ್ಡಿದ್ದ ಆಸೆ, ಅವನ ಮನಸ್ಸಿನಲ್ಲಿಯೇ ಸುಳಿದಾಡುತ್ತಿದ್ದುದು, ಅಂದು ಅವನ ಮನಸ್ಸನ್ನೆಲ್ಲಾ ತುಂಬಿತು. ಅಲ್ಲದೆ, ಅವಳ ಆ ಸಂಕ್ಷೇಪವಾದ ಕಾಗದಕ್ಕೆ ಉತ್ತರವಾಗಿ ಹುಚ್ಚಾಪಟ್ಟೆ ರೇಗಿ, ಆರು ಪುಟಗಳಷ್ಟು ಕಾಗದ ಬರೆದಿದ್ದ. ಅದರ ಯೋಚನೆ ಬೇರೆ! ತಾನು ರೇಗಿ ಬರೆದಿದ್ದಕ್ಕೆ ವಾಣಿ ಏನೇನು ಸಮಾಧಾನ ಹೇಳಿ— ಯಾವ ಯಾವ ಪ್ರೇಮದ ಮಾತುಗಳನ್ನು ಬರೆದು, ತನ್ನನ್ನು ಒಲಿಸಿಕೊಳ್ಳುವ ಪ್ರಯತ್ನ ಮಾಡಿದ್ದಾಳೋ!—ಎಂದು ಯೋಚಿಸತೊಡಗಿದ. ಅಂದು ಭಾನುವಾರವಾದ್ದರಿಂದ, ಅಂಚೆಯವನು ಬರುವುದು ಎಂದಿಗಿಂತಲೂ ಸ್ವಲ್ಪ ಹೊತ್ತು. ನೋಡಿ, ಭಾನುವಾರದಲ್ಲಿ ಅದೊಂದೇ ಕುಂದಕ. ಅದಲ್ಲೂ, ಬೇರೆ ಊರಲ್ಲಿರುವ ಪ್ರೇಯಸಿಯಿಂದ, ಪ್ರೇಮದ ಕಾಗದವನ್ನು ನಿರೀಕ್ಷಿಸುವವರ ಗಣನೆಯಲ್ಲಿ, ಆ ಕುಂದಕ ಅಷ್ಟಿಷ್ಟಲ್ಲ! ಮಧ್ಯಾಹ್ನ ಒಂದು ಗಂಟೆಯ ಹೊತ್ತಿಗೆ ಅಂಚೆಯವನು ಬಂದ. ಅವನು ದೂರದಲ್ಲಿದ್ದಾಗಲೇ ರಾಮನಾಥ "ಏನಪ್ಪಾ, ರಾಮಯ್ಯಾ, ಏನಾದರೂ ಉಂಟೆ?" ಎಂದು ಕೇಳಿದ. ಅವನು, "ಇದೆ ಸ್ವಾಮಿ" ಎಂದು ಹೇಳುತ್ತಾ, ದೂರದಲ್ಲಿದ್ದ ಹಾಗೆಯೇ ಒಂದು ಕಾಗದವನ್ನು ಆರಿಸಿ ತೆಗೆದ. ವಾಣಿಯ ಕಾಗದವೇ ಇರಬೇಕು! ವಾಣಿ ಎಷ್ಟು ಒಳ್ಳೆಯವಳು! ರಾಮಯ್ಯ ಹತ್ತಿರ ಬಂದು ಕಾಗದವನ್ನು ಕೈಗೆ ಕೊಟ್ಟ. ಹೌದು—ವಾಣಿಯ ಕಾಗದ! ದಪ್ಪವಾಗಿತ್ತು! ಇನ್ನೇನು, ಕಾಗದವನ್ನು ಒಡೆಯುವದರಲ್ಲಿದ್ದ; ಆ ಸಮಯಕ್ಕೆ ಸರಿಯಾಗಿ, ಗಣೇಶ ಅವಸರವಾಗಿ ಬೈಸಿಕಲ್ ಮೇಲೆ ಬರುತ್ತಿದ್ದವನು ದೂರದಲ್ಲಿಯೇ ಇವನನ್ನು ನೋಡಿ, "ರಾಮನಾಥ!" ಎಂದು ಕೂಗಿದ. ರಾಮನಾಥ ಕಾಗದ ಒಡೆಯುವದನ್ನು ನಿಲ್ಲಿಸಿ, ತಿರುಗಿ ನೋಡಿದ. ಗಣೇಶ ಇವನ ಹತ್ತಿರ ಬಂದು ಇಳಿದು "ಲೋ ಹೊತ್ತಾಗ್ಲಿಲ್ವೇನೋ ಮ್ಯಾಚಿಗೆ! ಇನ್ನೂ ಬಟ್ಟೇನೇ ಹಾಕ್ಕೊಂಡಿಲ್ವಲ್ಲೋ ನೀನು?" ಎಂದು ರಾಮನಾಥ ಹೆಂಡತಿಯ ಕಾಗದದ ನಿರೀಕ್ಷಣೆಯಲ್ಲಿ, ಅಂದು ಇದ್ದ ಕ್ರಿಕೆಟ್ ಮ್ಯಾಚನ್ನೇ ಮರೆತುಬಿಟ್ಟಿದ್ದ! ಸರಿ, ಇನ್ನು ಕಾಗದ ಓದ್ಲೋದು ಹೇಗೆ? ಮ್ಯಾಚಿಗೆ ಹೊತ್ತು ಮೀರಿದೆ; ಅಲ್ಲದೆ ಗಣೇಶ

ಸಮಯವಲ್ಲ. ಬೇಗ ಬೇಗ ಬಟ್ಟೆ ಹಾಕಿಕೊಂಡು ವಾಣಿಯ ಕಾಗದವನ್ನು ಷರಾಯಿ ಜೇಬಿನಲ್ಲಿ ತುರುಕಿಕೊಂಡು, ಸೈಕಲ್ ಹತ್ತಿ, ಗಣೇಶನ ಜೊತೆಯಲ್ಲಿ ಹೊರಟ. ಮ್ಯಾಚಿಗೆ ಬಹಳ ಹೊತ್ತಾಗಿಬಿಟ್ಟಿತು. ಅದರ ಯೋಚನೆ ಬೇರೆ. ಇತ್ತ ಮಧ್ಯೆ ಮಧ್ಯೆ ಗಣೇಶ ನೂರೆಂಟು ಪ್ರಶ್ನೆಗಳಿಗೆ ಪ್ರಾರಂಭಿಸಿದ. ಇವನ ಮನಸ್ಸೋ ವಾಣಿಯ ಕಾಗದದ ಸೆಳೆತದಲ್ಲಿ ಸಿಕ್ಕು ಲಿಬಿಲಿಬಿ ಒದ್ದಾಡುತ್ತಿತ್ತು. ಕಾಗದ ದಪ್ಪವಾಗಿತ್ತು. ಸುಮಾರು ಹತ್ತು ಹನ್ನೆರಡು ಪುಟ ಬರೆದಿರಬಹುದು!— ವಾಣಿ ಬಲು ಒಳ್ಳೆಯ ಹುಡುಗಿ! ಮಾತು ಕೊಟ್ಟಿದ್ದಕ್ಕೆ ಸರಿಯಾಗಿ ಬರೆದಿದ್ದಾಳೆ!— ಏನೇನು ಬರೆದಿದ್ದಾಳೋ! ಅವಳು ಮನಸ್ಸಿಟ್ಟು ಬರೆದರೆ ಬಲು ಸುಖವಾಗಿರುತ್ತೆ ಶೈಲಿ!....ಇನ್ನೇನು ಒಂದು ಮುದುಕಿಯ ಮೇಲೆ ಬಿಟ್ಟುಬಿಡುತ್ತಿದ್ದ ಸೈಕಲ್ಲನ್ನ! ಅನಾಹುತ ಆಗೋ ಮುಂಚೇನೆ ಗಣೇಶ "ಲೋ! ಮುದುಕಿ! ಮುದುಕಿ, ಎಲ್ಲೋ ನೋಡ್ತೀಯೋ" ಎಂದ ದೈವಾಧೀನ! ರಾಮನಾಥ ಹೇಗೋ ತಪ್ಪಿಸಿಕೊಂಡು ಮುಂದಕ್ಕೆ ಹೋದ. ಆದರೆ ಮುಂದಿನ ಚಕ್ರ ಇವನ ಸಮೇತ ಚರಂಡಿಗೆ ಇಳೀತು. ರಾಮನಾಥ "ಇವತ್ತು ಎದ್ದ ಹೊತ್ತು ಚೆನ್ನಾಗಿಲ್ಲ!" ಅಂದುಕೊಂಡು, ಬೈಸಿಕಲ್ಲಿನಿಂದ ಇಳಿದು, ಅದನ್ನು ಪುನಃ ರಸ್ತೆಗೆ ಎಳೆದುಕೊಂಡು ಹತ್ತಿದ. ಗಣೇಶ, "ಏನೋ ರಾಮು, ನಿನ್ನ ಬುದ್ಧಿ ನೆಟ್ಟಗಿರೋ ಹಾಗೆ ಕಾಣೊಲ್ಲ! ಈಗಲೇ ಹೊತ್ತಾಗಿದೆ ಮ್ಯಾಚಿಗೆ! ಈ ಮಧ್ಯೆ ನೀನು ಪೋಲೀಸ ಸ್ಟೇಶನ್ ದಾರಿ ಹಿಡಿದಿದ್ದೆಯಲ್ಲಾ! ಸ್ವಲ್ಪ ರಸ್ತೆಯ ಮೇಲೆ ನಿಗಾ ಇರ್ಲಿ" ಎಂದ.

ರಾಮನಾಥ— "ಏನೂ ಇಲ್ಲಾ ಕಣೋ, ಇವತ್ತು ಊರಿಂದ ದುಡ್ಡು ಬರಬೇಕಾಗಿತ್ತು, ಬರಲಿಲ್ಲ— ಯೋಚಿಸ್ತಾ ಇದ್ದೆ ಅಷ್ಟೆ!" ಎಂದ.

"ಗುಗ್ಗೂ! ಇವತ್ತು ಭಾನುವಾರಾ ಅಲ್ವೇನೋ!"

"ಓ! ಇವತ್ತು ಭಾನು—ವಾ—ರಾನೇ! ನಾನು ಶನಿವಾರಾಂತಿದ್ದೆ; ಸರಿ, ಹುಂ!" ಸುಳ್ಳಿಗೆ ತಡೆಯುಂಟೆ!

ಇಬ್ಬರೂ ಸೆಂಟ್ರಲ್ ಕಾಲೇಜು ತಲುಪಿದರು ಅಲ್ಲೇ ಆಟ ಇದ್ದದ್ದು. ಆಗಲೇ ಪ್ರಾರಂಭವಾಗಿಬಿಟ್ಟಿತ್ತು. ಇವರು ಹೊತ್ತಾಗಿ ಬಂದದ್ದಕ್ಕೆ ಎಲ್ಲರೂ ಆಕ್ಷೇಪಿಸುವವರೇ! ಗಣೇಶ, ತಾನು ಹೊತ್ತಾಗಿ ಬಂದದ್ದಕ್ಕೆ ರಾಮನಾಥನ ಮೇಲೆ ತಪ್ಪು ಹೊರಿಸಿದ ರಾಮನಾಥ ಏನು ಹೇಳಬೇಕು? ವಾಣಿಯ ಕಾಗದದ ಮೇಲೆ ತಪ್ಪು ಹಾಕಬೇಕು. ಛೆ! ಪಾಪ, ಆ ಕಾಗದ ಏನು ಮಾಡೀತು? ಅಂಚೆಯವನು ಹೊತ್ತಾಗಿ ಬಂದ, ಅದು ಅವನ ತಪ್ಪಲ್ಲ; ಭಾನುವಾರ ಒಂದೇ "ಡೆಲಿವರಿ," ಮಧ್ಯಾಹ್ನದ ಮೇಲೆ. ತಪ್ಪು ಅಂಚೆಯ ಇಲಾಖೆಯದು! ತರ್ಕವೇನೋ ಸರಿಯಾಗಿದೆ! ಆದರೆ ಕೇಳುವ

ರಾಮನಾಥನ ಎದುರು ಪಕ್ಷದವರು ಆಡುತ್ತಿದ್ದರು. ಆದ್ದರಿಂದ ಇವರು ಹೋದೊಡನೆಯೇ ಅಂಗಿ ಬಿಚ್ಚಿ "ಫೀಲ್ಡ್" (field)ಗೆ ಇಳಿಯಬೇಕಾಗಿ ಬಂತು. ಇಬ್ಬರೂ ಹೋಗಿ ತಮ್ಮ ತಮ್ಮ ಸ್ಥಳದಲ್ಲಿ ನಿಂತುಕೊಂಡರು. ಕಾಗದವೇನೋ ರಾಮನಾಥನ ಷರಾಯಿ ಜೇಬಿನಲ್ಲೇ ಇತ್ತು. ಅದರ ದೆಸೆಯಿಂದ ಅವನ ಮನಸ್ಸು ಗಾಳದ ಕೊಕ್ಕೆಯನ್ನು ಕಚ್ಚಿದ ಮೀನಿನ ಹಾಗೆ ಆಗಿತ್ತು! ಅದರ ವಿಷಯವಾಗಿ ಯೋಚಿಸತೊಡಗಿದ. ಯೋಚನೆಗೂ ಭಂಗ ಬರುತ್ತಿತ್ತು! ಮಧ್ಯೆ ಮಧ್ಯೆ ಇವನ ಕಡೆ ಚೆಂಡು ಬಂದು, ತೋಳ ಕುರಿಮಂದೇನ ಚದುರಿಸಿದ ಹಾಗೆ, ಇವನ ಯೋಚನೆಗಳನ್ನೆಲ್ಲಾ ಚದುರಿಸಿಬಿಡುತ್ತಿತ್ತು. ಭಂಗ ಬಂದ ಹಾಗೆಲ್ಲಾ, ಇವನು ಪುನಃ ಪುನಃ ಮೊದಲಿನಿಂದ ಪ್ರಾರಂಭಿಸುತ್ತಿದ್ದ! "ಏನೋ ಈಸಲ ಪೂರಾ ಬರೆದಿರೋ ಹಾಗೆ ಕಾಣುತ್ತೆ!—ನಾನು ಆರು ಪೇಜು ಬರೆದಿದ್ದೆ!—ವಾಣಿ ಕಡೆಯ ಪಕ್ಷ ಹತ್ತು ಪೇಜಾದರೂ ಬರೆದಿರಬೇಕು! ಹತ್ತು ಪೇಜುಗಳಲ್ಲಿ ಅದೆಷ್ಟು ಪ್ರೇಮವನ್ನು ಸೇದಿದ್ದಾಳೋ! ಈ ಸಲ ಏನು ಹೆಸರಿಟ್ಟು ಕರೆದಿದ್ದಾಳೋ ನನ್ನ;—ಹೋದ ಸಲ "ಸುಂದರಾ" ಎಂದು ಬರೆದಿದ್ದಳು! ಈ ಸಲ ಏನಿರ.... "....ಯೋಚನೆಗೆ ದೊಡ ಭಂಗ ಬಂತು. ಇದ್ದಕ್ಕಿದ್ದ ಹಾಗೆಯೇ ಅವನ ಕಡೆಯವರೆಲ್ಲಾ ಒಂದೇ ಕಂಠದಿಂದ "ರಾಮನಾಥ!" ಎಂದು ಕೂಗಿದರು. ಆದರೆ ರಾಮನಾಥ ಭೂಮಿಯ ಮೇಲೆ ಇರಲಿಲ್ಲ; ಆಕಾಶದಲ್ಲಿ ಮಂಟಪ ಕಟ್ಟುತ್ತಿದ್ದ! ಅಷ್ಟು ಜನರ ಒಂದೇ ಕೂಗಿನಿಂದ ಆ ಮಂಟಪ ಒಂದೇ ಸಲಕ್ಕೆ ಕಳಚಿ, ಭೂಮಿಗೆ ಬಿದ್ದಂತಾಯಿತು! ಅವನು ಚೆಂಡನ್ನು ಹಿಡಿಯಲಿಲ್ಲ. ಸುತ್ತುಮುತ್ತಲಿಂದ ಎಲ್ಲಾ "ಸ್ಟಡೀ ರಾಮು!— ಸ್ಟಡೀ ರಾಮನಾಥ್!" ಎಂಬ ಕೂಗು ಕೇಳಿಬಂತು. ರಾಮನಾಥ, ಅಂದು ಏಕೋ ತನ್ನ ಗ್ರಹಚಾರ ಚೆನ್ನಾಗಿಲ್ಲ ಅಂದುಕೊಂಡ. ಸ್ವಲ್ಪ ಹೊತ್ತಾದ ಮೇಲೆ ಅವನ "ಕ್ಯಾಪ್ಟನ್" (captain) ಚೆಂಡನ್ನು ಅವನ ಕೈಗೆ ಕೊಟ್ಟು "ಬೋಲ್" (bowl) ಮಾಡಹೇಳಿದ. "ಕ್ಯಾಚ್" ಬಿಟ್ಟದ್ದೇ ಅವನ ಮನಸ್ಸು ಭೂಮಿಗೆ ಇಳಿದುಹೋಗಿತ್ತು. "ಬೋಲಿಂಗ್" ನಲ್ಲೂ ಅವನ ಅದೃಷ್ಟ ಜಳ್ಳಾಯಿತು! ಒಂದು "ವಿಕೆಟ್ಟೂ" ದೊರಕಲಿಲ್ಲ!

ನಾಲ್ಕು ಗಂಟೆಯ ಹೊತ್ತಿಗೆ "ಟೀ" (Tea) ಗೋಸ್ಕರ ಆಟ ನಿಲ್ಲಿಸಿದರು. ಎಲ್ಲರೂ "ಟೀ" ಗೆ ಕುಳಿತರು. ಅವರೆಲ್ಲಾ ಅಲ್ಲಿ ಕುಳಿತಿದ್ದಾಗ, ರಾಮನಾಥನಿಗೆ ತಾನು ಎಲ್ಲಾದರೂ ಗಲಾಟೆ ಇಲ್ಲದ ಸ್ಥಳಕ್ಕೆ ಹೋಗಿ ವಾಣಿಯ ಕಾಗದವನ್ನು ಓದೋಣವೆನ್ನಿಸಿತು. ಆದರೆ ಎಲ್ಲಿ ಹೋಗುವುದು? ಅಲ್ಲದೆ 'ಟೀ' ತಪ್ಪಿ ಹೋಗುತ್ತೆ. ಬಿಟ್ಟಿ ಟೀ ಬಲುರುಚಿ! ಎಲ್ಲಿ ನೋಡಿದರೂ ಗಡಿಬಿಡಿ! ಹೊರಗಿನ ಗಡಿಬಿಡಿಗಿಂತ ಅವನ ಒಳಗಿನ ಗಡಿಬಿಡಿಯೇ ಅಸಾಧ್ಯವಾಗಿತ್ತು! ಹತ್ತು ಪೇಜು ಪ್ರೇಮದ ಕಾಗದವನ್ನು ಓದುತ್ತಾ ಇರಬೇಕಾದರೆ, ಇನ್ನೊಬ್ಬರ ಸುಳುವಿರಕೂಡದು! ಮುಖ್ಯವಾಗಿ ಮನಸ್ಸಿನಲ್ಲಿ ಶಾಂತಿಯಿರಬೇಕು. ಎಷ್ಟು ಸಲ ಓದಿದರೂ

ಯಾರೂ ಅಡ್ಡಿ ಬರುವವರಿಲ್ಲ—ಎಂಬ ಭಾವನೆಯಿದ್ದರೆ, ಆಗ ಪ್ರೇಮಪತ್ರದ ರುಚಿ ಹೆಚ್ಚುತ್ತದೆ. ಇಲ್ಲಿ ವಾಣಿಯ ಪತ್ರವನ್ನು ಓದುವುದಕ್ಕೆ ಈಗ ಎಷ್ಟು ಮಾತ್ರವೂ ಸಮಯವಲ್ಲ! ಆಟ ಮುಗಿದ ಕೂಡಲೆ, ಎಲ್ಲಾದರೂ ಒಂದು ಏಕಾಂತವಾದ ಸ್ಥಳಕ್ಕೆ ಹೋಗಿ, ನಿಧಾನವಾಗಿ, ತಡೆತಡೆದು—ಒಂದೊಂದು ಮಾತನ್ನು ಸವಿಯುತ್ತ ಓದ ಬೇಕು. ಅದೇ ಸರಿ! ..ಮನಸ್ಸಿನಲ್ಲಿ ಹೀಗೆ ತೀರ್ಮಾನಿಸಿಕೊಂಡು, ರಾಮನಾಥ ಎಲ್ಲರೊಡನೆ ತಾನೂ "ಟೀ" ಗೆ ಕುಳಿತ. ಜೊತೆಯವರೆಲ್ಲಾ ಇವನನ್ನು ಹಾಸ್ಯ ಮಾಡತೊಡಗಿದರು. ಗಣೇಶ, "ಇವತ್ತು ರಾಮೂಗೆ ಗ್ರಹಣ ಹಿಡಿದಿದೆ!" ಅಂದ ನಾಣಿ, "ಪಿಶಾಚಿ ಹಿಡಿಯೋದು ಬಾಕಿ" ಅಂದ. ವಿಜು (ಅವನ 'ಕ್ಯಾಪ್ಟನ್')— "ಏನೋ ರಾಮು 'ಕ್ಯಾಚ್' ಬಂದಾಗ ಎಲ್ನೋಡ್ತಿದ್ಯೋ?" ಎಂದು ಕೇಳಿದ. ಗೋಪಾಲೈಂಗಾರಿ, "ಆಕಾಶದಲ್ಲಿ ನಕ್ಷತ್ರ ಎಣಿಸ್ತಿದ್ದ ಕಣ್ರೋ!" ಎಂದ. ಕೃಷ್ಣ—"ಇಲ್ಲಾ ಇಲ್ಲಾ! ಸ್ವರಾಜ್ಯ ಯಾವಾಗ ಕೊಡ್ತಾರೋ ಅಂತ ಯೋಚಿಸ್ತಿದ್ದ! ಅಲ್ವೇನೋ ರಾಮು?" ಎಂದು ಕೇಳಿದ. ಹೀಗೆ, ಒಬ್ಬೊಬ್ಬರದು ಒಂದೊಂದು ತರಹ ಟೀಕೆ. ರಾಮನಾಥ ಒಂದು ಮಾತೂ ಆಡಲಿಲ್ಲ; ಒಳಗೊಳಗೇ ನಗುತ್ತಿದ್ದ. ಅವನ ಗುಟ್ಟು ಅವನಲ್ಲಿಯೇ ಇತ್ತು. ಏನು ಮಾಡುವುದು! ಇವತ್ತು ವಾಣಿ ಕಾಗದ ಬಂದು, ಅದನ್ನು ಅವನು ಇನ್ನೂ ಓದಲು ಆಗದೇ ಇದ್ದದ್ದೇ ಇಷ್ಟು ಅನಾಹುತಕ್ಕೆ ಕಾರಣವಾಯಿತು! ಏನು ಬೇಕಾದರೂ ಆಗಲಿ! ಅವಳ ಕಾಗದ,— ಪ್ರೇಮದ ಕಾಗದ—ಹತ್ತು ಪುಟಗಳ ಕಾಗದ ಅವನ ಷರಾಯಿ ಜೇಬಿನಲ್ಲಿ ಭದ್ರವಾಗಿತ್ತು? ಆದರೇನು? ಅವಳ ಪ್ರೇಮಭರಿತವಾದ ಕಾಗದವನ್ನು ಅಷ್ಟು ಸಮೀಪದಲ್ಲಿ ಇಟ್ಟುಕೊಂಡೂ, ಅದನ್ನು ಓದಿ—ಸವಿದು—ತೃಪ್ತಿಪಡಲಾಗ ದಿರುವುದು, ಎಂತಹ ದುರದೃಷ್ಟ! ಎಷ್ಟು ಸಂಕಟಕರ!

"ಟೀ" ಮುಗಿಯಿತು. ರಾಮನಾಥನ ಕಡೆಯವರ ಆಟಕ್ಕೆ ಪ್ರಾರಂಭ ವಾಯಿತು. ರಾಮನಾಥನಿಗೆ ಅದರ ಕಡೆ ಗಮನವೇ ಇಲ್ಲ. ಅವನಿಗೆ ವಾಣಿಯ ಕಾಗದ ಕಣ್ಣು ಮುಂದೆ ಕುಣಿಯುತ್ತಿದ್ದಂತೆ ತೋರಿತು. ಒಂದುಸಲ, ಅದು ಕಾಗದ ವಾಗಿ ಕಾಣುವುದು! ಒಂದುಸಲ ವಾಣಿಯಾಗಿ ಕಾಣುವುದು! ಅವನ ಕಡೆಯವರು ಆಡುತ್ತಿದ್ದಾಗ, ಅವನಿಗೆ ಓದುವುದಕ್ಕೆ ಸ್ವಲ್ಪ ಪುರಸತ್ತು ಇತ್ತು; ಆದರೆ ಓದಲು ಪ್ರಾರಂಭಿಸುವುದಕ್ಕೆ ಹೆದರಿದ. ಸುತ್ತುಮುತ್ತಲೂ ಸ್ನೇಹಿತರಿದ್ದಾರೆ! ದೂರ ಎಲ್ಲಾ ದರೂ ಹೋಗಿ ಓದಬೇಕು. ಅರ್ಧ ಓದಿದಾಗ ಇವನ ಆಟದ ಸರ್ತಿ ಬಂದುಬಿಟ್ಟರೆ! ಪ್ರೇಮದ ಕಾಗದವನ್ನು ಅರ್ಧ ಓದಿ ಬಿಡುವುದು, ಒಣಗಿದ ಗಂಟಲಲ್ಲಿ ಅನ್ನದ ತುತ್ತು ಸಿಕ್ಕಿಕೊಂಡ ಹಾಗೆ! ನುಂಗುವುದಕ್ಕೆ ಆಗುವುದಿಲ್ಲ ಉಗುಳುವುದಕ್ಕೆ ಮನಸ್ಸಿಲ್ಲ; ಬಲು ಸಂಕಟಕ್ಕೆ ಕಾರಣ! ಇಷ್ಟು ಹೊತ್ತೇ ತಡೆದಿದ್ದನಂತೆ; ಇನ್ನು ಸ್ವಲ್ಪ ಹೊತ್ತು ಕಾಯಲಾರನೆ? ಅಷ್ಟರಲ್ಲಿ ಏನು ಕೊಳ್ಳೆ ಹೋಗುವುದು? ಕಾಯುವುದೇ ಸರಿ.— ಕಾದ. ಓದುವುದಕ್ಕಾಗದಿದ್ದರೆ ಹೋಗಲಿ. ಕಾಗದವನು ಮುಟ್ಟುತಾ ಇರೋಣ

ದಲ್ಲ!—ಅದಕ್ಕೆ ಏನು ಅಡ್ಡಿ? ಏನೂ ಇಲ್ಲ. ಷರಾಯಿ ಜೇಬಿನಲ್ಲಿ ಕೈಹಾಕಿ, ಬೆರಳಿನಿಂದ ಕಾಗದವನ್ನು ಮೆಲ್ಲನೆ ಸವರತೊಡಗಿದ! ಆಹಾ!—ಏನು ಸುಖವೋ ಅವನಿಗೆ!

? ? ? ? ?

ರಾಮನಾಥ, ಆಟದ ಸರ್ತಿಯಲ್ಲಿ ಹನ್ನೊಂದನೆಯವನಾಗಿದ್ದ—ಅಂದರೆ ಕೊನೆಯವನಾಗಿದ್ದ. ಅವನ ದುರದೃಷ್ಟದ ಗಾಳಿ ಅವನ ಕಡೆಯವರಿಗೂ ತಟ್ಟಿತ್ತೆಂದು ಕಾಣುತ್ತೆ! ಮೊದಲು ಹೋದವರೆಲ್ಲಾ, ಒಬ್ಬೊಬ್ಬರಾಗಿ, ಬೇಗಬೇಗ "ಔಟ" (out) ಆಗಿ ಹಿಂದಿರುಗಿದರು. ರಾಮನಾಥನ ಸರ್ತಿ ಬೇಗ ಬಂತು. ಇವನ ಕಡೆಯವರು ಗೆಲ್ಲುವುದಕ್ಕೆ ಇನ್ನೂ ಮೂವತ್ತು "ರನ್ಸ್" (runs) ಬೇಕಾಗಿತ್ತು. ಇವರೇ ಕಡೆಯ ಆಟಗಾರರು! ಇವನ ಕಡೆಯವರ ಭರವಸೆಯೆಲ್ಲಾ, ಈಗ ಇವನ ಮೇಲೆ ಇತ್ತು. ರಾಮನಾಥನಿಗಾದರೋ, ತನ್ನ ಮೇಲಿದ್ದ ಜವಾಬ್ದಾರೀ ಭಾರಕ್ಕಿಂತ, ತನ್ನ ಷರಾಯಿ ಜೇಬಿನಲ್ಲಿದ್ದ ವಾಣಿಯ ಕಾಗದದ ಭಾರ ಹೆಚ್ಚಾಗಿದ್ದಂತೆ ತೋರಿತು. ಈ ಎರಡು ಭಾರಗಳನ್ನು ಹೊತ್ತು, ಆದಷ್ಟು ದೃಢ ಪ್ರತಿಜ್ಞೆಯಿಂದ ಹೊರಟ. ತನ್ನಿಂದ ತನ್ನ ಕಡೆಯವರಿಗೆ ಸೋಲಾಗಬಾರದೆಂದುಕೊಂಡ. ಅರ್ಧ ಗಂಟೆ ತನ್ನ ಮನಸ್ಸು ವಾಣಿಯ ಕಾಗದವನ್ನು ಮರೆತಿದ್ದರೆ ಆದೀತಲ್ಲಾ! ಎಂದುಕೊಂಡ. ವಾಣಿಯ ಕಾಗದ ಇವತ್ತು ಬರದೆ ಇದ್ದಿದ್ದರೂ ಚೆನ್ನಾಗಿತ್ತು—ಎಂದು ತೋರಿತು. ಇಲ್ಲ—ಇಲ್ಲ. ಬಂದದ್ದು ಸರಿ; ಆದರೆ ಸ್ವಲ್ಪ ಮುಂಚೆ ಬರಬೇಕಾಗಿತ್ತು. ಮುಂಚೆ ಹೇಗೆ ಬಂದೀತು? ಇವತ್ತು ಭಾನುವಾರ! ಹುಂ! ಹಾಳು ಭಾನುವಾರ!—ಹೀಗೆಲ್ಲಾ ಯೋಚಿಸುತ್ತಾ ಹೋಗಿ, ಆಟಕ್ಕೆ ಪ್ರಾರಂಭಿಸಿದ. ಆಟ ನಿಧಾನವಾಗಿ ಸಾಗಿತು. ಕಾಲು ಗಂಟೆ, ಹಾಗೂ ಹೀಗೂ ಕಷ್ಟಪಟ್ಟುಕೊಂಡು ಆಡಿದರು. ಅಷ್ಟುಹೊತ್ತಿಗೆ ಗೆಲ್ಲುವುದಕ್ಕೆ ಇನ್ನೂ ಹತ್ತು "ರನ್ಸ್" ಬೇಕಾಗಿತ್ತು. ಎಲ್ಲರೂ "ಸ್ಟೆಡೀ ರಾಮೂ!—ಸ್ಟೆಡೀ ರಾಮೂ!" ಎಂದು ಎಚ್ಚರಿಕೆ ಕೊಡಲಾರಂಭಿಸಿದರು. ರಾಮನಾಥನ ಮನಸ್ಸಿಗೆ ವಿಶ್ವಪ್ರಯತ್ನ. ಒಂದು ಕಡೆ, ಜಯಲಕ್ಷ್ಮಿ ಸಿಕ್ಕೂ ಸಿಲುಕದ ಹಾಗೆ ಆಟವಾಡಿಸುತ್ತಿದ್ದಾಳೆ! ಇನ್ನೊಂದು ಕಡೆ, ಪ್ರೇಯಸಿಯ ಕಾಗದ! "ಇತ್ತ ದರಿ—ಅತ್ತ ಪುಲಿ!" ಅಂದಳಂತೆ ಕೌರವನ ರಾಜ್ಯಲಕ್ಷ್ಮಿ ಇಲ್ಲಿಯೂ, ಸ್ವಲ್ಪ ಹಾಗೇ ಆಗಿತ್ತು! ಆ ಸಂಕಟ ಅನಭವಿಸಿದವನೇ ಬಲ್ಲ! ಶತ್ರುವಿಗೂ ಬೇಡ! ಆಟ ಇನ್ನೂ ಸ್ವಲ್ಪ ಮುಂದೆ ಸಾಗಿತು. ಗೆಲ್ಲುವದಕ್ಕೆ ಇನ್ನೂ ನಾಲ್ಕು "ರನ್ಸ್" ಬೇಕಾಗಿದೆ ಅನ್ನಬೇಕಾದರೆ, ರಾಮನಾಥನ ಜೊತೆಯವನು ಆಡುತ್ತಿದ್ದ. ಈ ಒಂದೆರಡು ಲಕ್ಷಣಗಳಲ್ಲಿ, ವಾಣಿಯ ಕಾಗದ ರಾಮನಾಥನನ್ನು ಕೆಣಕತೊಡಗಿತು; ಯೋಚಿಸಲಾರಂಭಿಸಿದ. "ಇನ್ನು ಮೇಲೆ ವಾಣಿಯ ಕಾಗದ ಸೋಮವಾರ ಬರೋ ಹಾಗೆ ಏರ್ಪಾಡು ಮಾಡ್ಬೇಕು. ಸಾಕು! ಈ ಹಾಳು ಭಾನುವಾರದ ಸಹ......" ........ಯೋಚನೆ ಕತ್ತರಿಸಿದ ಹಾಗಾಯಿತು. ಇದ್ದಕ್ಕಿದ್ದ ಹಾಗೆಯೇ ಇವನ ಜೊತೆಯವನು ಚೆಂಡನ್ನು ಒಂದು ಪಕ್ಕಕ್ಕೆ ಹೊಡೆದು, ಇವನ ಕಡೆಗೆ ಓಡಿಬಂದೇ

ಬಿಟ್ಟ. ರಾಮನಾಥ ಆ ಓಟಕ್ಕೆ ಸಿದ್ಧವಾಗಿರಲಿಲ್ಲ. ಆದರೂ ಜೊತೆಯವನು ಓಡಿ ಬಂದದ್ದರಿಂದ ಇವನೂ ಅನನಿದ್ದ ಸ್ಥಳದ ಕಡೆಗೆ ಓಡಲೇಬೇಕಾಗಿ ಬಂತು. ಓಡಿದ. ಆದರೆ ಸಮಯಕ್ಕೆ ಸರಿಯಾಗಿ ಓಡದೆ ಇದ್ದದ್ದರಿಂದ "ರನ್ ಔಟ" (Run out) ಆಗಿಬಿಟ್ಟ. ಎಂತಹ ದುರದೃಷ್ಟ! ಇವನ ಕಡೆಯವರು ನಾಲ್ಕು "ರನ್ಸ್" ನಾಲದೆ ಸೋತುಬಿಟ್ಟರು. ಜಯಲಕ್ಷ್ಮಿ ಜಾರಿಕೊಂಡಳು. ಎಲ್ಲರೂ ಇವನ ಕಡೆಯವರು ನೋಡಿದ್ದಕ್ಕೆ ಇವನ ಮೇಲೆ ತಪ್ಪು ಹೊರಿಸಿದರು. ಮೇಲೆ, ತನ್ನದು—ಎಂದು ಒಪ್ಪಿ ಕೊಂಡರೂ, ರಾಮನಾಥ ತನ್ನ ಮನಸ್ಸಿನಲ್ಲಿಯೇ ಮೆಲ್ಲಗೆ ಆ ತಪ್ಪನ್ನು ವಾಣಿಯ ಕಾಗದದ ಮೇಲೆ ಹೊರಿಸಿದ.

ಆಟ ಮುಗಿದ ಮೇಲೆ ರಾಮನಾಥ, ಮುಖ ತೊಳೆದುಕೊಂಡು ಅಂಗಿತೊಟ್ಟು ಕೊಂಡು, ಮನೆಗೆ ಹೊರಡಲು ಸಿದ್ಧನಾದ. ಮನೆಯೇ ಸರಿಯಾದ ಸ್ಥಳ—ವಾಣಿಯ ಕಾಗದವನ್ನು ಓದುವುದಕ್ಕೆ. ಅದಕ್ಕೆ ಸಂಶಯವಿಲ್ಲ. ತನ್ನ ಕೊಠಡಿಯಲ್ಲಿ ಬಾಗಿಲು ಮುಚ್ಚಿ, ಅಗಳಿ ಹಾಕಿಕೊಂಡು ಕುಳಿತರೆ—ಸೊಳ್ಳೆ ಒಂದು ಬಿಟ್ಟು—ಇನ್ನಾರ ಅಡ್ಡಿಯೂ ಇಲ್ಲ. ಮನೆಯೇ ಸರಿ. ಆದರೆ ಮನುಷ್ಯನ ಯೋಚನೆಗಳೆಲ್ಲಾ ಅಷ್ಟು ಸರಾಗವಾಗಿ ನೆರವೇರುತ್ತವೆಯೇ? ಅದು ಶುದ್ಧ ಭ್ರಮೆ! ಗಣೇಶ ಬಂದು "ಲೋ ರಾಮು, ಇವತ್ತು 'ಅಪೆರಾ ಹೌಸ್' ನಲ್ಲಿ 'ದಿ ಸೋಲ್ ಆಫ್ ಲಿಲಿತ್' ಅಂತೆ ಕಣೋ ಬಾರೋ ಹೋಗಿ ನೋಡೋಣ," ಅಂದ. ರಾಮನಾಥ ಹೋಗಲು ಮನಸ್ಸಿಲ್ಲದೆ, 'ಬೇಡಾ ಕಣೋ, ಬಹಳ ಆಯಾಸವಾಗಿದೆ, ಮನೆಗೆ ಹೋಗ್ಬೇಕು," ಅಂದ. ಗಣೇಶ—"ಇಲ್ಲಮ್ಮಾ, ಬಾ ಹೋಗೋಣ. ನಿಧಾನವಾಗಿ ಹೋಗೋಣ; ಇನ್ನೂ ಅರ್ಧ ಗಂಟೆ. ಆ 'ಪಿಕ್ಚರ್' ನೋಡ್ಬೇಕಮ್ಮಾ ನೀನು!" ಎಂದು ಪುಸಲಾ ಯಿಸಿದ.

"ನನ್ನ ಹತ್ತಿರ ದುಡ್ಡಿಲ್ವಲ್ಲೋ" ಎಂದ ರಾಮನಾಥ. ಅದು ಮಾತ್ರ ಸುಳ್ಳು! ಜೇಬಿನಲ್ಲಿ ಐದು ರೂಪಾಯಿ ನೋಟು ಇತ್ತು. ಆದರೆ ಅವನಿಗೆ, ತನ್ನ ಗುಟ್ಟನ್ನು ಬಿಟ್ಟುಕೊಡುವುದಕ್ಕಿಂತ ಸುಳ್ಳು ಹೇಳುವುದೇ ಮೇಲಾಗಿ ತೋರಿತು. ಗಣೇಶ, ತಾನು ಕೊಡುವುದಾಗಿ ಹೇಳಿದ. ಇನ್ನು ನಿರ್ವಾಹವಿಲ್ಲ! "ಹುಂ ನಡಿ" ಎಂದು ಹೊರಟ. ನೋಟದ ಪ್ರಾರಂಭಕ್ಕೆ ಇನ್ನೂ ಹತ್ತು ನಿಮಿಷ ಇದೆ ಅನ್ನುವ ಹಾಗೆಯೇ ಇಬ್ಬರೂ "ಸಿನಿಮಾ" ಮಂದಿರವನ್ನು ಸೇರಿದರು.

ಇನ್ನೂ ಹತ್ತು ನಿಮಿಷಗಳಿವೆಯಲ್ಲಾ! ಅಷ್ಟರಲ್ಲಿ ವಾಣಿಯ ಕಾಗದವನ್ನು ಓದಲಾಗುವುದಿಲ್ಲವೇ? ಇಲ್ಲ!—ಆಗುವುದಿಲ್ಲ! ಆ ಗಲಾಟೆಯಲ್ಲಿ ಹೊರಗೆ ನಿಂತು ಓದುವುದು ಹೇಗೆ? ಅಲ್ಲದೆ, ಗಣೇಶನನ್ನೊಬ್ಬನನ್ನೇ ಬಿಟ್ಟಿರುವುದು ಸರಿಯಲ್ಲ. ಅವನೇ ಟಿಕೇಟಿಗೆ ದುಡ್ಡು ಕೊಟ್ಟಿದ್ದಾನೆ. ಕಾಗದವಾದರೋ ಹತ್ತು ಪುಟಗಳಿಗೆ ಕಡಿಮೆ ಇರಲಾರದು. ಪುಟಕ್ಕೆ ಒಂದು ನಿಮಿಷ ಎಷ್ಟು ಮಾತ್ರಕ್ಕೂ ಸಾಲದು! ಔತಣದ ಊಟವನ್ನು ಅವಸರದಲ್ಲಿ ನುಂಗುವುದೇ? ನುಂಗಿದರೂ ರಸಾನುಭವವೆಲ್ಲಿ?

ಜನಗಳ ನೂಕುನುಗ್ಗಲು ಹೆಚ್ಚಾಗಿದೆ. ಮುಂಚೆಯೇ ಒಳಗೆ ಹೋಗದಿದ್ದರೆ, ಆ ಮೇಲೆ ಸರಿಯಾದ ಸ್ಥಳ ಸಿಕ್ಕುವಂತೆ ತೋರಲಿಲ್ಲ. ವಾಣಿಯ ಕಾಗದವನ್ನು ಓದುವುದಕ್ಕೆ ಇದು ಸಮಯವಲ್ಲ! ರಾಮನಾಥ ಆ ಯೋಚನೆ ಬಿಟ್ಟ.

ಇಬ್ಬರೂ ಒಳಗೆ ಹೋಗಿ ಕುಳಿತುಕೊಂಡರು. ಜನ ಒಳಗೆ ಕಿಕ್ಕಿರಿದು ತುಂಬಿದ್ದರು. ಹತ್ತು ನಿಮಿಷ, ವಾಣಿಯ ಕಾಗದವನ್ನು ಓದುವುದಕ್ಕೆ ಸಾಲದಾಗಿ ತೋರಿದರೂ, ಕಳೆಯುವುದಕ್ಕೆ ವಿಪರೀತವಾಗಿ ಕಂಡಿತು. ಆ ಮಾತು ಈ ಮಾತಿನಲ್ಲಿ, ಆ ಹತ್ತು ನಿಮಿಷಗಳನ್ನು ಕಳೆದರು ಆರೂವರೆಗೆ ಸರಿಯಾಗಿ ನೋಟ ಪ್ರಾರಂಭವಾಯಿತು. ಅದಕ್ಕೆ ಮುಂಚೆಯೇ ವಾಣಿಯ ಕಾಗದ, ರಾಮನಾಥನ ಮನಸ್ಸನ್ನು ಸೆಳೆಯುವುದಕ್ಕೆ ತೊಡಗಿತು. ಇನ್ನೂ ಷರಾಯಿ ಜೇಬಿನಲ್ಲೇ ಇದ್ದ ಆ ಕಾಗದವನ್ನು ಮೆಲ್ಲಗೆ ಕೈಗೆ ತೆಗೆದುಕೊಂಡು ಹಾಗೆಯೇ ತೂಗಲಾರಂಭಿಸಿದ; ಭಾರವಾಗಿತ್ತು. ಹತ್ತುಪುಟಗಳ ಕಾಗದ ಭಾರವಾಗಿರದೆ ಮತ್ತೇನು? ಆದರೆ ರಾಮನಾಥನಿಗೆ, ಆ ಕಾಗದದ ಭಾರದ ಜೊತೆಗೆ, ತನ್ನ ರಾಣಿಯ ಪ್ರೇಮದ ಭಾರವೂ ಸೇರಿದ್ದ ಹಾಗೆ ತೋರಿತು. ಅಷ್ಟೇ ಅಲ್ಲ, ಕಾಗದದ ಭಾರಕ್ಕಿಂತ ಪ್ರೇಮವೇ ಮೀರಿ ತೂಗುತ್ತಿದ್ದಂತೆ ಭಾವಿಸಿಕೊಂಡ.

ಆ ದಿನದ ಚಿತ್ರ ಬಹಳ ಚೆನ್ನಾಗಿತ್ತು. ಮನದಲ್ಲಿ ನಾಟುವ ನೋಟಗಳು; ಹೃದಯವನ್ನು ಕರಗಿಸುವ ಸನ್ನಿವೇಶಗಳು. ಗಣೇಶ ಆಹಾಕ್ಯಾಗಿ ಅದನ್ನೇ ನೋಡುತ್ತಿದ್ದ. ರಾಮನಾಥನ ಗಮನವು ಮಾತ್ರ ಬೇರೆ ಕಡೆ ಇತ್ತು. ಅವನ ಮನಸ್ಸಿನ ಪರದೆಯ ಮೇಲೆ, ಅವನ ಜ್ಞಾಪಕವು ಬೇರೇ ದೃಶ್ಯಗಳನ್ನು ಹರಡುತ್ತಿತ್ತು. ಆ ದೃಶ್ಯಗಳಲ್ಲಿ ವಾಣಿ ನಾಯಕಿ! ರಾಮನಾಥ ನಾಯಕ! ಒಂದೊಂದು ಚಿತ್ರವನ್ನೂ ತಡೆತಡೆದು ನೋಡತೊಡಗಿದ. ಎಂತಹ ಸುಖದ ಆಟಗಳು ಅವು! ಎಂತಹ ಮೈಮರೆಸುವ ಸನ್ನಿವೇಶಗಳು! ತಾನು ವಾಣಿಯೊಡನೆ ಆಡಿದ ಆಟಗಳನ್ನೂ ಸರಸ ವಿನೋದಗಳನ್ನೂ ಮನದಲ್ಲಿ ಪುನಃ ಪುನಃ ಆಡಿದ. ವಾಣಿಯ ಒನಪು–ಒಯ್ಯಾರ ಬಿಂಕ–ಬಿನ್ನಾಣಗಳ ನೆನಪು ಪ್ರವಾಹದಂತೆ ಅವನ ಚಿತ್ತವನ್ನು ತೇಲಿಸಿತು. ಯೋಚನೆಯ ತರಂಗಗಳು ಏಳತೊಡಗಿದವು........ "ಕಾಗದದಲ್ಲಿ ಇನ್ನೆಷ್ಟು ಪ್ರೇಮವನ್ನು ತುಂಬಿದ್ದಾಳೋ!—ಏನೇನು ಬಿನ್ನಾಣದ ನುಡಿಗಳನ್ನು ಬರೆದಿದ್ದಾಳೋ!–ಇವತ್ತು ಹಾಳು ಭಾನುವಾರ! ಸಾಲದುದಕ್ಕೆ ಆಟ ಬೇರೆ! ಇಲ್ಲದೆ ಇದ್ದಿದ್ದರೆ, ಕಾಗದ ಓದಿ ಎಷ್ಟೋ ಹೊತ್ತಾಗುತ್ತಿತ್ತು!—ನನ್ನ ಕೋಪದ ಕಾಗದಕ್ಕೆ ಸರಿಯಾಗಿ, ಅವಳೂ ಕೋಪದಿಂದ ಬರೆದಿದ್ದಾಳೋ ಏನೋ–ಹತ್ತು ಪೇಜು ತುಂಬಬೇಕಲ್ಲ. ಕೋಪದಿಂದ ಬರೆದಿದ್ದರೆ ಏನಾಯ್ತು? ಅದೂ ಚೆನ್ನಾಗೇ ಇರುತ್ತೆ. ಕೋಪದ ವಾಣಿ, ವಾಣಿಯ ಕೋಪದ ಕಾಗದ—ಎರಡೂ ಸೊಗಸು!....ವಾಣಿಯದು ಪ್ರೇಮದಲ್ಲಿ ಹೇಗೆ ದೊಡ್ಡ ಮಾರ್ಗವೋ, ಕೋಪದಲ್ಲೂ ಹಾಗೆಯೇ! ಕೋಪ ಮೂಗಿನ ತುದೀಲೇ ಇರುತ್ತೆ— ಅವಳಿಗೆ. ಕೋಪದಲ್ಲಿ ಮಾತಾಡುವಾಗಲೂ, ಅವಳ ಧ್ವನಿಯ ಸಂಗೀತ ಕೆಡೊಲ್ಲ."–

ಅವಳ ಧ್ವನಿಯು ನೆನಪಾದೊಡನೆಯೇ, ಅದು ಮೆಲ್ಲನೆ, ಅವನ ಹೃದಯದ ಅಂತರಾಳದಲ್ಲಿ ಅತಿಸೂಕ್ಷ್ಮವಾದ ಒಂದು ತಂತಿಯನ್ನು ಮೀಟಿದ ಹಾಗಾಯಿತು.... "ವಾಣಿ ವೀಣೆ ನುಡಿಸೋದರಲ್ಲಿ ಈಚೆಗೆ ಇನ್ನೆಷ್ಟು ಕಲಿತಿದ್ದಾಳೋ ? ಕಲ್ಯಾಣಿ ಅವಳ ರಾಗ. ಭೈರವಿ? ಅದೂ ಪರವಾ ಇಲ್ಲ. ಅವಳ ಕಂಠ ಯಾವ ರಾಗಕ್ಕಾದರೂ ಕಳೆಕಟ್ಟುತ್ತೆ. ಮುಂದಿನ ಸಲ ಮೈಸೂರಿಗೆ ಹೋದಾಗ, ಎಲ್ಲಾ ರಾಗಾನೂ ಮೊದಲಿನಿಂದ ಕೇಳಬೇಕು. ಆದರೆ, ಅವರ ಮನೇಲಿ, ಅವಳನ್ನು ಕೂರಿಸಿಕೊಂಡು ವೀಣೆ ಕೇಳೋಕೆ ಸ್ವಲ್ಪಾನೂ ಅನುಕೂಲವಿಲ್ಲ. ನಿರಾತಂಕವಾಗಿರೋ ಹಾಗೆ ಒಂದು ಕೊಠಡಿ ಇಲ್ಲ—ಮುಖ್ಯವಾಗಿ. ಏನು ಮನೆಯೋ! ಅವರಾದರೂ ಏನು ಮಾಡಿಯಾರು? ಬಾಡಿಗೆಮನೆ! ಇನ್ನು ಹೇಗೆ ಇದ್ದೀತು ? ಊರಲ್ಲಿ ನಮ್ಮನೆ ಆದರೆ ಸರಿ. ಮಹಡಿ ಮೇಲಿನ ಕೊಠಡಿಯೆಲ್ಲಾ ನಮ್ಮದೇ ಆಗಿರುತ್ತೆ. ನಮ್ಮೂರಿಗೆ ಬಂದರೆ, ಅವಳ ವೀಣೆಗೆ ಬಿಡುವಿಲ್ಲ. ವಾಣಿ!—ವೀಣೆ! ವಾಣಿಯಿಂದ ವೀಣೆಗೆ ಕಳೆ! ವೀಣೆಯಿಂದ ವಾಣಿಗೆ ಕಳೆ!.... ಎಪ್ರಿಲ ೧೫ಕ್ಕೆ ರಜ ಬರುತ್ತೆ. ಹದಿನಾರು—ಮೈಸೂರು:— ಇಪ್ಪತ್ತು ಅಥವಾ ಇಪ್ಪತ್ತೆರಡಕ್ಕೆ—ವಾಣೀನೂ ಕರಕೊಂಡು— ನಮ್ಮೂರು...."

ಹೀಗೆ ನಡೆದದ್ದು— ನಡೆಯದೆ ಇದ್ದದ್ದು—ನಡೆಯಬೇಕಾದ್ದು, ಎಲ್ಲವನ್ನೂ ಕಲ್ಪಿಸಿಕೊಳ್ಳಲಾರಂಭಿಸಿದ. ಅವನ ಮನವನ್ನು ಹೊಕ್ಕು, ಅವನ ಕಲ್ಪನೆಯ ಚಿತ್ರಗಳನ್ನು ನೋಡುವುದಕ್ಕೆ ಸಾಧ್ಯವಾಗದಿದ್ದರೆ ಆ ಪ್ರೇಮಿಗಳ ಎಣೆಯಿಲ್ಲದ ಪ್ರಣಯದ ಪರಾಕಾಷ್ಠತೆಯನ್ನು ನೋಡಬಹುದಾಗಿತ್ತು

* * * *

ಎಂಟೂವರೆ ಗಂಟೆ ಹೊತ್ತಿಗೆ ನೋಟ ಮುಗಿಯಿತು. ಇಬ್ಬರೂ ಸೈಕಲ್ ಹತ್ತಿ ಮನೆಯ ಕಡೆ ಹೊರಟರು. ದುರದೃಷ್ಟ ಇನ್ನೂ ರಾಮನಾಥನ ಬೆನ್ನು ಬಿಟ್ಟಿರಲಿಲ್ಲ. ಅರ್ಧ ದಾರಿ ಬಂದಿದ್ದರು ; ಆಗ ರಾಮನಾಥನ ಸೈಕಲ್ಲಿನ ಮುಂದುಗಡೆಯ ಚಕ್ರ "ರಿಸ್" ಎಂದು ಶಬ್ದ ಮಾಡಿತು. ಅವನು "ಇದೇನು ಬಂತಪ್ಪಾ !" ಎಂದು ಗೊಣಗುತ್ತ ಇಳಿದ. ಗಣೇಶನೂ ಇಳಿದ. ನೋಡಿದರೆ, ಮೊಳೆಸಹಿತವಾಗಿದ್ದ ಒಂದು ಕುದುರೆಯ ಲಾಳ, "ಟಾಯರ್" (Tyre) ನಲ್ಲಿ ಚೆನ್ನಾಗಿ ಊರಿ ಹೋಗಿದೆ. ರಾಮನಾಥ "ಅಯ್ಯೋ, ನನ್ನ ಪುಣ್ಯವೇ" ಎಂದು ಅದನ್ನು ಕಿತ್ತು, ಅದರ ಮೇಲೆ ಸಿಟ್ಟಿನಿಂದ ಉಗುಳಿ, ಚರಂಡಿಗೆ ಎಸೆದು, ಗಣೇಶನನ್ನು ಕುರಿತು,— "ಗಣೇಶಾ, ಇವತ್ತೆಲ್ಲಾ ಹೀಗೆ ಆಗಿದೆ ನೋಡು !.... ನನ್ನ ಗ್ರಹಚಾರ ! ಬೆಳಗಿನಿಂದಾ ಒಂದಲ್ಲಾ ಒಂದು ಕಿರಿಕಿರಿ !" ಎಂದ.

"ಯಾಕೋ ?" ಎಂದು ಕೇಳಿದ ಗಣೇಶ.

"ನಮ್ಮ ಮನೀ ಹತ್ತಿರ ಒಂದು ಕರೀ ಬೆಕ್ಕು ಸುಳಿದಾಡುತ್ತೆ, ನೋಡು. ಅದು ಎಂದೂ ಇಲ್ಲದ್ದು ಇವತ್ತು ಬೆಳಿಗ್ಗೆ, ನಾನು ಕಣ್ಣು ಬಿಡೋ ಹೊತ್ತಿಗೆ ಸರಿಯಾಗಿ ನನ್ನ ರೂಮಿನ ಕಿಟಕೀಲಿ ಕೂತಿತ್ತು— ನೋಡು ! ನೋಡಿದ ಕೂಡ್ಲೆ

ಮುಸುಕು ಹಾಕಿಕೊಂಡೆ. ಆದರೆ ಏನ್ಮಾಡೋದು ?—ಮೊದಲೇ ನೋಡ್ಬಿಟ್ಟಿದ್ದೆ. ಇಷ್ಟಕ್ಕೆಲ್ಲಾ ಆ ಹಾಳು ಬೆಕ್ಕು ಕಾರಣ, ನೋಡು ! ಒಂದಲ್ಲಾ ಒಂದು ದಿನ ಅದನ್ನು ಸಾಯಿಸಿಬಿಡ್ತೀನಿ— ಬಿಡೊಲ್ಲ ! ಕೊಂದ್ರೆ ಪಾಪ ಅಂತಾರೆ; ಪಾಪವೋ ಪುಣ್ಯವೋ! ಆ ಕಾಣದ ಪಾಪಾನಾದರೂ ಕಟ್ಕೋಬಹುದು—ಈ ಕಂಡ ಗ್ರಹಚಾರಾ ಸಹಿಸೋದು ಕಷ್ಟ.''

"ಪಾಪ ! ಅದೇನ್ಮಾಡತ್ತೋ ? ನೀನೊಬ್ಬ ಹುಚ್ಚ !''

"ನಾನೂ ನಂಬ್ತಿರ್ಲಿಲ್ಲ ಕಣೋ. ಆದರೆ ಇವತ್ತಿನಿಂದ ನಂಬಿಕೆಗೆ ಪ್ರಾರಂಭವಾಗಿದೆ.''

ಇಬ್ಬರೂ ಸೈಕಲ್ಲುಗಳನ್ನು ತಳ್ಳಿಕೊಂಡು, ನಡೆಯುತ್ತ ಹೊರಟರು. ರಾಮನಾಥ ಮನೆಗೆ ಬಂದಾಗ ಒಂಭತ್ತೂವರೆಯಾಗಿ ಬಿಟ್ಟಿತು. ಮನೆಯಲ್ಲಿ ಎಲ್ಲರದೂ ಊಟವಾಗಿ, ಇವನ ಚಿಕ್ಕಮ್ಮ ಇವನಿಗಾಗಿ ಕಾದಿದ್ದರು. ರಾಮನಾಥ ಬೇಗ ಬೇಗ ಬಟ್ಟೆ ಬಿಚ್ಚಿ, ಪಂಚೆ ಉಟ್ಟುಕೊಂಡು—ಕೈಕಾಲು ಮುಖ ತೊಳೆದುಕೊಂಡು ಊಟಕ್ಕೆ ಕುಳಿತ. ಹಸಿವಾಗಿತ್ತು; ಬೇಗ ಬೇಗ ಊಟ ಮಾಡಿ ತನ್ನ ಕೊಠಡಿಗೆ ಬಂದ. ಊಟದಿಂದ ಹೊಟ್ಟೆಯ ಹಸಿವು ಅಡಗಿತು ಅಷ್ಟೆ; ಹೃದಯದ ಹಸಿವು ನೂರ್ಮಡಿಯಾಯಿತು. ತನ್ನ ಕೊಠಡಿಗೆ ಬಂದವನೇ ಬಾಗಿಲು ಮುಚ್ಚಿ ಅಗಣಿ ಹಾಕಿದ. ಇನ್ನು ಯಾರ ಆತಂಕವೂ ಇಲ್ಲ; ಯಾರೂ ಬರುವ ಹಾಗಿಲ್ಲ. ಜೇಬಿನಿಂದ ವಾಣಿಯ ಕಾಗದವನ್ನು ತೆಗೆದುಕೊಂಡು—"ಈಜೀ ಚೇರ್'' (easy chair) ಮೇಲೆ ಕುಳಿತುಕೊಂಡ. ಅವನ ಮುಖ ಉಲ್ಲಾಸದಿಂದ ಅರಳಿತು, ಪ್ರೇಯಸಿಯ ಪ್ರೇಮವನ್ನು ಎದುರುಗೊಳ್ಳಲು ಅವನ ಹೃದಯ ತೆರೆದ ಹಾಗಾಯಿತು. ಆಸೆ ಕಣ್ಣುಗಳಲ್ಲಿ ಒಟ್ಟುಗೂಡಿತು. ಕಾಗದವನ್ನು ಒಡೆಯತೊಡಗಿದ. ಅವನ ದೇಹದಲ್ಲಿ ರಕ್ತವು "ವಾಣೀ ! ವಾಣೀ !'' ಎಂದು ಹಾಡುತ್ತ ಹರಿಯಲಾರಂಭಿಸಿತು. ಈಗ, ಒಂದೊಂದು ಪುಟವನ್ನೂ, ಹತ್ತು ಹತ್ತು ನಿಮಿಷ ಓದಬಹುದು. ಕೇಳುವವರು ಯಾರು ? ಅವಳ ಪತ್ರದ ಪ್ರೇಮವನ್ನು ಸವಿಯುತ್ತ, ರಾತ್ರಿಯನ್ನೆಲ್ಲಾ ಕಳೆಯಬಹುದು. ತಡೆಯುವವರಾರು ? "ನನ್ನ ವಾಣಿಯ ಕಾಗದ !'' ಎಂದು ಮೆಲ್ಲನೆ ಹೇಳುತ್ತ, ಕಾಗದವನ್ನು ಹೊರಕ್ಕೆ ತೆಗೆದ. ಬಹಳ ಪುಟಗಳಿದ್ದವು. ಅವುಗಳ ಮಡಿಕೆಯನ್ನು ಬಿಚ್ಚಿದ. ಮೊದಲನೆಯ ಹಾಳೆ ಬರೀದು !.... ಇದೇನು ! ಎರಡನೇ ಹಾಳೆ ? ಅದೂ ಬರೀದು !—ಮೂರನೆಯದೋ ? ಅದೂ ಬರೀದೇ ! ನಾಲ್ಕು–ಐದು–ಆರು–ಏನೂ ಇಲ್ಲ ! ತಿರುವಿ ಹಾಕಿದ ಹಾಗೆಲ್ಲಾ ಬರೀ ಹಾಳೆಗಳೇ ಬರುತ್ತಿದೆಯಲ್ಲಾ ! ಇದೇನು ಹುಚ್ಚು ವಾಣೀಗೆ ! ಅದೆಷ್ಟು ಬರೀ ಹಾಳೆಗಳನ್ನಿಟ್ಟಿದ್ದಾಳೆ!...." ರಾಮನಾಥನ ಮೈ ತಣ್ಣಗಾಯಿತು; ಹುಬ್ಬುಗಂಟಾಯಿತು. ಹಾಳೆಗಳನ್ನು ತಿರುವಿ ಹಾಕಿದ. ಏಳು–ಎಂಟು–ಒಂಭತ್ತು, ಎಲ್ಲಾ ಬರೀ ಹಾಳೆಗಳೇ !

ಹತ್ತನೆಯದು? ಅದೇ ಕೊನೆಯದು. ಅದರಲ್ಲಿ ಏನೋ ಬರೆದಿರುವ ಹಾಗಿದೆ! ಏನೆಂದು ಬರೆದಿದ್ದಾಳೆ?

"....ನಿಮ್ಮ ಕೋಪದ ಕಾಗದ ತಲ್ಪಿತು. ಆದರೆ ಸಾಲದು ಕೋಪ! ಈ ದೊಡ್ಡ ಕಾಗದ ನೋಡಿದಾಗ, ನಿಮಗೆ ಎಷ್ಟು ಸಿಟ್ಟು ಬಂತೋ ಅದನ್ನೆಲ್ಲಾ ತುಂಬಿ, ದಯವಿಟ್ಟು ಇನ್ನೊಂದು ಕಾಗದ ದಯಪಾಲಿಸಬೇಕು.

ನಿಮ್ಮ **ವಾಣಿ**"

## ಅಭ್ಯಸನಗಳು

**ಪ್ರಶ್ನೆಗಳು**:—

೧. ವಾಣಿಯ ಕಾಗದ ನೋಡಿ ನಿರಾಶೆಯುಂಟಾದರೂ ಅದರಲ್ಲಿ ಮತ್ತೆ ಆಶೆ ಹುಟ್ಟಿಸುವ ಸಂಗತಿ ಏನಿತ್ತು?

೨. ಕಾಗದ ಒಡೆಯುವದಕ್ಕೆ ಉಂಟಾದ ಅಡ್ಡಿ ಏನು?

೩. ದಾರಿಯಲ್ಲಿ ಮುದುಕಿಯ ಮೇಲೆ ಸೈಕಲ್ಲು ಹೋಗಬಹುದಿತ್ತು. ಏಕೆ?

೪. ರಾಮನಾಥನು ತನ್ನ ಅಸ್ವಸ್ಥತೆಯ ಗುಟ್ಟು ಹೇಳಲಾರದೆ ಅದಕ್ಕೆ ಮತ್ತೊಂದು ಯಾವ ಬಣ್ಣ ಬಳೆದನು?

೫. ಮನಸ್ಸಿಲ್ಲದೆ ಮಾಡುವ ಕೆಲಸದಿಂದ ನಗಿಸಿಕೊಳ್ಳಬೇಕಾಗುತ್ತದೆ— ಎಂಬುದಕ್ಕೆ ರಾಮನಾಥನ ಕೃತಿಯ ಉದಾಹರಣ ಹೇಳಿರಿ.

೬. ಈ ಕಥೆಯೊಳಗಿನ ಮುಖ್ಯ ಕಥಾಭಾಗವು ಎಷ್ಟು?

**ಭಾಷಾಭ್ಯಾಸ**:—

೧. ಕಥಾವಸ್ತುವು ಅತ್ಯಲ್ಪವಿದ್ದರೂ ಕಥೆಯನ್ನು ಹೇಳುವ ರಸಿಕನು ಅದನ್ನು ಆಕರ್ಷಕವಾಗುವಂತೆ ಹೇಳಿ ಬೆಳೆಯಿಸಬಲ್ಲನು ಎಂಬುದಕ್ಕೆ ಉತ್ಕೃಷ್ಟವಾದ ಮಾದರಿಯು ಇಲ್ಲಿದೆ.

i) ಕಥೆಯಲ್ಲಿ ವಾಚಕರ ಉತ್ಸುಕತೆಯನ್ನು ಹೆಚ್ಚಿಸುವ ಹಂಚಿಕೆಗಳನ್ನು ನೋಡಿರಿ.

ii) ಒಂದೊಂದೇ ಅಡ್ಡಿಯನ್ನು ಒಡ್ಡುತ್ತ ರಾಮನಾಥನಿಗೆ ವಾಣಿಯ ಕಾಗದವನ್ನು ಓದಲಿಕ್ಕಾಗದೆ ಕುತೂಹಲವು ಮಾತ್ರ ಹೆಚ್ಚುತ್ತ ಹೋಗುವಂತೆ ಮಾಡಿದುದನ್ನು ನಿರೀಕ್ಷಿಸಿರಿ

iii) ಪ್ರತಿಯೊಂದು ಬಾರಿ ಬಂದ ವಿಘ್ನವು ಸ್ವಾಭಾವಿಕವೆನಿಸುವಂತೆ ಇರುವುದರಿಂದ ಅದು ಸುಳ್ಳು ಎನಿಸುವುದಿಲ್ಲ.

ಪತ್ರ ಕೈಗೆ ಬಂದಾಗಲೇ ಗೆಳೆಯ ಗಣೇಶನು ಬಂದುದು, ಮ್ಯಾಚಿನ ಗಡಿಬಿಡಿ ಇತ್ಯಾದಿ ಬಂದ ಅನಿವಾರ್ಯ ಅಡೆತಡೆಗಳನ್ನು ವಿಮರ್ಶಿಸಿರಿ.

೨. ಕಥೆಯ ಉತ್ಸುಕತೆಯು ಕ್ರಮಕ್ರಮವಾಗಿ ಏರುತ್ತ ಶಿಖರಕ್ಕೆ ಮುಟ್ಟುವ ಸ್ಥಳವು ಯಾವುದು?

೩. i) ಅವನ ಮನಸ್ಸು ಗಾಳದ ಕೊಕ್ಕೆಗೆ ಸಿಕ್ಕಿದ ಮೀನಿನ ಹಾಗೆ ಆಗಿತ್ತು.

ii) ಒಣಗಿದ ಗಂಟಲಲ್ಲಿ ತುತ್ತು ಸಿಕ್ಕಿಕೊಂಡ ಹಾಗೆ.

ಈ ವಾಕ್ಯಗಳನ್ನು ಸ್ಪಷ್ಟೀಕರಿಸಿರಿ.

**ಶಬ್ದವಿಚಾರ:—**

೧. ಭಾನುವಾರ, ರವಿವಾರ ಹೀಗೆ ವಾರಗಳಿಗೆ ಒಂದಕ್ಕಿಂತ ಹೆಚ್ಚಾಗಿರುವ ಹೆಸರುಗಳನ್ನು ಆಯಾ ವಾರಗಳ ಮುಂದೆ ಬರೆಯಿರಿ.

೨. ಜಾತಿ, ಗಾಳಿ, ತೂಕ, ಹಾಡು ಈ ಮಾತುಗಳಲ್ಲಿ ಇರುವ ಬೇರೆ ಬೇರೆ ಅರ್ಥವನ್ನು ವ್ಯಕ್ತಪಡಿಸುವ ಒಂದೊಂದು ವಾಕ್ಯ ಬರೆಯಿರಿ.

**ವಾಕ್-ಶಿಕ್ಷಣ:—**

೧. ಚಹಕ್ಕೆ ಕುಳಿತಾಗ ರಾಮನಾಥನ ಮೇಲೆ ಆದ ಟೀಕೆಯ ಸುರಿಮಳೆಯನ್ನು ಅಭಿನಯಿಸಿರಿ.

೨. ರಾಮನಾಥನ ಭಾವವನ್ನು ನಿಮ್ಮ ಮುಖದಲ್ಲಿ ತಂದು ತೋರಿಸಿರಿ.

**ಚರ್ಚೆ:—**

೧. ರಾಮನಾಥನು ಒಂದು ಅನಿಷ್ಟ ಬೆಕ್ಕಿನ ಮೋರೆ ನೋಡಿದ್ದರಿಂದ ಪೀಕಲಾಟಗಳು ಬಂದವು.

೨. ಆಟಗುಳಿತನವು ಅಭ್ಯಾಸಕ್ಕೆ ಹಾನಿಕರ.

**ಬರೆಹ:—**

ಶಹರದಲ್ಲಿ ತನ್ನ ಗೆಳೆಯರ ಒಡನಾಟದಲ್ಲಿ, ಆಟ-ನೋಟಗಳಲ್ಲಿ ಕಾಗದ ಬರೆಯದೆ ಇರುವ ಮಗನನ್ನು ನೆನೆದುಕೊಂಡು ಹಳ್ಳಿಯಲ್ಲಿ ಕೊರಗುತ್ತಿರುವ ತಾಯಿಯನ್ನು ವರ್ಣಿಸಿರಿ.

# ೧೭. ಬಾಳುವ ಹದ

[ ಪೊಳ್ಳನೆ ನಗುವುದು ಮನಸ್ಸು ಇನ್ನೂ ಪಕ್ವವಾಗದಿರುವ ಕುರುಹು. ಆದರೆ ನಗುವೇ ಬಾರದಿರುವದು ಮನುಷ್ಯತ್ವಕ್ಕೆ ಎರವಾದ ಸಂದೇಹವನ್ನು ಉಂಟುಮಾಡುತ್ತದೆ. ಮಂದಸ್ಮಿತವು ಅಳಿದುಹೋಗಿದ್ದರೆ ಮುದಿತನವು ಆವರಿಸಿ ಶರೀರ ಮತ್ತು ಮನಸ್ಸುಗಳೆರಡರ ಆರೋಗ್ಯವು ಕೆಡುತ್ತಿದೆಯೆಂದು ಊಹಿಸಲು ಅಡ್ಡಿಯಿಲ್ಲ. ಮುಗುಳುನಗೆಯು ಆತ್ಮಾನಂದದ ನಿದರ್ಶಕ. ಇದು ಸುಸಂಸ್ಕಾರಗಳಿಂದ ಹೃದಯವನ್ನು ಕೃಷಿಮಾಡಿದುದರ ಫಲವಾಗಿ ಲಭಿಸತಕ್ಕ ಅಮೃತ. ಬಾಳಿನಲ್ಲಿ ತಮ್ಮ ಕುಕರ್ಮಗಳಿಂದ ನಗೆಯ ಮುಗುಳು ಕಮರಿಹೋಗದಂತೆ ಜೋಕೆಯಿಂದ ನಡೆವುದೇ ಒಂದು ಯೋಗ. ಈ ಯೋಗಸಾಧನೆಯ ಕೆಲವೊಂದು ಸೂಚನೆಗಳನ್ನು 'ಬಾಳುವ ಹದ'ದಲ್ಲಿ ಸಂಗ್ರಹಿಸಿ ಕೊಡಲಾಗಿದೆ. ]

ಗಾಳಿ ಹಾರಿಸುತ್ತ ಹೋಗಲು ನೀನೊಂದು ರವದಿ ಅಲ್ಲ. ವಿಚಾರ ವಿವೇಕಗಳಿಂದ ಯುಕ್ತವಾದ ದೂರದೃಷ್ಟಿಯ ಬಲದಿಂದ ಎಣಿಕೆ ಹಾಕು. ಹಾಗೆ ನಡೆ. ನಡುನಡುವೆ ಸುಖ-ಸಂಕಥಾ-ವಿನೋದಗಳಿಲ್ಲದ ಬಾಳು, ಆಸರು ಬೇಸರು ಬಳಲಿಕೆಯಾದಾಗ ಉಡುಪಿಯುವರ ಶಾಂತಿಸದನಗಳಿಲ್ಲದ ದೂರಿನ ದಾರಿಯಂತೆ. ನಾನಾ ವಿಷಯಗಳ ಜ್ಞಾನವು, ಬಗೆಬಗೆಯ ಹಿಗ್ಗಿಗೆ, ಸೊಗಸಿಗೆ ಕಾರಣವಾಗುತ್ತದೆ.

ಉತ್ತಮ ಜೀವನದ ಒಂದು ದಿನವು ಹಿಂದಿನವರ ಅಂತರಾತ್ಮಗಳೊಡನೆ ಮಾತನಾಡು ವಲ್ಲಿ ಹೋಗಲಿ. ಏಕೆಂದರೆ ಅವರ ಉದ್ಗ್ರಂಥಗಳು ನಮ್ಮನ್ನು ಉದ್ಧರಿಸುತ್ತವೆ; ನಮ್ಮನ್ನು ಉತ್ತಮರನ್ನಾಗಿ ಮಾಡುತ್ತವೆ. ತಿಳಿದು ಬಾಳು. ಬಾಳಿ ತಿಳಿ. ತಿಳಿಗನ್ನಡಿಯಲ್ಲಿ ನಿನ್ನನ್ನು ನೋಡುವ ಎದೆಗಾರನಾಗು. ಇನ್ನೊಂದು ದಿನವನ್ನು ಇಂದಿನವರೊಡನೆ ಕಳೆ. ಲೋಕದಲ್ಲಿ ಎಲ್ಲೆಡೆಗಳಲ್ಲಿ ಹಂಚಿರುವ ಒಳ್ಳಿತನ್ನೂ, ಚೆಲುವನ್ನೂ ಕಂಡುಹಿಡಿ. ಇದೆಲ್ಲವೂ ಯಾವ ಒಂದೇ ನಾಡಿನ ಗುತ್ತಿಗೆಯಲ್ಲ. ಲೋಕದ ತಂದೆಯು ಎಲ್ಲರಿಗೂ ಇದನ್ನು ಹಂಚಿಕೊಟ್ಟಿದ್ದಾನೆ. ಕೆಲವು ವಿಷಯ ಗಳಲ್ಲಿ ಕನಿಷ್ಠರ ಪಾಲಿಗೇ ಹೆಚ್ಚಿನ ಸೊಗಸೂ, ಹಿಗ್ಗೂ ಬಂದುದು ಕಂಡುಬರುತ್ತದೆ. ಮಗುದೊಂದು ದಿನವನ್ನು ನಿನಗಾಗಿಯೇ ಕಾದಿಡು.ಏಕೆಂದರೆ ತನ್ನ ತಾನು ಅರಿವುದೇ ಜೀವನದ ಗುರಿ. ಇದುವೆ ಶಾಂತಿ ಸುಖದ ಹಾದಿ. ಹೊರಗಣ ಇಡಿ ಜಗತ್ತೇ ಸೈಯೆಂದರೂ ಸೈಪು (ಶಾಂತಿ) ಸಿಕ್ಕದು. ನಿನ್ನ ಒಳ್ಳೆಯ ಅಂತರಾತ್ಮನು ಸೈಯೆಂದಾಗಲೆ ಸೈಪು. ಸೈಪು ಇಲ್ಲದೆ ಸುಖವಿಲ್ಲ. ನೀನಿಂತು ಹಿಂದು, ಇಂದು ಮತ್ತು ಮುಂದುಗಳ ಎಣಿಕೆಯಿಂದ ಬದುಕು. ಇಂತು ಎಣಿಕೆಯಿಂದ— 'ಬದುಕು ಮಾಡು' ವವನ ಭಾಗ್ಯಕ್ಕೆ ಎಣೆಯಿಲ್ಲ.

## ತಿಳಿದು ನಡೆ ಹಟಬೇಡ

ಹಟವೆಂದರೆ, ದುರಾಗ್ರಹ; ದುರಾಗ್ರಹವು ಮನಸ್ಸಿನ ಮಲ. ಅಡ್ಡದಾರಿ ಹಿಡಿದ ಬುದ್ಧಿಯ ಫಲ. ಆವುದೇ ಮಾತು ಹೊರಡಲಿ, ಇಂತಹರದೊಂದು ತೃತೀಯ ಪಂಥವು ಇದ್ದುದೇ. ಇವರೆದುರು ಮಾತಾಡುವುದೆ ತಡ; ತಿಕ್ಕಾಟಕ್ಕೆ ಆರಂಭವೇ. ತಮ್ಮದೇ ಮಿಗಿಲೆಂದು ಸಿದ್ಧಪಡಿಸುವ ಚಪಲವು ಇವರಿಗೆ! ಎಲ್ಲ ಮಾತುಗಳಲ್ಲೂ ಇವರಿಗೆ ಗೆಲವು ಬೇಕು. ಮಾತು ಬಂದಾಗ ಸೋತು ಗೆಲ್ಲುವ ಜಾಣತನದ ಸೌಜನ್ಯದಿಂದ, ಇವರು ಯಾವಾಗಲೂ ಹರದಾರಿ ದೂರ. ಶಾಂತಿಯಿಂದ, ಹೊಂದಿ ಕೊಂಡು ಕೂಡಿ ನಡೆವ ಗೆಳೆತನದ ಒಗೆತನವನ್ನು ಇವರು ಅರಿಯರು. ಇಂತಹರು ಬಾಳಿನಲ್ಲಿ ಹೆಚ್ಚಾಗಿ ಗೆಳೆಯರಿಗಿಂತಲೂ ಹಗೆಗಳನ್ನೇ ಮಾಡಿಕೊಳ್ಳುವರು. ಇವರು ಬಹಳ ದೂರದರ್ಶಿಗಳಾಗಿ ಏನೊಂದು ವ್ಯವಹಾರವನು ಮಾಡಹೋಗಿ ಅದನ್ನು ಮೈಮೇಲೆ ಹಾಕಿಕೊಳ್ಳುವರು. ಏಕೆಂದರೆ ಈ ದುರಾಗ್ರಹಿಗಳ ನೆರಳಿಗೆ ನಿಲ್ಲುವು ದಕ್ಕೆ ಯಾರಿಗೂ ಬೇಡ. ಇವರು ತಾವು ಮಾಡುವಂತಿಲ್ಲ. ತಮಗೆ ಶರಣುಬಾರದೆ ಇದ್ದವರು ಮಾಡಿದ್ದುದನ್ನು ಮೆಚ್ಚುವಂತಿಲ್ಲ! ಏಕೆಂದರೆ ಇವರ ತಲೆ ತಿರುಗಿರುತ್ತದೆ.

ಮೂಗಿ, ಗುಳ್ಳಗಣ್ಣಿ; ಗುಜ್ಜ, ಚೊಂಚ ಎಂದು ನಿಂದಿಸುವುದು ಅನ್ಯಾಯ. ಏಕೆಂದರೆ ರೂಪವು ಯಾರ ಕೈಯೊಳಗಿನ ಮಾತು? ಅದು ನಿಸರ್ಗದತ್ತ; ಆದರೆ ಗುಣ ಗಳ ಹೊಣೆಗಾರಿಕೆಯೊ, ಆ ಆ ವ್ಯಕ್ತಿಯ ಮೇಲಿದೆ ದಾಂಭಿಕ, ಮದಾಂಧ, ಕಠೋರ, ಕ್ರೂರ, ಕೃತಘ್ನ, ಚಂಡಿ, ತಲೆತಿರುಕ, ಶೀಘ್ರಕೋಪಿ, ಛಾಂದಸಿ, ಸಂಶಯಿ,

ಚಂಚಲ, ವಚನಭ್ರಷ್ಟ, ನಂಬಿಸಿ ತಿಂಬುವ ವಿಘ್ನಸಂತೋಷಿ, ಜಾತ್ಯಂಧ, ಧರ್ಮಾಂಧ, ಎಂದು ಮುಂತಾಗಿ ಒಂದೊಂದು ಹೆಸರು ಪಡೆದವರ ಮನೋವಿಕೃತಿಯು, ಶಾರೀರಿಕ ಕುರೂಪಕ್ಕಿಂತಲೂ ಹೇಸಿಕೆಯನ್ನುಂಟುಮಾಡುವಂತಹದು. ಇಂತಹರು ಅಸುರ ಕೋಟಿಯು ಆಪ್ತರು. ಸಂಯಮವು ಹಿಡಿತವೇ ಗೊತ್ತಿಲ್ಲದ ಪ್ರಾಣಿಗಳು. ಇವರು ಮನಸ್ಸನ್ನು ಹದಗೊಳಿಸಿ (ಹೊರಗಿನ ಉಡುಪು ತೊಡಪುಗಳಿಗೆ ಲಕ್ಷಗೊಡುವಂತೆ). ಮನಸ್ಸಿಗೂ ಸುಸಂಸ್ಕಾರಗಳಿಂದ ಅಲಂಕರಿಸಿ, ಅಂದಗೊಳಿಸಿದರೆ ಆಗದೆ ? ತಮ್ಮ ಬಟ್ಟೆಗಳು ಹಸನಾಗಿರಬೇಕೆಂದು ಜಾಗೃತರಾಗಿರುವಷ್ಟಾದರೂ ತಮ್ಮ ಹೃದಯ ಬುದ್ಧಿಗಳೂ ಪರಿಶುದ್ಧವಾಗಿರಬೇಕೆಂದು ಎಚ್ಚರಪಡುವವರು ಏಸು ಜನ ? ಹದಗೇಡಿಗಳೇ ಕುಲಗೇಡಿಗಳು.

## ತೂಗಿ ನೋಡು

ಬಾಳಲು ಅನುಕೂಲವಾಗುವಂತೆ ಅವರವರ ಅಭಿಪ್ರಾಯಗಳು ಮಾರ್ಪಡುತ್ತವೆ. ಆದರೂ ನನ್ನ ಮತವೇ ನುತ, ಎಂಬ ಹೆಮ್ಮೆ ಎಲ್ಲರಿಗೂ ! ತಮ್ಮ ಒಲವು ಇರವುಗಳನ್ನು ಸಮರ್ಥಿಸುವಂತೆಯೆ, ಹಲವರು ತಮ್ಮ ವಿಚಾರ, ಅಭಿಪ್ರಾಯ, ಶ್ರದ್ಧೆಗಳನ್ನು ರೂಪಿಸಿಕೊಂಡಿರುತ್ತಾರೆ. ಆದರೂ, ತೀರ ಭಿನ್ನ ನೋಟದ ಇಬ್ಬರು ಕೂಡಿದಾಗ, ' ನಿನ್ನದು ಸುಳ್ಳು, ನನ್ನದೇ ಸತ್ಯ ' ಎಂದು ವಾದಿಸುವರು. ಇದು ಅತಿವಾದಿಗಳ ರೀತಿ. ಆದರೆ ಇಂಥ ಸಂದರ್ಭಗಳಲ್ಲಿ ತಿಳಿದವರು ತಮ್ಮನ್ನು ತೂಗಿ ನೋಡುವರು. ಎದುರಿಸಿದ ವಿಚಾರಸರಣಿಯನ್ನು ಅರಿತುಕೊಳ್ಳಲು ' ತಮ್ಮದೂ ಏಕೆ ಸುಳ್ಳಿರಲಿಕ್ಕಿಲ್ಲ?' ಎಂದು ಸಂದೇಹಪಟ್ಟುಕೊಳ್ಳುವ ಎದೆಗಾರಿಕೆಯನ್ನೂ ಅವರು ತೋರುವರು. ತಾವೇ ಅವರಾಗಿ, ಸಹ-ಅನುಭೂತಿಯಿಂದ ವಿಚಾರಿಸುವರು. ವಿರೋಧಿಸಿದವರು, ಆ ಬಗೆಯಾದ ವಿಚಾರ-ಶ್ರದ್ಧೆಗಳುಳ್ಳವರಾಗಲು ಕಾರಣಗಳೇನೆಂಬುದನ್ನು ಶಾಂತವಾಗಿ ತಿಳಿದುನೋಡುವರು. ಅವರನ್ನು ಸುಮ್ಮನೆ ತಿರಸ್ಕರಿಸುವುದಿಲ್ಲ, ಅಥವಾ ಅಸಂಬದ್ಧ ಮಾತಿನಿಂದ ತಮ್ಮ ಮಂಡನವನ್ನೂ ಮಾಡಿಕೊಳ್ಳುವದಿಲ್ಲ.

## ಮುಂಗಂಡು ನಡೆ

ಕೆಲರು ಮೊದಲು ಮಾಡಿ ಬಳಿಕ ಮಿಡುಕುವರು. ವಿಚಾರದಲ್ಲಿ ಬೀಳುವರು. ಹಲರಿಗೆ ಮೊದಲಂಗಲಿ, ಕೊನೆಗಾಗಲಿ ವಿಚಾರದಲ್ಲಿದ್ದು ಅಥವಾ ವಿಚಾರದಲ್ಲಿ ಬಿದ್ದು ಗೊತ್ತೇ ಇಲ್ಲ. ಪರಿಸ್ಥಿತಿಯಲ್ಲಿ ಪ್ರವಾಹ ಪತಿತರಾಗಿ ದಿನಗಳೊಡನೆ ಉರುಳುತ್ತ ಹೋಗುವುದೊಂದೇ ಅವರ ಕೆಲಸ ! ಇಡೀ ಆಯುಷ್ಯವೂ ಸುಸಂಬದ್ಧವಾಗಿದ್ದು ಸನ್ಮಾರ್ಗದಿಂದ ದೂರ ಹೋಗದಂತೆ ಎಚ್ಚರಿಸಬೇಕು. ತ್ಯಾಗ ಮತ್ತು ದೂರದೃಷ್ಟಿಯು ನಾವು ಹಿಡಿಯತಕ್ಕ ಹಾದಿಯನ್ನು ನಿರ್ಧರಿಸಲು ನೆರವಾಗುತ್ತವೆ. ಇಂದಿನಲ್ಲಿ ತೊಡಗಿರುವಾಗ ನಾಳೆಯನ್ನು ಮರೆಯಲಾಗದು. ಮುಂಬರಲಿರುವ

ಕುತ್ತು ಕಷ್ಟಗಳ ಸೂಚನೆಯು ಕೆಲಮಟ್ಟಿಗೆ ಮೊದಲಿಗೆ ಸಿಕ್ಕುವುದು. ಆದರೆ ಅದನ್ನು ಅರಿತುಕೊಂಬ ತಿಳಿನೋಟ ಬೇಕು. ಇದೇ ದೂರದ ದೃಷ್ಟಿ. ಗಡ್ಡಕ್ಕೆ ಬೆಂಕಿ ಬರುವವರೆಗೆ ಸುಮ್ಮನಿರಕೂಡದು. ಜಾಗ್ರತ ವಿಚಾರಿಗೆ ಯಾವ ಕುತ್ತವೂ ಪಾರಾಗಲು ಅಸಾಧ್ಯವಲ್ಲ, ಸಂಕಟ ಬಂದ ಮೇಲೆ ಜಾಗ್ರತವಾಗುವದಕ್ಕಿಂತ, ಬರುವ ಮೊದಲೆ ಎಚ್ಚರ ಪಡಬೇಕು.

## ಕೊಡುಗೆಯ ಬಗೆ

ತಿರುಗಿ ಬರಲಾರದಷ್ಟು ಎಂದೂ ಕೊಡಬೇಡ. ಏಕೆಂದರೆ ಮಿತಿಗಿಂತ ಹೆಚ್ಚು ಕೊಟ್ಟರೆ ಹದಗೆಡುವುದು. ತನ್ನಿಂದ ಇನ್ನು ತೀರಿಸುವುದು ಸಾಧ್ಯವಿಲ್ಲವೆಂದು ಕಂಡೊಡನೆ ಅವನು ಮೋರೆ ತಪ್ಪಿಸುವನು. ಹೆಚ್ಚು ಕೊಟ್ಟು ಒಬ್ಬರನ್ನು ಕಳಕೊಳ್ಳುವುದು ಯಾವ ಜಾಣ್ಮೆ?—ಕೆಲವರಂತೂ ಆಜನ್ಮ ಸಾಲಿಗರೆನಿಸಿಕೊಂಬುದನ್ನು ತಪ್ಪಿಸಿಕೊಳ್ಳಲು ಹಗೆಗಳಾಗಿ ಪರಿಣಮಿಸುವರು ! ಹೊಳೆ ದಾಟಿದ ಮೇಲೆ ಅಂಬಿಗನ ಆವಶ್ಯಕತೆ ಉಳಿಯುವದಿಲ್ಲ. ತಾನು ಒಬ್ಬರ ಹಂಗಿನಲ್ಲಿದ್ದೇನೆಂಬ ವಿಚಾರವು ಮನಸ್ಸಿಗೆ ತೊಂದರೆಯನ್ನು ಕೊಡುತ್ತದೆ. ಒಬ್ಬರಿಗೆ ಹೊರಲಾರದ ಉಪಕಾರ ಮಾಡಿ ಅವರಿಗೆ ಯಾವಾಗಲೂ ತಮ್ಮೆದುರು ತಲೆ ತಗ್ಗಿಸಿಕೊಂಡಿರುವ ಪ್ರಸಂಗವನ್ನೇಕೆ ತರಬೇಕು ? ನೀಡುವ ನೆರವು ಕೊಡಕೊಂಬುವವರಿಬ್ಬರಿಗೂ ತೊಂದರೆಯಾಗದಂತಹದು ಆಗಿದ್ದರೆ ಅದರಲ್ಲಿ ಇಬ್ಬರಿಗೂ ಹಿತ; ಆನಂದ.

## ಜಯಜಯಕಾರವನ್ನು ಕೊನೆಗೆ ಹಾರೈಸು

ಮೊದಲೇ ಸುಖವನ್ನು ಹಾರೈಸಿದರೆ ಕೊನೆಗೆ ದುಃಖವು ತಪ್ಪಿದ್ದಲ್ಲ. ಮೊದಲು ಕಷ್ಟಪಟ್ಟು ಹೋರಾಡಿದರೆ ಕೊನೆಗೆ ವಿಜಯಶ್ರೀಯು ವರಿಸುವಳು. ಆದುದರಿಂದ ಆರಂಭದ ಜಯಜಯಕಾರಕ್ಕಿಂತಲೂ ಕೈಕೊಂಡ ಕೆಲಸವು ಹೇಗೆ ಸೊಗಸಾಗಿ ಕೊನೆಗಂಡೀತೆಂಬ ಚಿಂತೆಯು ಮುಖ್ಯವಾಗಿರಲಿ. ವೈಭವದಿಂದ ಆರಂಭಿಸಿ, ವಿಪರೀತವಾಗಿ ಮುಗಿಸುವ ದುರ್ದೈವವು ಕೆಲವರ ಪಾಲಿಗೆ ಬರುತ್ತದೆ. ಮೊದಮೊದಲು ಸೈ ಎನ್ನಲು ಎಲ್ಲರೂ ಸಿದ್ಧರೇ. ಆದರೆ ಹೊಗಳಿಕೆಗೆ ಕಿವಿಗೊಟ್ಟು ಮೈಮರೆತರೆ ಕೊನೆಯು ಹದಗೆಡುವುದು. ಕೈಯಿಕ್ಕಿದೊಡನೆಯೆ ಭಾಪು ! ಎಂದು ಹೊಗಳತಕ್ಕವರು ತೀರ ವಿರಳ. ಅಡಿ ಇಟ್ಟೊಡನೆ ಜಯಲಕ್ಷ್ಮಿಯಿಂದ ಮಾಲೆ ಹಾಕಿಸಿಕೊಳ್ಳುವ ಭಾಗ್ಯವು ಎಷ್ಟು ಜನಕ್ಕೆ ? ಬಂದೊಡನೆ, ಇವಳಿಂದ ತುಂಬ ಉಪಚಾರ ಸುಖಸ್ವಾಗತವನ್ನು ಪಡೆದ ಅತಿಥಿಯು, ಕೊನೆಗೆ ಅನಾದರವನ್ನು ಹೊಂದಿ ಒರಗು ಮೋರೆಯಿಂದ ಹೊರಬೀಳುವ ಸಂಭವವೇ ಹೆಚ್ಚು.

## ಸುದೈವಿಯಾಗುವ ಆಕಾಂಕ್ಷೆ

ಈ ಆಕಾಂಕ್ಷೆ ಇಲ್ಲದವರಾರು ? ಆದರೆ ದೈವವನ್ನು ಒಲಿಸಿಕೊಂಬ ಹದವನ್ನು

ತಿಳಿದವರು ಸ್ವಲ್ಪ ಜನ. ಸುದೈವಿಗಳೆಂದು ಹೆಸರಾದವರಲ್ಲಿ ಯಾರ ಕೆಲಸಗಳೇ ಆಗಲಿ ಥಕ್ಕನೆ ಕೈಗೂಡಿದುದು ಇಲ್ಲ. ಮನಮುಟ್ಟಿ ದುಡಿಯುವುದರಿಂದಲೇ ಅವು ಸಾಧ್ಯವಾದುವು. ಹಲರು, ದೈವದ ಬಾಗಿಲು ತೆರೆಯುವುದೊ, ಎಂದು ಹಂಬಲಿ ಸುತ್ತ ಕಾಲಹರಣ ಮಾಡುವರು. ಇನ್ನು ಕೆಲವರು ಒಳ್ಳೆಯ ಕೆಲಸಕ್ಕೆ ಗೆಲುವಾ ಗಲೇಬೇಕೆಂಬ ಶ್ರದ್ಧೆಯಿಂದ ಮುನ್ನುಗ್ಗುತ್ತಾರೆ; ಮತ್ತು ತಾವು ವಿಚಾರಪೂರ್ವಕ ವಾಗಿ ತೋರಿದ ಧೈರ್ಯದಿಂದ ಲಾಭ ಪಡೆಯುತ್ತಾರೆ. ಇಂತು ಅವರು ತಮ್ಮ ಆತ್ಮವಿಶ್ವಾಸದ ಸದ್ಗುಣ ಮತ್ತು ಎದೆಗಾರಿಕೆಯಿಂದ ವಿಜಯಲಕ್ಷ್ಮಿಯನ್ನು ಆರಾ ಧಿಸಿ ಅವಳ ಕೃಪೆಗೆ ಪಾತ್ರರಾಗುತ್ತಾರೆ. ಆದರೆ ಇದನ್ನೇ, ಅಲಂಕಾರಿಕ ಭಾಷೆ ಯನ್ನು ಬಿಟ್ಟು, ತಾತ್ವಿಕ ರೀತಿಯಿಂದ ಯಥಾರ್ಥವಾಗಿ ಹೇಳಬೇಕಾದರೆ, ಶೀಲ (ಸದ್ಗುಣ) ಮತ್ತು ಶುದ್ಧವಾದ ಅಂತಃಪ್ರೇರಣೆಗಳ ಹೊರತು ಹೆಚ್ಚಿನ ಬೇರೆ ಯಾವ ಗುರುವೂ, ಮಾರ್ಗದರ್ಶಕನೂ ಈ ಲೋಕದಲ್ಲಿ ಇಲ್ಲ. ಜ್ಞಾನವೆಂದರೇ ಸುದೈವ. ಅಜ್ಞಾನವೆಂದರೇ ದುರ್ದೈವ.

## ಯೋಗಾಯೋಗ

ಯೋಗಾಯೋಗವು ಎಲ್ಲದರಲ್ಲೂ ಉಂಟು. ಕಾಲವು ಅನುಕೂಲವೊ, ಪ್ರತಿ ಕೂಲವೊ ಎಂಬುದನ್ನು ಅರಿತುಕೊಳ್ಳದೆ ಅವುದಕ್ಕೂ ಕೈಯಿಕ್ಕದಿರು. ಗೃಹಬಲ, ತಾರಾಬಲಕ್ಕಿಂತಲೂ ನಿನ್ನ ಹಾಗೂ ನಿನ್ನ ಸುತ್ತಲಿನ ಬಲಾಬಲಗಳನ್ನು ಚೆನ್ನಾಗಿ ವಿಮರ್ಶಿಸು. ನಿತ್ಯ ಸಂಕ್ರಮಣವು ನಡೆದಿದೆ. ತಿಳಿದವರಿಗೆ ಇದು ದಿನಾಲು ಕಾಣುವುದು. ಈ ಸೂಕ್ಷ್ಮದೃಷ್ಟಿಯಿಲ್ಲದ ತಿಳಿಗೇಡಿಗಳಿಗೆ ವಿಪರೀತ ವ್ಯತ್ಯಾಸ ಗಳಾದ ಬಳಿಕ, ಅವರ ಪಾಲಿಗೆ ವರ್ಷಕ್ಕೊಂದು ದಿನ ಸಂಕ್ರಾಂತಿ ! ನಮ್ಮ ಮೈ-ಮನ ಗಳು ಕೂಡ ಗಳಿಗೆಗಳಿಗೆಗೂ ಬದಲಾಗುತ್ತಲಿವೆ. ಪರಿಪಕ್ವತೆಯು ಕಾಲವನ್ನು ಅವಲಂಬಿಸಿದೆ. ಕಸುಕು ಹಣ್ಣಾಲು ಹೊತ್ತು ಬರಬೇಕು. ಚೆಲುವು ಅರಳುವು ದಕ್ಕೂ ವಯಸ್ಸಿದೆ. ಎಲ್ಲಕ್ಕೂ ಹೊತ್ತು ಬರಬೇಕು. ಹೊತ್ತು ಮೀರಿದರೂ ಹೋಯ್ತು. ಇದೇ ಯೋಗಾಯೋಗ. ಇದನ್ನು ಅರಿತುಕೊಂಬುವ ಶಕ್ತಿಯನ್ನು ಸಂಪಾದಿಸು. ಅವುದೊಂದನ್ನು ಚೆನ್ನಾಗಿ ಕೊನೆಗಾಣಿಸಬೇಕೆಂದಿದ್ದರೆ ಅದನ್ನು ಸಕಾಲದಲ್ಲಿ ಮಾಡಬೇಕು. ಮಣ್ಣು ಹೊನ್ನಾಗುವ ಕಾಲವು ಬಂದಿರುತ್ತದೆ. ಇದುವೆ ಸುಗ್ಗಿ. ಸುಗ್ಗಿಯಲ್ಲಿ ಸುಮ್ಮನೆ ಬಿದ್ದುಕೊಂಡು ಮುಂದೆ ಮಿಡುಕುವುದೂ ಕಣ್ಣೀರಿ ಡುವುದೂ ಮೂರ್ಖತನ. ಆದುದರಿಂದ ಸಕಾಲದಲ್ಲಿ ಮುಂದುವರೆ! ಹೊನ್ನು ಮಣ್ಣಾಗುವ ಹೊತ್ತೂ ಬಂದಿದೆ. ಈ ಯೋಗಾಯೋಗಗಳನ್ನು ಅರಿತು ಅಡಿ ಯಿಡುವುದೇ ಜಾಣ್ಮೆ.

## ಉದಾರ ಹೃದಯ

ಉದಾರ ಹೃದಯವು ಕಿರುಕುಳವನ್ನು ಅರಿಯದು. ಉದಾತ್ತ ಕೃತಿಗಳಿಗೆ

ಪ್ರೇರೇಪಿಸುವುದು. ನಡೆನುಡಿಯೊಳಗಿನ ಒರಟನ್ನು ಕಳೆದು ಒಪ್ಪಗೊಡುವುದು; ಬಾಳನ್ನು ಇನಿದಾಗಿಸುವುದು. ಎಲ್ಲೆಡೆಯಲ್ಲಿ, ಇದು ಸಿಕ್ಕುವುದಲ್ಲ. ಏಕೆಂದರೆ, ಇದು ಅಸಾಮಾನ್ಯ ಗುಣ; ಲೋಕಾನುಭವದ ಕಹಿಯಿಂದ ಎದೆ ನಾಲಿಗೆ ಕೆಡದವರು. ಅಪರೂಪ. ಹಗೆಯಾದವನ ಹಿತವನ್ನು ಕೋರುವುದು, ಉದಾರ ಹೃದಯವು. ಹೊತ್ತು ಬಂದಾಗ ಅವನಿಗೆ ನೆರವಾಗುವಲ್ಲಿ ಹಿಗ್ಗುವುದು ಉದಾರ ಹೃದಯವು. ಸೇಡಿನ ಸಂಧಿ ದೊರೆತಾಗ ಅದೂ ಇನ್ನೂ ಉಜ್ವಲವಾಗುವುದು. ಅನಿರೀಕ್ಷಿತ ಪ್ರೀತಿ ವಿಶ್ವಾಸಗಳನ್ನು ತೋರಿ ಹಗೆತನದ ಕಾರ್ಮೋಡಗಳನ್ನು ನಾಶಮಾಡುವುದು. ಇದ ರಲ್ಲಿ ಅಮಾತ್ಯರ ದೂರದೃಷ್ಟಿಯು ಧೋರಣವೂ ಇದೆ. ರಾಜ್ಯತಂತ್ರದ ಮಂತ್ರವಿದೆ. ಆದರೆ ಉದಾರ ಹೃದಯಕ್ಕೆ ಯಾರನ್ನೂ ಗೆದ್ದು ಅಂಕೆಯಲ್ಲಿರಿಸುವ ಆಸೆಯಿಲ್ಲ— ಬಾಳಿನ ಮರುಭೂಮಿಯೊಳಗಿಂದ ನಡೆವಾಗಿನ ಕಡುಬಿಸಿಲಿನ ತಾಪವನ್ನು ಉದಾರ ಹೃದಯ ಬಲ್ಲುದು. ತೊಟ್ಟು ನೀರೂ ದೊರೆಯದೆ ತಾನು ತೊಳಲದಿದ್ದರೂ, ತನ್ನೊಳಗಿನ ಪ್ರೇಮಜಲವನ್ನು ಬತ್ತಗೊಡದೆ ಸಾಧ್ಯವಿದ್ದಷ್ಟು ಜನರಿಗೆ ಅದನ್ನು ಕೊಡುವ ಹಂಬಲವು ಇದಕ್ಕೆ ಯಾವಾಗಲೂ ಇರುತ್ತದೆ.

—ಜೋಶಿ ಶಂಕರರಾಯರು
(ದಾರಿಯ ಬುತ್ತಿಯಿಂದ)

## ಅಭ್ಯಸನಗಳು

**ಪ್ರಶ್ನೆಗಳು:-**

೧. ಹಿಂದು, ಮುಂದು ಮತ್ತು ಮುಂದಿನ ಎಣಿಕೆಯಿಂದ ಬದುಕುವದೆಂದರೆ ಏನು ?
೨. ದುರಾಗ್ರಹಿಗಳಿಗೆ ಗೆಳೆಯರಿಗಿಂತ ಹಗೆಗಳೇ ಏಕೆ ಹೆಚ್ಚಾಗುವರು ?
೩. ಪರರ ಅಭಿಪ್ರಾಯವನ್ನು ಹೇಗೆ ತಿಳಿದುಕೊಳ್ಳಬೇಕು ?
೪. ನಾವು ಮಾಡುವ ಉಪಕಾರದ ಮಿತಿ ಎಷ್ಟಿರಬೇಕು ?
೫. ಹೊಗಳಿಕೆಗೆ ಕಿವಿಗೊಟ್ಟರೆ ನಮ್ಮ ಸ್ಥಿತಿ ಏನಾಗುವದು ?
೬. ದೈವವನ್ನು ಒಲಿಸಿಕೊಳ್ಳುವ ಹದವಾವುದು ?
೭. ಉದಾರ ಹೃದಯ ನಮಗೆ ಸುಖವನ್ನು ಹೇಗೆ ನೀಡಬಲ್ಲದು ?

**ಭಾಷಾಭ್ಯಾಸ:—**

೧. ಕುರೂಪವನ್ನು ಸೂಚಿಸುವ ಶಬ್ದಗಳನ್ನು ಎತ್ತಿ ಹೇಳಿರಿ. ಮನೋವಿಕೃತಿಯ ವಿವಿಧ ಬಗೆಗಳನ್ನು ನಿರೂಪಿಸುವ ಶಬ್ದಗಳನ್ನು ಈ ಪಾಠದಿಂದ ಎತ್ತಿ ಹೇಳಿರಿ.
೨. ಜ್ಞಾನವೆಂದರೆ ಸುದೈವ; ಸುದೈವವೇ ಜ್ಞಾನ. ಬದುಕಲು ಉಣ್ಣು, ಉಣ್ಣಲು ಬದುಕು. ಈ ವಾಕ್ಯಗಳಲ್ಲಿಯ ಅರ್ಥವ್ಯತ್ಯಾಸವನ್ನು ಕಂಡುಹಿಡಿಯಿರಿ. ಇಂತಹ ಬಿಡಿ ವಾಕ್ಯಗಳನ್ನು ಹೇಳಿರಿ.

೩. ಕೆಳಗಿನ ವಾಕ್ಯಗಳಲ್ಲಿಯ ವಿಚಾರಗಳನ್ನು ಈ ಪಾಠದ ಶೈಲಿಯಲ್ಲಿ ವಿಸ್ತರಿಸಿ ಬರೆಯಿರಿ.

(೧) ತಿಳಿದು ಬಾಳು, ಬಾಳಿ ತಿಳಿ.

(೨) ಹದಗೇಡಿಗಳೇ ಕುಲಗೇಡಿಗಳು.

(೩) ಇಂದಿನಲ್ಲಿ ತೊಡಗಿರುವಾಗ ನಾಳೆಯನ್ನು ಮರೆಯಲಾಗದು

೪. ದೇವ ಎಂಬರ್ಥದಲ್ಲಿ ಬಂದ ಪರ್ಯಾಯ ಶಬ್ದಗಳನ್ನು ಹೇಳಿರಿ. ಉದಾ:— ಲೋಕದ ತಂದೆ.

**ಶಬ್ದ ವಿಚಾರ:—**

೧. ತಿಳಿ–ಇದರಿಂದ ಸಿದ್ಧವಾದ ಕೆಲವು ಶಬ್ದಗಳನ್ನು ಹೇಳಿರಿ. (ಉದಾ:—ತಿಳಿಗನ್ನಡಿ, ತಿಳಿ–ನೀರು......)

೨. ಹೊರಗಣ, ಗೆಳೆತನ, ಸ್ನೈತ್ರ, ಬಳಲಿಕೆ, ಔದಾರ್ಯ, ಸೌಜನ್ಯ, ಮೂಡಣ—ಈ ಶಬ್ದಗಳ ರೂಪಸಿದ್ಧಿಯನ್ನು ಹೇಳಿರಿ.

೩. ಸಹಾನುಭೂತಿ, ದುರಾಗ್ರಹ, ತೃತೀಯ ಪಂಥ—ಇವುಗಳ ಅರ್ಥವನ್ನು ಹೇಳಿರಿ.

೪. ಕೆಳಗಿನ ಸಮಾಸಗಳನ್ನು ವಿಗ್ರಹಿಸಿರಿ

ತಿಳಿಗನ್ನಡಿ, ಎದೆಗೆಡು, ವಚನಭ್ರಷ್ಟ, ಕಣ್ಣೀರಿಡು, ಮೂಂದಳಿರು, ಚೆಂಬೆಳಗು, ನರುಗಂಪು, ಬಿರುಗಾಳಿ.

೫. ತಲೆತಿರುಗು, ತಲೆಬಗ್ಗಿಸು, ಹದಗೆಡು, ತಿವಿಗೊಡು,— ಇವುಗಳನ್ನು ನಿಮ್ಮ ವಾಕ್ಯಗಳಲ್ಲಿ ಉಪಯೋಗಿಸಿರಿ.

**ವಾಕ್-ಶಿಕ್ಷಣ:—**

ಚಿಕ್ಕ ಚಿಕ್ಕ ಸುಂದರ ವಾಕ್ಯಗಳನ್ನು ಮತ್ತು ಸೂಕ್ತಿಗಳನ್ನು ವೃತ್ತಪತ್ರಿಕೆ ಮೊದಲಾದವುಗಳಿಂದ ಸಂಗ್ರಹಿಸಿರಿ. ನಿಮ್ಮ ಬಾಳನ್ನು ರೂಪಿಸುವ ಒಂದೊಂದು ಉಕ್ತಿಯನ್ನು ವಾರಕ್ಕೊಮ್ಮೆ ಬದಲಿಸಿ ನಿಮ್ಮ ಓದುವ ಕೋಣೆಯಲ್ಲಿ ಎದ್ದು ಕಾಣುವಂತೆ ಹಚ್ಚುತ್ತ ಹೋಗಿರಿ.

೨. ವರ್ಗದಲ್ಲಿ ಎರಡು ಗುಂಪುಗಳನ್ನು ಮಾಡಿ ಗಾದೆಯ ಮಾತುಗಳ ಮತ್ತು ನಿಜಲಿಂಗ ಶತಕ ಸುಭಾಷಿತಗಳನ್ನು ಹೇಳುವ ಸ್ಪರ್ಧೆಯನ್ನು ಏರ್ಪಡಿಸಿರಿ.

**ಚರ್ಚೆ:—**

ನಾಳಿನ ವಿಚಾರವನ್ನು ಮಾಡುವುದು ಹೇಡಿಯ ಲಕ್ಷಣ.

**ಬರೆಹ:—**

೧. (೧) ಜ್ಞಾನವೆಂದರೆ ಸುದೈವ. (೨) ದುಡಿಯೇ ವಿಶಾಲ ಚಿತ್ತವೃತ್ತಿ. (೩) ಆಚಾರವೇ ಸ್ವರ್ಗ, ಅನಾಚಾರವೇ ನರಕ. ಇವುಗಳಲ್ಲಿ ಒಂದನ್ನು ಕುರಿತು ನಿಬಂಧ ಬರೆಯಿರಿ.

೨. ಒಂದೊಂದು ವಾಕ್ಯವೃಂದದ ಸಾರಾಂಶವನ್ನು ಬರೆಯಿರಿ.

(ಸಾರಾಂಶ ಲೇಖನಕ್ಕೆ ಇದು ಒಳ್ಳೆಯ ಪಾಠ)

# ೧೮. ತಪಸ್ವಿನಿ

[ ರಾಮನನ್ನು ಅಗಲಿ ಇರಲಾರದೆ ಸೀತೆಯು ಅವನೊಡನೆ ಅಡವಿಗೆ ತೆರಳುತ್ತಾಳೆ, ಅಣ್ಣನ ಸಲುವಾಗಿ ಲಕ್ಷ್ಮಣನೂ ಹೋಗುವನು. ಭ್ರಾತೃ ಪ್ರೇಮದ ಭರದಲ್ಲಿ ಆತನಿಗೆ ಹಿಂದೆ ಉಳಿದ ತನ್ನ ಹೆಂಡತಿಯ ನೆನಪು ಕೂಡ ಆದಹಾಗೆ ರಾಮಾಯಣದಲ್ಲಿ ಕಾಣುವುದಿಲ್ಲ. ಸಾಧ್ವಿ ಊರ್ಮಿಳೆಯನ್ನು ಹೀಗೆ ಉಪೇಕ್ಷಿಸಿದುದು ರವೀಂದ್ರನಾಥರಿಗೆ ಸರಿದೋರಲಿಲ್ಲ. ಸೀತಾ-ರಾಮ-ಲಕ್ಷ್ಮಣರು ವನವಾಸಕ್ಕೆ ಹೋದ ಬಳಿಕ ಅವರ ಹಿಂದೆ ಆಕೆ ಹೇಗೆ ವರ್ತಿಸಬೇಕೆಂಬುದರ ಹೃದಯಂಗಮವಾದ ಕಥೆಯನ್ನು ರಚಿಸಿದರು

ಈ ಸತೀಮಣಿಯು ತನ್ನ ಗಂಡನು ಕಾಡಿಗೆ ಹೋದ ಬಳಿಕ ತಾನೂ ಊರ ಹೊರಗೆ ಒಂದು ಆಶ್ರಮದಲ್ಲಿದ್ದು ಅವರು ಮರಳಿ ಬರುವ ದಾರಿಯನ್ನೇ ನೋಡುತ್ತಿದ್ದಳು.

ಅರಣ್ಯವಾಸವನ್ನು ತೀರಿಸಿಕೊಂಡು ಅಯೋಧ್ಯೆಯ ಸಮೀಪಕ್ಕೆ ಬರುತ್ತಲೇ ಊರ್ಮಿಳೆಯ ಆಶ್ರಮವು ಹತ್ತುವುದು. ಅಲ್ಲಿ ಲಕ್ಷ್ಮಣನಿಗೆ ತನ್ನ ಪತ್ನಿಯ ಭೆಟ್ಟಿಯಾಗುವುದು. ರಾಮನು ಸೀತೆಗೆ ಅನುಮತಿಸಿದಂತೆ ತನ್ನ ಗಂಡನೂ ತನ್ನನ್ನು ಕರೆದೊಯ್ಯಲಿಲ್ಲವಲ್ಲ ! ಎಂದು ಮಿಡುಸಿಡುಕಿನಿಂದ ಲಕ್ಷ್ಮಣನನ್ನು ಹಳಿಯಬಹುದಾಗಿದ್ದ ಊರ್ಮಿಳೆಯ ಇಲ್ಲಿ ವರ್ಣಿತವಾದ ಪತಿಪ್ರೇಮವು ಧೀರೋದಾತ್ತವಾಗಿದೆ. ಊರ್ಮಿಳಾ-ಲಕ್ಷ್ಮಣರ ಹಿರಿಮೆಯನ್ನು ಸೀತಾ-ರಾಮರ ಬಾಯಿಂದ ಹೇಳಿಸುವಲ್ಲಿ ಕವಿಯ ಅಸಾಧಾರಣವಾದ ಪ್ರತಿಭೆಯು ವ್ಯಕ್ತವಾಗಿದೆ. ಇದೊಂದು ಸರಸ ಮಧುರಕೃತಿ. ]

**ಲಕ್ಷ್ಮಣ:—** ಬಂದೆವಿಲ್ಲಿಗೆ ಮುಗಿದುದೆಮ್ಮ ಕಥೆ
ನಿನ್ನ ಕಜ್ಜವಿದೇನು ? ತಪದಿ ಬಳಲಿದೆಯಾ ?

**ಊರ್ಮಿಳೆ:—** ಕಜ್ಜವೇನುಂಟೆನಿಯ ? ಜೀವಭಾವವದೆಲ್ಲ
ನೀನೆ; ಬಳಲಿದೆನಿಲ್ಲ; ವೇದನೆಯನರಿಯೆ;
ಭ್ರಮೆ ಇಲ್ಲ; ಬೇಸರವೆ ಇಲ್ಲ. ಧರ್ಮವ ಬಗೆದೆ
ಪ್ರಕೃತಿಯಲಿ, ವಿಶ್ವಪ್ರೇಮದಲಿ, ಬೆರೆದೆನು ದೇವ.
ಇನಿತು ಕಾಲದ ವಿಯೋಗವು ದೀರ್ಘವಾದೊಂದು
ದಿನದಂತೆ ಕಳೆದುದಾವುದೊ ಸುಖದ ಕಲ್ಪನೆಯ
ವಿಸ್ಮೃತಿಯಲಿತ್ತು ಸುಖದುಃಖವೊಂದೇ ಸಮದಿ
ಇನಿಯ ! ರಣಕರ್ಮದಲಿ ತೊಳಲಿ ಬಳಲಿದೆ ನೀನು.
ಸಂಸ್ಕಾರಬಲ; ಕರ್ಮಯೋಗಿಯೆನಿಸಿದೆ ನೀನು.

**ಲಕ್ಷ್ಮಣ:—** ಧರ್ಮದೇವಿಯು ನೀನು ಧರ್ಮಕರ್ಮಗಳ
ಸಂಯೋಗದಲಿ ಜಗದ ಜೀವನವು ಸಾಧ್ವಿ.
ಶಾಂತಿ-ವಿಶ್ರಾಂತಿಗಳ ತೊರೆದೆನ್ನ ಜೀವನಧ
ಸಂಸ್ಕಾರಬಲ ಮಲಿನ, ಜೀವಬಲಿಯಿಂದೆ.
ಸಾಹಸದ ಬಾಳ್ ನಿಚ್ಚವಲ್ಲ. ಸ್ವಚ್ಛತೆ ಇಲ್ಲ.

ನೋವ ನೀಗುತೆ ಜೀವವನು ಕಾವ ಸದ್ವಿಜಯ
ಜೀವನದ ಸಂಸ್ಕಾರ; ಸತ್ವ; ನಿನ್ನದು ದೇವಿ!
ರಕುತಪಾನದ ತೋಳ ಗೆಲುವೊಂದು ಗೆಲುವೆ?
ನಿನ್ನ ಗೆಲುವೇ ಚೆಲುವು. ಶಾಂತಿ ನೀಡೆನಗೆ.
ನಿನ್ನ ನೈರ್ಮಲ್ಯದಿಂದೆನ್ನ ಮಲಿನವ ನೀಗು.
ನಿನ್ನ ಬಗೆಯೆನಗೆ ವಿಶ್ರಾಂತಿಮಂದಿರವು.
ಮತಿವೆರಸಿ ಹಿತವೀವ ಪ್ರೇಮನಿಧಿ ನೀನು.

[ ದೂರದಲ್ಲಿ ಸೀತಾರಾಮರಿಬ್ಬರೂ ಕಲೆತು ಮುಂಬರೆಯುವರು. ]

**ರಾಮ:—** ಜಾನಕಿ ನೋಡಿದೆಯ ನೋಟವೆಂತಿಹುದು ?

**ಸೀತಾ:—** ಅಚ್ಚರಿಯ ನೋಟವೋ ಇದು ನಿನಗೆ ?

**ರಾ:—** ಸೀತಾ !
ಅಚ್ಚರಿಯೊಳಚ್ಚರಿಯು. ಮನವ ಜಯಿಸಿದಳೀಕೆ;
ರಣವ ಹೂಡಿದೆ ನೀನು.

**ಸೀ:—** ಮುದ ಮೀರಿಹುದೊ? ಜಯದ
ಮದವೇರಿತೋ ಕಾಣೆ.

**ರಾ:—** ನಿನ್ನಿಂದ ಬಂದ ಜಯ;
ನಿನ್ನಿಂದ ಬಂದ ಮುದ; ಜಯದ ಮೋದದ ಮದವು
ಮರೆಸಿಹುದು ತನುಮನವ.

**ಸೀ:—** ಮತಿಯ ವಿಸ್ಮೃತಿಯಲ್ಲಿ
ನಿಂದೆಯ ಕುತೂಹಲವು ಬೆರೆಯದಿಹುದಚ್ಚರಿಯು.

**ರಾ:—** ನೋಡು ಈ ಆಶ್ರಮವ, ಅವರು ನಿಂದಿಹ ಪರಿಯ.
ನೆನಪಿಹುದೊ ಚಿತ್ರಕೂಟವು ನಿನಗೆ ?

**ಸೀ:—** ನಾಥಾ !
ಮನದೊಳಾಸಕ್ತಿಯನು ಜನಿಯಿಸುತೆ ಜೀವನದ
ಬೇಸರವ ಕಳೆದು, ಸುಖದಾಸರೆಯ ನೀಡಿರ್ದ
ಚಿತ್ರಕೂಟದ ಚಿತ್ರವಿಹುದು ಹೃತ್ಪಟದಿ;

**ರಾ:—** ಭಾವನೆಯ ಚಿತ್ರಮದು. ಕಣ್ಣೆದುರನೋಟವಿದು.
ನಾವಿರ್ವರೊಂದು ದಿನ, ಅತ್ರಿ ಮುನಿಯಾಶ್ರಮಕೆ
ಪೋಗಲೆಂದನುವಾದ ಸಮಯ ನೆನೆ.

**ಸೀ:—** ನೆನೆವೆ.
ಅಂದಿನಂತೆಯೆ ನಾವು ಬಂದಿಹೆವು ಆಶ್ರಮಕೆ.

**ರಾ:—** ನೋಡಿವರ ನಿಃಸ್ವಾರ್ಥ ಜೀವನವ ಸೀತಾ !

ತ್ಯಾಗದೊಂದಗ್ಗಳಿಕೆಯನು ಜಗಕೆ ತೋರಿಸಿದ
ನಿತ್ಯತೃಪ್ತರ ನೋಡು! ಸತ್ಯಸಾಹಸವ.
ಹಿರಿಯರಿವರೆವ್ಮಿಂದೆ. ಅನತಿಕಾಲದ ನಿನ್ನ
ವಿರಹವನು ಸೈರಿಸದೆ ಪೋದೆನಾ ಸಮಯವನು
ನೆನೆದು ನಾಚುವೆನೀಗ. ಎನ್ನಿಂದೆ ಹಿರಿದಾದ
ಕ್ಲೇಶ ತಮ್ಮನದು ಭಾವಿಸದಾದೆ ನಾನದನು
ಕಾಡಿ ಬಳಲಿಸಿದೆ, ಒಮ್ಮೆಯು ಆದರಿಸದಾದೆ.
ಎನ್ನಂತೆ ಹಂಬಲಿಸಿ ಕಂಬನಿಯ ಸುರಿಸಿದನೆ?
ಉನ್ಮತ್ತನಾದನೇ ಸೌಮಿತ್ರಿ?—

ಸೀ:— ಒಂದಲ್ಲ,
ಎರಡಲ್ಲ, ಹದಿನಾಲ್ಕು ವರುಷಗಳು ಅಗಲಿರ್ದ;
ಆದರೇನಾಯ್ತು? ನೋಡವನ ಮನವೆಂತಿಹುದು?
ಭೀತಿಯೋ ಸಂಶಯವೆ?

ರಾ:— ಪರಿಹಾಸ್ಯವೋ ದೇವಿ!

ಸೌಮಿತ್ರಿ ವನವಾಸದೊಳಗಿಲ್ಲದಿರೆ, ನಾವು
ಆವ ಗತಿಯೊಂದುತಿರ್ದೆವೋ? ತನ್ನ ಹಿತ ಮರೆತು
ಜೀವಿತವನರ್ಪಿಸಿದನೆಮಗೆ ಸುಖವಿಡಲು,

ಸೀ:— ಆವ ಸಂಕಲ್ಪವೋ? ಆವ ಸಾಧನೆಯೊ?
ಪೊರಸೂಸಲಿ—ಏನಿರ್ದುದೋ ಮನದಿ?

ರಾ:— ಹರುಷಚಿತ್ತದಿ ಸದಾ ಪರಿಚರ್ಯೆಯನು ಮಾಡಿ,
ಭ್ರಾಂತನಾದೆನ್ನ ಸಂತೈಸಿ, ಎಚ್ಚರಿಸಿ,
ವಿನಯದಲಿ ಕರ್ತವ್ಯ ಪಥಕೆನ್ನ ಕರೆದೊಯ್ದ
ಸೌಮಿತ್ರಿ ಮನದ ದೃಢವೆನಿಸಿತು? ನಿಗ್ರಹವೆನಿತು?
ಎನಿತು ಸ್ವಾರ್ಥತ್ಯಾಗ? ಹೃದಯ ದೌರ್ಬಲ್ಯವೆನಿತೆನಗೆ!
ಆ ವೀರ ಬ್ರಹ್ಮಚಾರಿಗೆ ತಕ್ಕ ಸತಿಯಾಗಿ,
ಅವನ ಸಾಧನೆಗುಚಿತಪಥವಿಡಿದು ತಪವೆಸಗಿ,
ನಿಂದ ತಂಗಿಯ ನೋಡು! ಹಿರಿಯರಾರಿಲ್ಲಿ?

ಸೀ:— ಬಗೆಯಲರಿಯೆನು ಇವರ ಅದ್ಭುತದ ಜೀವನವ.
ಸತ್ತ್ವಕ್ಷಾತ್ರಗಳೊಂದರೊಳಗೊಂದು ಬೆರೆದು,
ಪರಿಪೂರ್ಣವಾದ ಸಿದ್ಧಿಯನೊಂದಿಹರು. ಇವರ
ಸಂಸ್ಕಾರ ಬಲವೆನಿತೊ? ಧನ್ಯರಿವರೇ ಜಗದಿ.

ಮನೆಗೆ ಕರೆದೊಯ್ಯಲನುಗೊಳಿಸು; ತ್ವರೆಗೊಳಿಸು.

ಸೀ:— ನಿನ್ನ ಸೌಮಿತ್ರಿಯನು ಕರೆಯೆ, ಬಾ, ನೀನು

ರಾ:— ಅವರೆಮ್ಮ ಕಂಡು ನಾಚುವರೇನೊ ?

' ಭಾರತಿ '

—ಶ್ರೀಮತಿ ತಿರುಮಲೆ ರಾಜಮ್ಮನವರು

## ಅಭ್ಯಸನಗಳು

ಪ್ರಶ್ನೆಗಳು:—

೧. ದೀರ್ಘಕಾಲದ ವಿಯೋಗದಲ್ಲಿ ಊರ್ಮಿಳೆಯು ದಿನಗಳನ್ನು ಹೇಗೆ ಕಳೆದಳು ? ಲಕ್ಷ್ಮಣನು ಕರ್ಮಯೋಗಿಯು ಹೇಗೆ ?

೨. ನಿಜವಾದ ಗೆಲುವು ಯಾವುದು ?

೩. ಊರ್ಮಿಳೆಯ ನೋಟವು ಅಚ್ಚರಿಯೊಳಚ್ಚರಿಯು ಏಕೆ ?

೪. ಸೀತೆಯು ರಾಮನನ್ನು ಏನೆಂದು ಮೂದಲಿಸುತ್ತಾಳೆ ?

೫. ಸೀತೆಯ ಸ್ಮೃತಿಯಲ್ಲಿದ್ದ ಚಿತ್ರಕೂಟದ ನೆನಹು ಎಂತಹದು ?

೬. ಊರ್ಮಿಳಾ-ಲಕ್ಷ್ಮಣರು; ಸೀತಾ-ರಾಮರಿಗಿಂತ ಶ್ರೇಷ್ಠರು ಹೇಗೆ ?

೭. ಊರ್ಮಿಳೆ-ಲಕ್ಷ್ಮಣರ ಸಿದ್ಧಿಯು ಪರಿಪೂರ್ಣವಾದುದೆಂದು ಹೇಗೆ ಹೇಳುವಿರಿ.

ಭಾಷಾಭ್ಯಾಸ:—

ಸ್ಪಷ್ಟೀಕರಿಸಿರಿ.

೧. ನೋಡಿವರ ನಿಃಸ್ವಾರ್ಥ ಜೀವನವ

೨. ' ನೋಡವನ ಮನವೆಂತಿಹುದು
ಭೀತಿಯೇ ಸಂಶಯವೆ '
ಹೀಗೆ ಸೀತೆಯು ಹೇಳುವ ಕಾರಣವೇನು ?

ಶಬ್ದವಿಚಾರ:—

೧. ನಿಮ್ಮ ವಾಕ್ಯಗಳಲ್ಲಿ ಕೆಳಗಿನ ಜೋಡುನುಡಿಗಳನ್ನು ಉಪಯೋಗಿಸಿರಿ:—
ಸ್ಮೃತಿ—ವಿಸ್ಮೃತಿ, ಹಗಲು—ಇರುಳು, ಬೆಳಗು—ಬೈಗು.

೨. ಕೆಳಗಿನ ಕನ್ನಡ ಶಬ್ದಗಳಿಗೆ ಸಮಾನಾರ್ಥವುಳ್ಳ ಸಂಸ್ಕೃತ ಶಬ್ದಗಳನ್ನು ಕೊಡಿರಿ.
ಗೆಲವು, ನಲಿವು, ತಣಿವು.

೩. ಕೆಳಗಿನ ತದ್ಭವಗಳಿಗೆ ತತ್ಸಮಗಳನ್ನು ಕೊಡಿರಿ:—
ಕಜ್ಜ, ನಿಚ್ಚ, ರಕುತ, ಅಚ್ಚರಿ, ಆಸರೆ.

೪. ಕೆಳಗಿನವುಗಳಿಗೆ ವಿರುದ್ಧಾರ್ಥದ ಶಬ್ದಗಳನ್ನು ಕೊಡಿರಿ:—
ವಿಸ್ಮೃತಿ, ಮಲಿನ, ಸ್ವಾರ್ಥ, ವಿಯೋಗ.

೫. ಗೆಲ್ಲು ಈ ಧಾತುವಿನಿಂದ ಗೆಲವು—ಈ ಕೃದಂತವಾಗಿದೆ. ಇದರಂತೆ:—

**ವಾಕ್-ಶಿಕ್ಷಣ.—**

ಧರ್ಮದೇವಿಯು ನೀನು ......ಪ್ರೇಮನಿಧಿ ನೀನು.

ಲಕ್ಷ್ಮಣನ ಈ ಮಾತುಗಳನ್ನು ಕಂಠಪಾಠ ಮಾಡಿರಿ

**ಚರ್ಚೆ:—**

ರಕ್ತಪಾನದ ತೋಳಗೆಲವೊಂದು ಗೆಲವೇ?

**ಬರೆಹ:—**

ಊರ್ಮಿಳೆಯ ತ್ಯಾಗದ ಹಿರಿಮೆಯನ್ನು ಹೇಳಿರಿ

---

# ೧೯. ಲೋಕೋದ್ಧಾರದ ಆವೇಶದಲ್ಲಿ ನಡೆದ ಅತ್ಯಾಚಾರಗಳು

[ತಲೆತಿರುಕ ಪ್ರಚಾರಕರ ಉತ್ಸಾಹ, ಆವೇಶ, ಅರ್ಭಟೆಗಳ ಮೂಲಕ ಧರ್ಮಪ್ರಸಾರದ ಹೆಸರಿನಲ್ಲಿ ಅನೈತಿಕ ಆಚರಣೆಗಳು ನಡೆಯುವವು. ಸಾಮಾಜಿಕ ಹಾಗು ರಾಜ್ಯಕ್ರಾಂತಿಯಿಂದ ಲೋಕದೊಳಗಿನ ಅಸಮಾನತೆ ವೈಷಮ್ಯಗಳನ್ನು ನಿರ್ಮೂಲ ಮಾಡಬೇಕೆಂಬ ಸೋಗಿನಲ್ಲಿ ಮನುಷ್ಯತ್ವಕ್ಕೆ ಕಲಂಕ ಹಚ್ಚುವ ಅನ್ಯಾಯಗಳು ಆಗುವವು, ಇತಿಹಾಸದಿಂದ ಅನುಭವಕ್ಕೆ ಬಂದಿರುವ ಧರ್ಮಕ್ರಾಂತಿ, ರಾಜ್ಯಕ್ರಾಂತಿಗಳಲ್ಲಿ ಆಗುವ ಈ ಬಗೆಯ ಅತ್ಯಾಚಾರ, ಅನಾಚಾರಗಳಿಂದ ಎಚ್ಚತ್ತು ಇನ್ನು ಮುಂದಿನ ಪೀಳಿಗೆಯವರು ಲೋಕೋದ್ಧಾರದ ಕಾರ್ಯದಲ್ಲಿ ಯಾವ ಬಗೆಯ ಎಚ್ಚರಗೊಳ್ಳಬೇಕೆಂಬುದನ್ನು ಪ್ರಸ್ತುತ ವರ್ಣನಯಿಂದ ಮನಗಾಣಬಹುದಾಗಿದೆ.

ಈ ವರ್ಣನೆಯು ಸರ್ ಸಾಮ್ಯುಅಲ್ ಹೋರ ಅವರು ರಶಿಯಾದಲ್ಲಿ ಇದ್ದಾಗಿನ ನೆನಪುಗಳನ್ನು ಸಂಗ್ರಹಿಸಿ ಬರೆದ ಗ್ರಂಥದಲ್ಲಿ ಇದೆ. ಇದನ್ನು ಶ್ರೀ. ಮಹದೇವಭಾಯಿ ದೇಸಾಯಿಯವರು ಮಹಾತ್ಮಾಜಿಯವರೊಡನೆ ಸೆರೆಮನೆಯಲ್ಲಿದ್ದಾಗ ತಮ್ಮ ದಿನಚರಿಯಲ್ಲಿ ಎತ್ತಿಕೊಂಡಿರುವರು. ಸಾಬರಮತಿಯ ಆಶ್ರಮದ ವಿದ್ಯಾರ್ಥಿಗಳಿಗೆ ಇದು ಉಪಯುಕ್ತ ವಿಷಯವೆಂದು ಅದನ್ನು ಪತ್ರಮುಖಾಂತರವಾಗಿ ಬರೆದು ಕಳಿಸಿದರು.

ಇದು ನಮ್ಮ ನಾಡಿನ ತರುಣರಿಗೂ ಉದ್ಬೋಧಕವಾದೀತೆಂದು ಹಾರಯಿಕೆಯಿದೆ.]

ರಸಿಯದ ಗ್ರಾಂಡ ಡ್ಯೂಕ ಸರ್ಜ ಎಂಬವನ ಹೆಂಡತಿ, ಎಲಿಜಾಬೆಥಳು ಇಂಗ್ಲಂಡ ಮತ್ತು ಜರ್ಮನಿಯ ರಾಜಕುಟುಂಬಕ್ಕೆ ಸಂಬಂಧಿಸಿದವಳು. ಸುಶಿಕ್ಷಿತಳಾದ ಪಾಪಭೀರು ಸ್ತ್ರೀ. ಗ್ರಾಂಡ ಡ್ಯೂಕನು ರಶಿಯಾದ ಸಮ್ರಾಟ್ ಝಾರನಿಗೆ ತಕ್ಕನು. ಈತನಿಗೆ ಝಾರನ ಕ್ರೂರವಾದ ಆಳಿಕೆಯ ರೀತಿಯು ಮನಸ್ಸಿಗೆ ಬಂದಿದ್ದಿಲ್ಲ. ಝಾರನಿಗೆ ತಿಳಿಹೇಳಿ ಜೀತದ ರೈತರನ್ನು ಮುಕ್ತಮಾಡಿಸಿದ್ದನು. ಅಲ್ಲದೆ ಜನರಿಗೆ ಹೆಚ್ಚಿನ ರಾಜಕೀಯ ಸ್ವಾತಂತ್ರ್ಯವನ್ನು ದಯಪಾಲಿಸಬೇಕಾಗಿ ಸಲಹೆ ಕೊಟ್ಟಿದ್ದನು. ಪ್ರಜೆಗಳು ಬಂಡಾ ಎದ್ದು ಕೋದರೆ ಪಡಿಸಿದಾಗ ಅನಿವಾರ್ಯವಾಗಿ

ತಿಳಿದು ಹೊದಲೇ ತೋರುವ ಔದಾರ್ಯದಲ್ಲಿ ಶ್ರೇಯಸ್ಸಿದೆ ಎಂದೂ ಝಾರನಿಗೆ ಉಪದೇಶಿಸುತ್ತಿದ್ದನು.

ಇತ್ತ ಝಾರನ ದಬ್ಬಾಳಿಕೆಗೆ ಜನ ಬೇಸತ್ತಿತ್ತು. ರಶಿಯದಲ್ಲೆಲ್ಲ ಜನ ಕ್ರಾಂತಿಯನ್ನೇ ಬಯಸುತ್ತಿತ್ತು. ರಾಜ್ಯಕ್ರಾಂತಿಯ ಪೂರ್ವಸಿದ್ಧತೆಯೆಂದು ರಾಜ ವಂಶದ ಅಧಿಕಾರಿಗಳ ಕೊಲೆಯ ಒಳಸಂಚುಗಳು ನಡೆದುವು. ಅನೇಕ ತರುಣರು ಈ ಬಗೆಯ ಗುಪ್ತಸಂಘಗಳ ಪ್ರಭಾವಕ್ಕೆ ಒಳಗಾದರು. ಕೊಲೆಸುಲಿಗೆಗಳು ತಮ್ಮ ನಾಡಿನ ಉದ್ಧಾರಕ್ಕೆ ಅವಶ್ಯಕವೆಂದು ಅವರ ಪ್ರಾಮಾಣಿಕವಾದ ಭಾವನೆಯಾಗಿತ್ತು. ಇಂತಹ ಒಬ್ಬ ತರುಣನು ಎಲಿಜಾಬೆಥಳ ಗಂಡನ ಕೊಲೆ ಮಾಡಿದನು. ಈ ಕೊಲೆ ಯಲ್ಲಿ ಅಂಗವಿದ್ದ ತರುಣರಲ್ಲಿ ಕಾಲೀವ್ ಎಂಬವನೂ ಒಬ್ಬನಾಗಿದ್ದನು. ಇವನು ಸ್ವಚ್ಛಂದ ವೃತ್ತಿಯ ತರುಣ ಕವಿ. ಶಾಂತಿಪ್ರಿಯವಾದ ಒಂದು ಕುಲೀನ ಕುಟುಂಬ ದಲ್ಲಿ ಹುಟ್ಟಿದವನು. ಕಾಲೇಜಿನಲ್ಲಿರುವಾಗ ಈತನು ಗುಪ್ತಕ್ರಾಂತಿಕಾರರ ಸಂಗಡಕ್ಕೆ ಸೇರಿದವನೆಂಬ ಸಂಶಯದಿಂದ ಆತನಿಗೆ ಶಿಕ್ಷೆಯನ್ನು ವಿಧಿಸಲಾಯಿತು. ಇದರಿಂದ ಈ ತರುಣನ ಜೀವನದ ದಿಕ್ಕು ಬದಲಾಯಿತು. ಆದರ್ಶವಾದಿಯಾದ ಸ್ವತಂತ್ರ ವೃತ್ತಿಯ ಕಾಲೀವನು ತನ್ನ ದೇಶದ ಬಿಡುಗಡೆಗಾಗಿ ತಾನು ಯಾವ ತ್ಯಾಗಕ್ಕೂ ಹಿಂದೆಗೆಯತಕ್ಕದ್ದಲ್ಲವೆಂದು ನಿರ್ಧರಿಸಿದನು. ರಾಜ್ಯಕ್ರಾಂತಿಗಾಗಿ ಪ್ರತಿಜ್ಞಾಬದ್ಧ ನಾದನು.

ಗ್ರಾಂಡ ಡ್ಯೂಕ್ ಸರ್ಜನ ಕೊಲೆ ಮಾಡಿ ಝಾರನನ್ನು ಎಚ್ಚರಿಸಬೇಕೆಂದು ಕ್ರಾಂತಿಕಾರರ ಒಂದು ಸಂಗಡವು ಗೊತ್ತುಮಾಡಿತು. ಕಾಲೀವ್‌ನ ಕಡೆಗೆ ಈ ಕೆಲಸವನ್ನು ಒಪ್ಪಿಸಲಾಯಿತು. ಎಲಿಜಾಬೆಥಳೊಡನೆ ಸರ್ಜನು ಇದ್ದಾಗ ಕಾಲೀ ವನು ಅವನ ಮೇಲೆ ಬಾಂಬು ಎಸೆಯಲಿಲ್ಲ. ಅಬಲೆಯ ಬಲಿಯನ್ನು ತಕ್ಕೊಳ್ಳುವುದಕ್ಕೆ ಆತನ ಮನಸ್ಸು ಒಪ್ಪಲಿಲ್ಲ. ಕೆಲ ದಿನಗಳ ತರುವಾಯ ಸರ್ಜನು ಒಬ್ಬನೇ ಹೊರಟಾಗ ಅವನ ಬಂಡಿಯನ್ನು ಬಾಂಬಿನಿಂದ ಹಾರಿಸಿದನು.

ಹಿಂದಿನಿಂದ ಗ್ರಾಂಡ್ ಡಚೆಸಳು ಜೇಲಿನಲ್ಲಿ ಈ ಮನುಷ್ಯನಿಗೆ ಭೆಟ್ಟಿ ಯಾಗಲು ಹೋಗುತ್ತಾಳೆ. ಈ ದೃಶ್ಯವು ಯಾವುದೇ ನಾಟಕದ ಯಾವುದೇ ಸುಂದರ ವಾದ ದೃಶ್ಯವನ್ನು ಮರೆಯಿಸುವಂತಹದಾಗಿದೆ. ಸಾಯುವ ಕಾಲಕ್ಕೆ ರಾಗ ದ್ವೇಷಾ ದಿಗಳನ್ನು ಬಿಡಬೇಕು. ಮತ್ತು ಕೊಲೆ ಮಾಡಿದವರಿಗೆ ದೇವರ ಧ್ಯಾನವನ್ನು ಮಾಡಲು ಸಂಧಿ ಒದಗಿಸಿಕೊಡಬೇಕು, ಎಂಬ ಶ್ರದ್ಧೆಯುಳ್ಳವನಾಗಿದ್ದ ಸರ್ಜನು ಧಾರ್ಮಿಕ ಗೃಹಸ್ಥನಾಗಿದ್ದನು. ಗಂಡನ ಉದಾತ್ತ ಭಾವನೆಗಳನ್ನು ಅರಿತ ಈ ಸತೀಮಣಿಯು ಕಾರಾಗೃಹಕ್ಕೆ ಹೋಗಿ ಆ ಕೊಲೆಗಡಕನನ್ನು ಕಂಡು ಮಾತನಾಡಿಸಿ ಆತನ ಹೃದಯ ಪರಿವರ್ತನ ಮಾಡಬೇಕೆಂದು ಬಯಸಿದಳು. ಪತಿಯ ಕೊಲೆ ಮಾಡಿದವನಿಗೆ ಭೆಟ್ಟಿಯಾಗಲು ಜೇಲಿಗೆ ಹೋದಳು. ಎದೆದುಂಬಿ ಬಂದ ಅಂತಃ ಕರಣದ ಮಾತುಗಳನ್ನಾಡಿದಳು. ಇದಕ್ಕಿಂತಲೂ ಹೃದಯದ್ರಾವಕವಾದ ಭೆಟ್ಟಿಯು

ಇನ್ನಾವುದಾದರೂ ಇರಬಹುದೇ? ರಶಿಯದ ಸಮ್ರಾಟನ ಮಹಾರಾಣಿಯ ಅಕ್ಕನಾದ ಈ ಉಚ್ಚಕುಲೀನ ರಮಣಿಯು ತನ್ನ ಪತಿಯ ಕೊಲೆ ಮಾಡಿದುದಕ್ಕಾಗಿ ಪಶ್ಚಾತ್ತಾಪಪಡಿಸಿ, ದೇವರ ಕ್ಷಮೆ ಕೋರಲು ಆತನ ಮನವೊಲಿಸುತ್ತಿದ್ದಾಳೆ! ಆತನ ಕೈಯಲ್ಲಿ ಬೈಬಲ್ಲಿಟ್ಟು ದಯಾಧರ್ಮದ ಉಪದೇಶ ಮಾಡುತ್ತಿದ್ದಾಳೆ. ಅವಳ ಎದುರು ತನ್ನ ಕಲ್ಪನಾಲೋಕದಲ್ಲಿ ವಿಹರಿಸುವ ಕ್ರಾಂತಿಕಾರ ಯುವಕನಿದ್ದಾನೆ. ಆತನೂ ತಾನೊಂದು ಮಹಾಕಾರ್ಯ ಸಾಧಿಸಿದೆನೆಂಬ ಆತ್ಮತೃಪ್ತಿಯಲ್ಲಿದ್ದಾನೆ. ಈ ಕೊಲೆಯಿಂದ ಜಗತ್ತು ಇನ್ನು ಮೊದಲಿಗಿಂತಲೂ ಹೆಚ್ಚು ಒಳ್ಳೆಯದಾಗುವುದೆಂದು ಆತನ ದೃಢ ನಂಬಿಗೆಯಾಗಿದೆ. ಹೀಗೆ ಲೋಕಹಿತಕ್ಕಾಗಿ ಆತ್ಮಾಹುತಿಯನ್ನೀವ ಸಂಧಿ ದೊರೆತುದಕ್ಕಾಗಿ ಉಬ್ಬಿನಲ್ಲಿದ್ದಾನೆ.

ಇಂಥ ಸನ್ನಿವೇಶದಲ್ಲಿ ಒಮ್ಮೆಲೆ ಜೇಲಿನ ಕೋಣೆಯ ಬಾಗಿಲು ತೆರೆಯಿತು. ಡಚೆಸಳು ಒಬ್ಬಳೇ ಒಳಗೆ ಹೋದಳು. ಕಾಲೀವನು ಅಚ್ಚರಿಯಿಂದ ಕೇಳಿದನು. "ತಾವು ಯಾರು? ಏತಕ್ಕೆ ಬಂದೀದ್ದಿರಿ?"

"ನಾನು ಗ್ರಾಂಡ್ ಡ್ಯೂಕನ ಮಡದಿ ಅವರು ನಿನಗೆ ಮಾಡಿದ ಅನ್ಯಾಯವಾದರೂ ಏನು?" ಎಂದು ದುಃಖವಿಹ್ವಲೆಯಾದ ಎಲಿಜಾಬೆಥಳು ಮೃದು ಮಾತಿನಲ್ಲಿ ಕೇಳಿದಳು.

**ಕಾಲಿವ್** : "ನನಗೆ ನಿಮ್ಮ ಕೊಲೆಗೆಯ್ಯ ಇಚ್ಛೆಯಿದ್ದಿಲ್ಲ. ನಿಮ್ಮ ಪತಿಯ ಜೊತೆಗೆ ನೀವು ಇದ್ದಾಗ, ಹಲವು ಬಾರಿ ನಾನು ಅವರನ್ನು ಕಂಡಿದ್ದೆ. ಆಗ ನಾನು ಬಾಂಬು ಎಸೆಯಲಿಲ್ಲ."

**ಎಲಿಜಾಬೆಥ** : "ಅವರ ಕೊಲೆಯೆಂದರೆ ನನ್ನ ಕೊಲೆಯೂ ಅದಂತೆಯೆ ಎಂದು ನಿನಗೆ ಹೊಳೆಯಲೇ ಇಲ್ಲವೇ? ನಿರಪರಾಧಿಯ ನೆತ್ತರ ಹರಿಸುವಾಗ ನಿನ್ನ ಹೃದಯದಲ್ಲಿ ಸ್ವಲ್ಪವೂ ಕನಿಕರವುಂಟಾಗಲಿಲ್ಲವೇ? ಆದುದಾಯ್ತು, ನಿನ್ನ ಸಾವೂ ಸಮೀಪಿಸಿದೆ, ಹೀನ ಕೃತ್ಯ ಮಾಡಿದ್ದಕ್ಕಾಗಿ ದೇವರಲ್ಲಿ ಮೊರೆಯಿಡು. ನಿನಗಾಗಿ ಈ ಬೈಬಲ್ಲು ತಂದಿದ್ದೇನೆ."

ಎಲಿಜಾಬೆಥಳು ಆತನಿಗೆ ಆ ಪವಿತ್ರ ಗ್ರಂಥವನ್ನು ಕೊಟ್ಟಳು. ಕಾಲಿವನು ಪ್ರತಿಯಾಗಿ ಅವಳಿಗೆ ತನ್ನ ದಿನಚರಿಯನ್ನು ಕೊಟ್ಟು ಬಿನ್ನವಿಸಿದನು. "ನಾನು ಬೈಬಲ್ಲೋದುವೆ, ನೀವು ನನ್ನ ದಿನಚರಿ ಓದಿರಿ. ನಾನು ಕೊಲೆ ಏಕೆ ಮಾಡಬೇಕಾಯ್ತು, ನಮ್ಮ ಧ್ಯೇಯಸಾಧನೆಯಲ್ಲಿ ಅಡ್ಡಬರುವವರನ್ನು ನಾಶ ಮಾಡುವ ಪ್ರತಿಜ್ಞೆಯನ್ನು ನಾವು ಏಕೆ ಮಾಡಿದೆವು, ಎಂಬುದೆಲ್ಲವೂ ನಿಮಗೆ ಈ ದಿನಚರಿಯಿಂದ ತಿಳಿಯಬಹುದು."

ಇಬ್ಬರೂ ಒಬ್ಬರೊಬ್ಬರನ್ನು ಬೀಳ್ಕೊಂಡರು. ಆ ಯುವಕನು ಅದಿರದ ಎದೆಯಿಂದ ಸಾವನ್ನು ಅಪ್ಪಿಕೊಂಡನು.

ಎಲಿಜಾಬೆಥಳು ತನ್ನ ಎಲ್ಲ ಒಡವೆಗಳನ್ನೂ— ಮಂಗಲಚಿಹ್ನವಾದ ಉಂಗುರ

ವನ್ನು ಮೊದಲ್ಗೊಂಡು ಎಲ್ಲವನ್ನೂ ಮಾರಿಬಿಟ್ಟಳು, ಅದರಲ್ಲಿ ಒಂದು ಮೂರಾಂಶ ಭಾಗವನ್ನು ರಾಜ್ಯಕ್ಕೆ, ಒಂದು ಮೂರಾಂಶವನ್ನು ಆಪ್ತೇಷ್ಟರಿಗೆ. ಒಂದು ಮೂರಾಂಶ ವನ್ನು ಧರ್ಮಕಾರ್ಯಕ್ಕೆ—ದವಾಖಾನೆ, ಅನಾಥಾಲಯ, ಪಾಠಶಾಲೆ, ಆರೋಗ್ಯಾಲಯ ಮುಂತಾದವುಗಳಿಗೆ—ಕೊಟ್ಟಳು, ತಾನು ಸ್ವತಃ ಅರಮನೆಯನ್ನು ತೊರೆದು, ಬ್ರಹ್ಮಚಾರಿಣಿಯರ ಒಂದು ಸೇವಾಶ್ರಮವನ್ನು ಸ್ಥಾಪಿಸಿ, ಅದರಲ್ಲಿ ಇರತೊಡಗಿದಳು. ಇದೊಂದು ಅಪೂರ್ವವಾದ ಆದರ್ಶ ಸಂಸ್ಥೆಯಾಯಿತು. ಇಂಥ ಸಂಸ್ಥೆಗಳಲ್ಲಿ ಸೇರುವವರು ಪಾಠ, ಪೂಜೆ, ಧ್ಯಾನ, ಜಪ, ತಪ, ವ್ರತ, ಉಪವಾಸ ಮುಂತಾದವುಗಳಲ್ಲಿಯೇ ಮಗ್ನರಾಗಿರುತ್ತಾರೆ. ಎಲಿಜಾಬೆಥಳು ತನ್ನ ಆಶ್ರಮ ದಲ್ಲಿ ಈ ವ್ರತಾಚಾರಗಳನ್ನು ಮಾತ್ರವಲ್ಲ, ಜೊತೆಗೆ ಸಮಾಜಸೇವೆಯ ಸೋಂಪಿ ಯನ್ನೂ ಕೈಕೊಂಡಳು. ನೂರಾರು ಸ್ತ್ರೀಯರು ಆಶ್ರಮಕ್ಕೆ ಬಂದು ಸೇರಿದರು. ಅವರಲ್ಲಿ ಇಪ್ಪತ್ತು ಮಹಿಳೆಯರು ಆಜೀವ ಬ್ರಹ್ಮಚರ್ಯದ ದೀಕ್ಷೆ ತಕ್ಕೊಂಡರು. ಈ ಆಶ್ರಮವಾಸಿಗಳಲ್ಲಿ ಕೆಲವರು ರಾಜಮನೆತನದವರಿದ್ದರು. ಬಡವರು ಬಲ್ಲಿದರು ಎಂಬ ಭೇದವಿಲ್ಲದೆ ಎಲ್ಲ ಬಗೆಯವರೂ ಅಕ್ಕತಂಗಿಯರಾಗಿ ಇಲ್ಲಿ ಒಡನಾಡಿಗಳಾದರು. ಜಪಾನದೊಡನೆ ಆದ ಯುದ್ಧದಲ್ಲಿ ಸಿಪಾಯಿ ವೇಷ ಧರಿಸಿ, ರಶಿಯದ ಪಕ್ಷದಲ್ಲಿದ್ದು ಕಾದಿದ ಒಬ್ಬ ತರುಣಿಯೂ ಈ ಆಶ್ರಮದಲ್ಲಿದ್ದಳು. ಶೌರ್ಯದ ಕೃತಿಗಾಗಿ ಆಕೆಗೆ ಬಹುಮಾನದ ಒಂದು ಪದಕವೂ ಸಿಕ್ಕಿತ್ತು. ಈ ಸೇವಾಶ್ರಮದ ಕೆಲಸವು ಒಳ್ಳೇ ಭರದಿಂದ ಸಾಗಿತು. ರಶಿಯಾದ ಹಲವೆಡೆಗಳಿಂದ ದಾಯಿಗಳ ಸಲುವಾಗಿ ಈ ಆಶ್ರಮಕ್ಕೆ ಬೇಡಿಕೆ ಬರುವಷ್ಟು ಇದರ ಕೆಲಸವು ಪ್ರಸಿದ್ಧಿಯನ್ನು ಹೊಂದಿತ್ತು. ಇಲ್ಲಿ ಔಷಧೋಪಚಾರ ಮಾಡುವ ಶಿಕ್ಷಣವೂ ಕೊಡಲ್ಪಡುತ್ತಿತ್ತು. ಈ ದವಾಖಾನೆಗೆ ಅತ್ಯಂತ ಕಷ್ಟಸಾಧ್ಯವಾದ ರೋಗಿಗಳು ಕೂಡ ಬರುತ್ತಿದ್ದರು. ಎಲಿಜಾಬೆಥಳು ಒಳ್ಳೆಯ ಕೈಗುಣದ ಶ್ರೇಷ್ಠ ಉಪಚಾರಕಳೆಂದು ಕೀರ್ತಿ ಹಬ್ಬಿತು. ಈ ಅನಾಥಾಲಯವು ಇಡಿ ಯುರೋಪದಲ್ಲಿಯೇ ಅತ್ಯಂತ ಉತ್ಕೃಷ್ಟವೆಂದು ಖ್ಯಾತಿಯಾಯಿತು. ಇಂತಹ ಪರೋಪಕಾರಿ ಸಂಸ್ಥೆಗೆ ನೆರವಾಗುವಲ್ಲಿ ತಮ್ಮ ಧನದ ಸದ್ವಿನಿಯೋಗವಾದಂತಾಗುವದೆಂದು ಅನೇಕ ಕಡೆಗಳಿಂದ ಕೊಡುಗೆಗಳು ಬರತೊಡಗಿದವು

ಕ್ಷಯರೋಗಿಗಳ ಉಪಚಾರಕ್ಕಾಗಿ ಒಂದು ಸೇವಾಶ್ರಮವನ್ನು ಸ್ಥಾಪಿಸಿ ಅಲ್ಲಿ ಬಡವರಿಗೆ ಮುಕ್ತದ್ವಾರವಿಟ್ಟಳು. ತೀರ ಅಸಾಧ್ಯವೆನಿಸಿದ ರೋಗಿಗಳ ಆರೈಕೆಯನ್ನು ಅವಳು ಸ್ವತಃ ನಡೆಸುತ್ತಿದ್ದಳು. ಇದೆಲ್ಲವೂ ತಿಳಿದಕೊಡಲೆ 'ಮಾಸ್ಕೊ ಸಮಾಜ'ದ ಆತ್ಮವು ಸಹ ಜಾಗ್ರತವಾಯಿತು. ಅವಳ ಸುಂದರ ಚಾರಿತ್ರ್ಯ, ಹಗಲಿರುಳು ನಡೆವ ಅವಳ ಜಪ–ತಪ, ಧ್ಯಾನ–ಧಾರಣ ಇವುಗಳಿಂದ ಅವಳ ನಿಸರ್ಗದತ್ತ ಸೌಂದರ್ಯದ ತೇಜಸ್ಸು ಇಮ್ಮಡಿಸಿತೆಂದು ನಿಕಟವರ್ತಿಯಾದ ಮಿತ್ರರು ನನಗೆ ಹೇಳಿದರು. ಇಡಿಯ ದಿನ ಕೆಲಸಗಳನು. ಮುಗಿಸಿ ರಾತ್ರಿಯ ಬಹು

ಭಾಗವನ್ನು ಧ್ಯಾನ-ಭಜನೆಗಳಲ್ಲಿ ಕಳೆಯುತ್ತಿದ್ದಳು. ಇವಳು ಒಂದೆರಡು ಗಳಿಗೆ ಮಾತ್ರ ನಿದ್ರೆ ಮಾಡುತ್ತಿದ್ದಳು. ಅದು ಕೂಡ ಹಲಿಗೆಯ ಮೇಲೆ ಮಲಗಿಕೊಂಡು! ಊಟದಲ್ಲಿ ಮದ್ಯ ಮಾಂಸಗಳನ್ನು ಬಿಟ್ಟು ಎಷ್ಟೋ ದಿನಗಳಾಗಿದ್ದುವು. ಅವಳು ತನ್ನ ಬಾಳಿನಲ್ಲಿ ಭಕ್ತಿ ಮತ್ತು ಕರ್ಮಯೋಗಗಳ ಮಿಲನವನ್ನು ಚೆನ್ನಾಗಿ ಸಾಧಿಸಿದ್ದಳು.

ಯುದ್ಧಕಾಲದಲ್ಲಿ ಅವಳು ಈ ಧಾರ್ಮಿಕ ಸಂಸ್ಥೆಯ ಮುಖಾಂತರ ರೋಗಿಗಳ ಶುಶ್ರೂಷೆಯ ಕಾರ್ಯವನ್ನು ಸಾಗಿಸಿದಳು. ಗಾಯಾಳುಗಳಿಗಾಗಿ ಸಿಗುವ ಧನಸಹಾಯದೊಳಗಿಂದ ಜನರು ಹಣವನ್ನು ಅಪಹರಿಸುತ್ತಾರೆಂದು ತಿಳಿದ ಕೂಡಲೆ ಅವಳು ಪ್ರತಿಯೊಬ್ಬ ದಾನಿಗೆ ಪಾವತಿಯನ್ನು ಕಳಿಸುವ ಪದ್ಧತಿಯನ್ನು ರೂಢಿಯಲ್ಲಿ ತಂದಳು. ಅವಳ ಜೀವನದ ಕಠೋರ ಪರೀಕ್ಷೆಯಾಗುವುದು ಇನ್ನೂ ಮುಂದೆ ಇದ್ದಿತು. ಅವಳು ಜರ್ಮನ್ ರಾಜವಂಶದವಳು. ಮೊದಲನೆಯ ಮಹಾಯುದ್ಧದಲ್ಲಿ ರಶಿಯನ್ನರು ಜರ್ಮನ್ನರ ಕಡು ಹಗೆಗಳಾಗಿದ್ದರು. ಆದರಿಂದ ರಶಿಯದ 'ಜರ್ಮನ್ ವಿರೋಧಿ' ಪುಂಡ ಜನರ ಕಣ್ಣು ಇವಳ ಸಂಸ್ಥೆಯ ಕಡೆಗೆ ಹೊರಳಿತು. ಆದರೆ ಈ ಸಂಸ್ಥೆಯಲ್ಲಿ ರಶಿಯದ ಸಲುವಾಗಿಯೇ ಪ್ರತಿಯೊಂದು ಕಾರ್ಯವೂ ಜರುಗುತ್ತಿತ್ತು. ಆದರೂ ಅವಳ ಸಂಸ್ಥೆಯನ್ನು ಶತ್ರುಗಳ ಸಹಾಯಕೇಂದ್ರವೆಂದು ತಿಳಿಯಲಾಯಿತು. ಈ ಆರೋಪ ಹೊರಿಸಿ ಒಮ್ಮೆ ಪುಂಡ ಜನರ ಒಂದು ತಂಡವು ಆಶ್ರಮವನ್ನು ಸುಡುವದಕ್ಕಾಗಿ ಏರಿ ಬಂತು. ಆದರೆ ಮಾಸ್ಕೋದ ಮೇಯರರು ಈ ತಲೆತಿರುಕರನ್ನು ತಡೆದು ಆಶ್ರಮವನ್ನು ಬೆಂಕಿಯ ಬಾಯಿಂದ ಉಳಿಸಿದರು. ಎಲಿಜಾಬೆಥಳ ತಂಗಿಯು ಝಾರನ ರಾಣಿಯಾಗಿದ್ದಳು. ಅವಳಿಗೆ ಎಲಿಜಾಬೆಥಳು ಯಾವಾಗಲೂ ಒಳ್ಳೆಯ ಸಲಹೆಯನ್ನೇ ಕೊಡುತ್ತಿದ್ದಳು. ಮಹಾರಾಣಿಗೆ ಅಕ್ಕನ ಉಪದೇಶವು ರುಚಿಸಲಿಲ್ಲ. ಇಬ್ಬರೂ ಅಕ್ಕತಂಗಿಯರು ಮೇಲಿಂದ ಮೇಲೆ ಭೆಟ್ಟಿಯಾಗುವುದೂ ನಿಂತಿತು.

೧೯೧೭ರಲ್ಲಿ ಕಮ್ಯುನಿಸ್ಟ ಕ್ರಾಂತಿಯ ಕಾಲದಲ್ಲಿ, ಕೊಲೆ ಸುಲಿಗೆಗಳಿಂದ ಹಿಗ್ಗುವ ನೀಚರ ಕ್ರೂರ ಪ್ರವೃತ್ತಿಗಳಿಗೆ ಮತ್ತಷ್ಟು ಉಕ್ಕು ಬಂತು. ಹಲವರು ಇವಳನ್ನು ಜರ್ಮನಿಯ 'ಗುಪ್ತಚಾರಿಣಿ' ಎಂದು ಬಗೆದರು. ಇವಳನ್ನು ಸೆರೆ ಹಿಡಿಯಲು ಇವಳ ಆಶ್ರಮವನ್ನು ಮುತ್ತಿದರು. ಆಗ ಈ ಸಾಧ್ವಿಯು ಹೊರಗೆ ಬಂದು ಆ ಜನಜಂಗುಳಿಯ ಎದುರು ಕೈಜೋಡಿಸಿ ನಿಂತು, "ನಿಮಗೆ ಏನು ಬೇಕಾಗಿದೆ? ಬೇಕಾದುದನ್ನು ಬಂದು ತೆಗೆದುಕೊಂಡು ಹೋಗಿರಿ. ಇಲ್ಲಿ ಆಯುಧಗಳನ್ನಾಗಲಿ ಮದ್ದುಗುಂಡುಗಳನ್ನಾಗಲಿ ಅಥವಾ ಯಾವ ಗುಪ್ತಚಾರರನ್ನಾಗಲಿ ಬಚ್ಚಿಟ್ಟಿಲ್ಲ. ಇನ್ನದರೆ ಹುಡುಕಿ ತೆಗೆದುಕೊಂಡು ಹೋಗಿರಿ. ಆದರೆ ಎಚ್ಚರಿಕೆ— ಐದು ಜನರಿಗಿಂತ ಹೆಚ್ಚು ಜನರು ಒಳಗೆ ಬರತಕ್ಕದ್ದಲ್ಲ."

ಆವೇಶಗೊಂಡ ಜನಸಮುದಾಯವು ಒದರತೊಡಗಿತು. "ಇದಾವುದೂ ನಮಗೆ ಬೇಡ, ನಿಮ್ಮನ್ನು ಬಂಧಿಸಬೇಕಾಗಿದೆ ನಮ್ಮ ಸಂಗಡ ನಡೆಯಿರಿ."

ಎಲಿಜಾಬೆಥಳು ಶಾಂತಚಿತ್ತದಿಂದ ಉತ್ತರವಿತ್ತಳು. "ನಾನು ಬರಲು ಸಿದ್ಧಳಿದ್ದೇನೆ. ಆದರೆ ನಾನು ಈ ಸಂಸ್ಥೆಯ ಸಂಚಾಲಕಳು ಆದುದರಿಂದ ನನಗೆ ಎಲ್ಲವನ್ನೂ ನಿಮಗೆ ಕಾಯದೆಶೀರ ರೀತಿಯಿಂದ ಒಪ್ಪಿಸಿಕೊಡಲಿಕ್ಕೆಬೇಕು."

ಹೀಗೆ ಹೇಳಿ ಅವಳು ಆಶ್ರಮವಾಸಿ ಹೆಣ್ಣುಮಕ್ಕಳಿಗೆಲ್ಲ ಪ್ರಾರ್ಥನಾಮಂದಿರಕ್ಕೆ ಬರಲು ಹೇಳಿದಳು. ಆ ಜಂಗುಳಿಯೊಳಗಿನ ಐದು ಜನರಿಗೆ ಆಯುಧಗಳನ್ನು ಹೊರಗಿಟ್ಟು ಒಳಗೆ ಬರಬಹುದೆಂದು ಬಿನ್ನವಿಸಿದಳು ಅವಳು ಅವರನ್ನು ಯೇಸುವಿನ ಕ್ರಾಸದ ಹತ್ತಿರ ಕರೆದೊಯ್ದಳು. ಅವರು ಮಂತ್ರಮುಗ್ಧರಾದವರಂತೆ ಅವಳ ಹಿಂದೆ ನಡೆದರು. ಕ್ರಾಸಿಗೆ ನಮಸ್ಕರಿಸಿದರು. ಆಮೇಲೆ ಈ ತಪಸ್ವಿನಿಯು ಅವರನ್ನು ಕೇಳಿಕೊಂಡಳು— "ಇನ್ನು ನಿಮಗೆ ಬೇಕಾದದ್ದನ್ನು ಹುಡುಕಿ ತೆಗೆದುಕೊಂಡು ಹೋಗಿರಿ." ಮುಂದೆ ಅವರು ಅತ್ತಿತ್ತ ಅಲೆದಾಡಿ ಹೊರಗೆ ಬಂದು "ಇದಂತೂ ನಿರುದ್ಯೋಗಿಗಳ ಆಶ್ರಮ; ಮತ್ತಿನ್ನೇನೂ ಇಲ್ಲಿ ಇಲ್ಲ" ಎಂದು ಅಂದರು.

ಈ ಸುಂಟರಗಾಳಿಯು ಮಾಯವಾಯಿತು. ರಾಜ್ಯಕ್ರಾಂತಿಯಾಗಿ ಝಾರನು ಓಡಿಹೋದ ಮೇಲೆ, ಕ್ರಾಂತಿಕಾರರಲ್ಲಿ ಒಂದು ಪಂಗಡದವರು ಅಧಿಕಾರದ ಸೂತ್ರಗಳನ್ನು ತಮ್ಮ ಕೈಯಲ್ಲಿ ಸೆಳೆದುಕೊಂಡರು. ಅದರಿಂದ ಇನ್ನೊಂದು ಪಕ್ಷಕ್ಕೆ ಅಸಮಾಧಾನ ಉಂಟಾಯಿತು. ನಡುಗಾಲ ಸರಕಾರ ಸ್ಥಾಪಿಸಿದ ಮೊದಲನೆಯ ಪಕ್ಷದವರು ಎಲಿಜಾಬೆಥಳ ಬಳಿಗೆ ಬಂದು ಹೇಳಿದರು— "ಜನದ ತಲೆ ತಿರುಗಿದೆ, ನೀವು ಜೀವಂತ ಉಳಿಯಬೇಕಾಗಿದ್ದರೆ ಆಶ್ರಮ ಬಿಟ್ಟು ಕ್ರೆಮಲಿನದ ರಾಜಮಂದಿರಕ್ಕೆ ನಡೆಯಿರಿ. ಅಲ್ಲಿ ನೀವು ಹೆಚ್ಚು ಸುರಕ್ಷಿತ ಉಳಿಯಬಹುದು"

ಎಲಿಜಾಬೆಥಳು ಸತ್ಕಾರ್ಯದಲ್ಲಿಯೇ ತನ್ನ ಆಯುಷ್ಯವನ್ನು ಸವೆಸುವ ಸಂಕಲ್ಪ ಮಾಡಿದ್ದಳು. ಆದ್ದರಿಂದ ತನ್ನ ಜೀವ ಬದುಕಿಸಲು ಆಶ್ರಮ ಬಿಟ್ಟು ಹೋಗಲಿಕ್ಕೆ ಅವಳು ಒಪ್ಪಲಿಲ್ಲ. "ನಾನು ದೀನ ಅನಾಥರ ಸೇವೆಗಾಗಿ ಅರಮನೆಯನ್ನು ತೊರೆದೆ. ಮರಳಿ ಆ ಮಹಲಿನ ಆಶ್ರಯ ಪಡೆವ ಇಚ್ಛೆ ನನಗಿಲ್ಲ. ನಿಮ್ಮಿಂದ ಈ ಆಶ್ರಮದ ರಕ್ಷಣೆ ಮಾಡಲು ಆಗದಿದ್ದರೆ ಅದನ್ನು ದೇವರಿಗೆ ಒಪ್ಪಿಸಿರಿ."

ಹೀಗೆ ದೇಶದಲ್ಲೆಲ್ಲ ಕ್ರಾಂತಿಯ ದಾವಾನಲವು ಧಗಧಗಿಸುತ್ತಿತ್ತು. ಕೆಂಪು ಬಾವುಟದವರ ಕೊಲೆ ಸುಲಿಗೆಗಳಿಗೆ ಮಿತಿ ಉಳಿಯಲಿಲ್ಲ. ದಂಗೆಯಲ್ಲಿ ಆಪದ್ಗ್ರಸ್ತರಿಗೆ ನೆರವಾಗುವುದು, ರೋಗಿಗಳನ್ನು ಉಪಚರಿಸುವುದು, ಬಡವರಿಗೆ ನೆರವಾಗುವುದು, ಇನ್ನುಳಿದ ವೇಳೆಯನ್ನು ಭಜನ-ಕೀರ್ತನಗಳಲ್ಲಿ ಕಳೆಯುವುದು, ಈ ತಪಸ್ವಿನಿಯ ನಿತ್ಯ ಕಾರ್ಯವಾಗಿತ್ತು. ಬೊಲ್ಶೆವಿಕರು ಆಡಳಿತವನ್ನು ತಮ್ಮ ಕೈಯಲ್ಲಿ

೩. ಬಂಡು, ದೊಂಬಿ, ಕ್ರಾಂತಿ, ಯುದ್ಧ, ಗಲಾಟೆ, ಕೋಲಾಹಲ ಈ ಶಬ್ದಗಳನ್ನು ಅರ್ಥದ ತೀವ್ರತೆಯ ಕ್ರಮದಲ್ಲಿ ಬರೆಯಿರಿ.

**ವಾಕ್-ಶಿಕ್ಷಣ:—**

೧. ಸೆರೆಮನೆಯಲ್ಲಿ ಕಾಳೀವನು ಸಮಾಜಕಲ್ಯಾಣಕ್ಕಾಗಿ ತನಗೆ ಆತ್ಮಾಹುತಿಯನ್ನೀವ ಸಂಧಿ ದೊರೆತುದಕ್ಕಾಗಿ ಉಬ್ಬಿನಲ್ಲಿದ್ದಾಗ ಆತನು ತನ್ನ ಮನಸ್ಸಿಗೆ ಯಾವ ಬಗೆಯ ಸಮಾಧಾನವನ್ನು ತಂದುಕೊಳ್ಳುತ್ತಿರಬಹುದೆಂಬದನ್ನು ಕಾಳೀವನ ಪಾತ್ರನಾಗಿ ಅಭಿನಯಿಸಿರಿ.

೨. ಆತನ, ತನ್ನ ಒಂದು ಮನಸ್ಸು 'ನೀನು ಕೊಲೆ ಮಾಡಿದ್ದು ಅನ್ಯಾಯ' ಎಂದು ಕೂಗಿಕೊಳ್ಳುತ್ತಿರುವಾಗ ಆತನು ಅದನ್ನು ಹತ್ತಿಕ್ಕಲು ಬಳಸಿಕೊಂಡ ವಿಚಾರ ಗಳು ಯಾವುವು ಇರಬಹುದೆಂಬುದನ್ನು (ಎರಡು ಮನಸ್ಸಿನ ಪ್ರತೀಕಗಳಾಗಿ ವರ್ಗದ ಇಬ್ಬರು ವಿದ್ಯಾರ್ಥಿಗಳು ಸಂವಾದ ನಡೆಸಿರಿ. ಕೊನೆಗೆ ತಾನು ಮಾಡಿದ್ದೇ ಸರಿ ಎಂಬ ಎರಡನೆಯ ಮನಸ್ಸಿನ ಗೆಲುವನ್ನು ತೋರಿಸಿರಿ.

**ಚರ್ಚೆ:—**

ಸಮಾಜದ ಏಳ್ಗೆಯು ವಿಕಾಸಕ್ರಮದಲ್ಲಿ ಆಗುವುದಕ್ಕಿಂತ ಕ್ರಾಂತಿಯಿಂದಲೇ ಚೆನ್ನಾಗಿ ಸಾಧಿಸುತ್ತಿದೆ.

**ಬರೆಹ:—**

ಸಮಾಜದಲ್ಲಿ ಮೊದಲು ಒದಗಿದ ಘೋರ ಅನ್ಯಾಯ, ಅತ್ಯಾಚಾರಗಳ ಪರಿಹಾರ ಕ್ಕಾಗಿ ಮಹಾತ್ಮರ ಆಹುತಿಯಾಗುತ್ತದೆ ಎಂಬುದನ್ನು ಐತಿಹಾಸಿಕ ಉದಾಹರಣೆ ಗಳಿಂದ ವಿವರಿಸಿರಿ.

# ೨೦. ಅತ್ತೆ ಸೊಸೆ

[ಇದರಲ್ಲಿ ವರ್ಣಿಸಿದ ಈ ಬಗೆಯ ಚಿತ್ರವು ಒಂದು ಕಾಲಕ್ಕೆ ಮನೆಮನೆಗಳಲ್ಲಿಯೂ ಕಾಣಬರುತ್ತಿತ್ತು. ಇಂದು ಈ ಸ್ಥಿತಿಯು ಸಂಪೂರ್ಣ ಅಳಿದಿದೆಯೆಂದು ಹೇಳಲಿಕ್ಕಾಗದಿ ದ್ದರೂ ಹಿಂದಿನಷ್ಟು ತೀವ್ರ ಸ್ವರೂಪದ್ದಾಗಿಲ್ಲ ಆದರೂ ನಮ್ಮ ಸಮಾಜದಲ್ಲಿ ಹೆಣ್ಣುಮಕ್ಕಳ ವಿಷಯಕ್ಕೆ ಉದಾರ ದೃಷ್ಟಿಯು ಇನ್ನೂ ಅರಳಬೇಕಾಗಿದೆ. ಗಂಡಸು ಹೆಣ್ಣುಮಕ್ಕಳ ವ್ಯಕ್ತಿತ್ವ ವಿಕಾಸಕ್ಕೆ ಅಡ್ಡಬರುತ್ತಿದ್ದಾನೆಂಬ ಮಾತು ತೀರ ಸುಳ್ಳಲ್ಲವಾದರೂ ಸ್ತ್ರೀಯರ ಪ್ರಗತಿ ಯನ್ನು ಸ್ತ್ರೀಯರೇ ಹೇಗೆ ತಡೆಗಟ್ಟುತ್ತಿರುವರೆಂಬದನ್ನು ಈ ಚಿತ್ರದಿಂದ ಅರಿತುಕೊಳ್ಳಬಹು ದಾಗಿದೆ.]

**ಸಂದರ್ಭ:—**

ಶ್ರೀ. ಇನಾಂದಾರರ 'ಸ್ವರ್ಗದ ಬಾಗಿಲು' ಎಂಬ ಕಾದಂಬರಿಯಿಂದ ಈ ಕೆಳಗಿನ ಭಾಗವನ್ನು ತೆಗೆದುಕೊಳ್ಳಲಾಗಿದೆ. ಕಾವೇರಿಯ ಗಂಡ ಶ್ರೀನಿವಾಸನಿಗೆ ಕೆಲಸ ಇನ್ನೂ ಕಾಯಂ ಆಗಿಲ್ಲವಾದ್ದರಿಂದ ಆಕೆಗೆ ಅತ್ತೆಯ ಜೊತೆಯಲ್ಲಿ ಬಾಗಿಲುಕೋಟೆಯಲ್ಲಿಯೆ ಇರಬೇ ಕಾಗಿದೆ. ಆಕೆಯ ಅತ್ತೆಯಾದ ಭಾಗವ್ವ ಹಳೆಯ ತರಹದ ದರ್ಪದ ಹೆಣ್ಣುಮಗಳು. ಸೊಸೆ

ಮನೆಗೆ ಆಳಾಗಿರಬೇಕೆಂದು ಭಾವಿಸಿದಳು. ಒಂದೆಡೆ ಗಂಡನಿಂದ ದೂರವಾಗಿರಬೇಕಾದರೆ ಇನ್ನೊಂದೆಡೆ ತನಗೆ ಮಕ್ಕಳಿಲ್ಲವೆಂಬ ಕೊರಗು ಕಾವೇರಿಗೆ. ಸಾಲದ್ದಕ್ಕೆ ಅತ್ತೆಯಿಂದ ಕಿರುಕುಳ ಕೆಲಸಗಳನ್ನು ಸರಿಯಾಗಿ ಮಾಡಿ ಮುಗಿಯಿಸಿದರೂ ಅತ್ತೆಯಿಂದ ಅನ್ನಿಸಿಕೊಳ್ಳಬೇಕು. ಇಂಥವಳ ಬಾಳಿನಲ್ಲಿಯ ಒಂದು ಚಿತ್ರವನ್ನು ಇಲ್ಲಿ ಕೊಡಲಾಗಿದೆ.

ಬೆಳಗಿನ ಹನ್ನೊಂದು ಗಂಟೆಯಾದರೂ ರಾತ್ರಿ ಪ್ರಾರಂಭವಾದ ಮಳೆ ಇನ್ನೂ ಜಿಟಿಜಿಟಿ ಉದುರುತ್ತಲೇ ಇತ್ತು. ಅಂಥ ಮಳೆಯಲ್ಲಿ ತಪತಪನೆ ತೊಯ್ದು ಕಾವೇರಿ ನದಿಯಿಂದ ಬಟ್ಟೆಬರೆಗಳನ್ನು ಒಗೆದು, ಪಾತ್ರೆಗಳನ್ನು ತಿಕ್ಕಿಕೊಂಡು ಬಂದಳು. ತಲೆಯಮೇಲೆ ಒಗೆದ ಬಟ್ಟೆಗಳ ಹಿಂಡಿಕೆಗಳು, ಟೊಂಕದ ಮೇಲೊಂದು ಕೊಡ. ಇನ್ನೊಂದು ಕೈಯಲ್ಲಿ ಇನ್ನೇನೋ ಒಂದೆರಡು ಪಾತ್ರೆಗಳು. ಸೀರೆ ತೊಯ್ದು ಮೈಗೆ ಅಂಟಿಕೊಂಡಿತ್ತು. ಮುಖದಮೇಲಿಂದ ನೀರ ಹನಿಗಳು ಉರುಳುತ್ತಿದ್ದವು. ಬಾಗಿಲಲ್ಲಿ ಬಂದು ಕೈ ತೆರವಿಲ್ಲದ್ದಕ್ಕಾಗಿ ಕಾಲಿನಿಂದಲೇ ಬಾಗಿಲನ್ನು ದೂಡಿದಳು. ದೂಡಿದ ಬಾಗಿಲು ಧಡಾರನೆ ಸದ್ದುಮಾಡಿ ತೆರೆಯಿತು ಆ ಸದ್ದೇ ಅಡಿಗೆಮನೆಯಲ್ಲಿ ಏನನ್ನೊ ಮಾಡುತ್ತಿದ್ದ ಭಾಗಮ್ಮನ ತೀವ್ರವಾದ ದನಿಯನ್ನು ಕರೆತಂದಿತು— " ಯಾರವರು ? " ಎಂದು.

" ನಾನೇ, " ಎಂದಳು ಕಾವೇರಿ ಬಾಗಿಲಲ್ಲಿಯೆ. ಆ ನಮ್ರವಾದ ದನಿ ಭಾಗಮ್ಮನಿಗೆ ಕೇಳಿಸಿತೊ ಇಲ್ಲವೊ. ಕೇಳಿಸಿದ್ದರೂ ಮುಂದಿನ ಮಾತು ಬರುವಂತೆಯೆ ಬಂದಿತು.

" ಯಾವ ಪರಿ ಬಾಗಿಲನ್ನು ನೂಕುವುದು ? ಮೈಯಲ್ಲಿ ದೆವ್ವಗಿವ್ವ ಏನಾದರೂ ಬಂದಿದೆಯೆ ? "

ಕಾವೇರಿಗೆ ಇದು ಯಾವುದೂ ಅನಿರೀಕ್ಷಿತವಾಗಿರದ್ದರಿಂದ ಕಾಲಿನಿಂದಲೆ ತೆರೆದ ಬಾಗಿಲನ್ನು ಹಿಂದೆ ಸರಿಸುವುದರಲ್ಲಿದ್ದಳು. ಆದರೆ ಏನು ಮಾಡಿದರೂ ಬಾಗಿಲು ಸರಿಯಲಿಲ್ಲವಾದ್ದರಿಂದ ಮೈಮೇಲಿನ ಹೊರೆಯನ್ನು ಒಳಗಡೆ ಇಳಿಸಿ ಆಮೇಲೆ ಬಾಗಿಲು ಇಕ್ಕಿದರಾಯಿತೆಂದು ನಡುಮನೆಯ ಕಡೆಗೆ ಸಾಗಿದಳು. ಮತ್ತೆ ಭಾಗಮ್ಮನ ದನಿ ಗದರಿಸಿತು.

" ಆ ಬಾಗಿಲ ಅಷ್ಟು ಹಾಕಿಕೊಂಡು ಹೋಗವ್ವಾ. ಅಷ್ಟು ಮಾಡಿದರೆ ನಿನ್ನ ಕೈ ಏನೂ ಮುರಿಯುವುದಿಲ್ಲ. "

ನಿಜವಾಗಿಯೂ ನದಿಯಿಂದ ಉದ್ದಕ್ಕೂ ಒಂದು ಕೈಯಲ್ಲಿ ಕೊಡವನ್ನೂ ಇನ್ನೊಂದರಲ್ಲಿ ಪಾತ್ರೆಗಳನ್ನೂ ಹೊತ್ತುತಂದ ಕಾವೇರಿಯ ಕೈಗಳು ಮುರಿದುದಕ್ಕಿಂತ ಹೆಚ್ಚಾಗಿ ನೋಯುತ್ತಿದ್ದುದರಿಂದ ಕೊಡವನ್ನು ಕೆಳಗೆ ಇಡುವಾಗ ಅದು ದಬಕ್ಕನೆ ನೆಲಕ್ಕಿಳಿದಿರಬೇಕು. ಆದರೆ ಆ ಸದ್ದು ಭಾಗಮ್ಮನ ಕಿವಿಗಳಿಗೆ ತಗಲದಿರಲಿಲ್ಲ. ಅದಕ್ಕೊಂದು ಅಪಾರ್ಥವೂ ಸಿದ್ಧವಾಗಿಯೆ ಇತ್ತು.

"ನಿನ್ನ ಸಿಟ್ಟು ಕೊಡದಮೇಲೆ ತೆಗೆದರೆ ಕೊಡ ಏನು ಮಾಡೀತು ! ಕೊಡ ತಂದು ವರುಷ ಕೂಡ ಆಗಲಿಲ್ಲ. ಮುದ್ದೆ ಮಾಡಿಟ್ಟಿದ್ದೀಯ. ಇಷ್ಟು ಸಿಟ್ಟು ಮಾಡಿ, ದುಮುದುಮು ಉರಿದು, ಏನು ಮಾಡಬೇಕೂಂತ ಮಾಡಿದ್ದೀ ? ಇದು ಒಳ್ಳೆಯದಲ್ಲ, ಹತ್ತು ಸಾರೆ ಹೇಳಿದ್ದೇನೆ...." ಭಾಗವ್ಮನ ಗೊಣಗಾಟ ನಡೆದೇ ಇತ್ತು. ಕಾವೇರಿ ನಡುಮನೆಯಲ್ಲಿ ತನ್ನ ತೊಯ್ದ ಕೂದಲುಗಳನ್ನು ಜಾಡಿಸಿ ಒರಸಿಕೊಳ್ಳುತ್ತಿದ್ದಳು.

ಕೂದಲು ಒರಸಿಕೊಂಡು ಬಾಗಿಲನ್ನು ಇಕ್ಕಲು ಬರಬೇಕೆನ್ನುವಷ್ಟರಲ್ಲಿ ಅದೇ ಬಾಗಿಲಲ್ಲಿ ತಂಗೆಮ್ಮನ ದನಿ ಕೇಳಿಸಿತು :

"ಭಾಗಮ್ಮನವರೆ... "

ಇನ್ನೂ ನಾಲ್ಕು ಹೆಜ್ಜೆ ಒಳಗೆ ಬಂದು ನಡುಮನೆಯಲ್ಲಿ ಕಾವೇರಿಯನ್ನು ಕಂಡು ಕೇಳಿದಳು :

"ನಿಮ್ಮ ಅತ್ತೆ ಮನೆಯಲ್ಲಿ ಇಲ್ಲೇನೇ ?"

"ಇದ್ದಾರೆ."

"ಭಾಗಮ್ಮನವರೆ— ಏನು ನಡೆಸಿದ್ದೀರಿ ? ಆಂ ?...."

ಯಾವುದಕ್ಕೊ ಹಿಂದಿನ ಅಂಗಳದ ಕಡೆಗೆ ಹೋಗಿದ್ದ ಭಾಗಮ್ಮ ತಂಗೆಮ್ಮನ ದನಿ ಕೇಳಿ ಪಡಸಾಲೆಯ ಕಡೆಗೆ ಬರುತ್ತಲೆ ಹೇಳಿದಳು :

"ನಡಿಸುವುದೇನು ಮಣ್ಣು ? ಇದ್ದೇ ಇದೆಯಲ್ಲ, ದಿನದ ಕೊಳಚೆ ಕೆಲಸ ಎಷ್ಟು ಮಾಡಿದರೂ ಅಷ್ಟೆ...."

"ಸುಮ್ಮನೆ ಕೆಲಸ ಮಾಡಿ ಮಾಡಿ ಸಣ್ಣಾಗುವ ಸ್ವಭಾವ ನಿಮ್ಮದೂ, ಭಾಗಮ್ಮ. ಇಷ್ಟು ವಯಸ್ಸಾದ ಮೇಲೂ ನಾವೇ ದುಡಿಯಬೇಕು ಅಂದರೆ, ಮಕ್ಕಳು ಸೊಸೆ ಅನ್ನುವದು ಯಾತಕ್ಕೆ ? ನಾನಂತೂ ಎಲ್ಲ ಬಿಟ್ಟುಕೊಟ್ಟಿದ್ದೇನೆ; ನೋಡ ಬಾರದೆ ?"

ತಂಗೆಮ್ಮನ ಮಾತಿನಲ್ಲಿ ತಿಲಮಾತ್ರವೂ ಸತ್ಯಾಂಶವಿರಲಿಲ್ಲ. ಆದರೂ ಅದೊಂದು ಮಾತನಾಡುವ ಬಗೆ, ಅಷ್ಟೆ. ಅದರಲ್ಲಿಯೂ ತನಗೆ ಬೇಕಾದವಳಾದ ಭಾಗಮ್ಮನ ಕೂಡ ಮಾತನಾಡಿ ಆಕೆಯನ್ನು ಬೇಕೆಂತಲೆ ರೇಗಿಸುವ ಬಗೆ. ಆದರೆ ಸದ್ಯಕ್ಕೆ ಭಾಗಮ್ಮ ರೇಗಿಕೊಂಡೇ ಇದ್ದಳು. ತಂಗೆಮ್ಮನ ಪ್ರೋತ್ಸಾಹ ಬೇಕಿರಲೇ ಇಲ್ಲ. ಭಾಗಮ್ಮ ಹೇಳಿದಳು :

"ಮಕ್ಕಳು, ಸೊಸೆ ! ನಿಮಗಿನ್ನೂ ಭ್ರಮೆ ತಂಗೆಮ್ಮ ! ಯಾರು ಯಾತಕ್ಕೆ ಮಾಡಿಯಾರು ! ಈಗ ಅದನ್ನೇ ಹೇಳುತ್ತಿದ್ದೆ. ಎರಡು ಗಂಟೆ ಹೊಳೆಗೆ ಎಂದು ಹೋಗಿ ಇದೀಗ ಬಂದಿದ್ದಾಳೆ. ಹಿತ್ತಲಲ್ಲಿ ಹೋಗಿ ನೋಡಿದರೆ ಎಲ್ಲ ಪಾತ್ರೆಗಳಲ್ಲಿ ಹೊಲಸು ಹಾಗೆಯೆ ಇನ್ನು ಮೇಲೆ ಮತ್ತೆ ತೊಳೆದುಕೊಳ್ಳಬೇಕು. ಹೀಗಿದ್ದರೂ ಯಾಕೆ ಎಂದು ಕೇಳುವ ಹಾಗಿಲ್ಲ."

ಈ ಯಾವ ಮಾತಿನಲ್ಲಿ ಸತ್ಯಾಂಶವಿರಲಿಲ್ಲ ಆದರೂ ಸೊಸೆಯ ವಿಚಾರದಲ್ಲಿ ಭಾಗವ್ವ ಮಾತನಾಡುವ ರೀತಿಯದು ಇದೆಲ್ಲವನ್ನು ಕೇಳುತ್ತಿರುವಾಗ— ಹಿಂದೆ ನೂರಾರು ಬಾರಿ ಕೇಳಿದಾಗ— ಕಾವೇರಿಗೆ ಯೋಚನೆಯಾಗುತ್ತಿತ್ತು. 'ಯಾಕೆ ಇವರೆಲ್ಲರೂ ಈಪರಿ ಬದುಕಿನುದ್ದಕ್ಕೂ ಸಿಡಿಮಿಡಿಗೊಂಡೇ ಇರುತ್ತಾರೆ ? ಸುಖವಾಗಿ ಸಮಾಧಾನವಾಗಿ ಇರಲಾಗುವುದೆ ಇಲ್ಲವೆ ?' ಎಂದು. ಆದರೆ ಅದೇ ಪ್ರಶ್ನೆಯನ್ನು ಆಕೆ ತನ್ನ ಬಾಯಿಂದ ಯಾರನ್ನು ಕೇಳಬೇಕು ?

ಅಡುಗೆಯ ವೇಳೆಯಲ್ಲಿ ತಂಗೆವ್ವ ಬಂದದ್ದು ಯಾತಕ್ಕೆ ಎಂಬುದನ್ನು ಆಕೆಯನ್ನು ಬಲ್ಲವರು ಯೋಚಿಸಬೇಕಾಗಿಯೆ ಇರಲಿಲ್ಲ. ಬೆಳಗಿನ ಒಂಬತ್ತರಿಂದ ಹನ್ನೆರಡರ ವರೆಗೆ ನಾಲ್ಕಾರು ಮನೆಯ 'ಕಾರುಭಾರ' ನೋಡಿಕೊಂಡು ಆಮೇಲೆ ಮನೆಗೆ ಮರಳಿ, ನೈತೊಳೆಯುವ ವಿಚಾರಕ್ಕೆ ತೊಡಗುವುದು ತಂಗೆವ್ವನಿಗೆ ವಾಡಿಕೆಯಾಗಿತ್ತು. ಯಾರ ಮನೆಗೆ ಹೋದರೂ ಹೋಗುವುದಕ್ಕೊಂದು ನೆಪವಿರದೆ ಇರುತ್ತಿರಲಿಲ್ಲ ಆಕೆ ಹೋಗುವ ಮನೆಗಳಲ್ಲಿಯ ಯಾರೂ ಆಕೆಯನ್ನು 'ಯಾಕೆ' ಎಂದು ಕೇಳುತ್ತಲೂ ಇರಲಿಲ್ಲ— ಆಕೆ ಬರುವುದು ವಾಡಿಕೆಯೆ. ಆದ್ದರಿಂದ ಭಾಗವ್ವನೂ ಕೂಡ ಕೇಳಲಿಲ್ಲ. ಅಲ್ಲದೆ ತಂಗೆವ್ವ ಬಂದ ಕೂಡಲೆ ಭಾಗವ್ವ ಹೇಳಿದ ಸಿಡುಕಿನ ಸನ್ನಿವೇಶದ ಮೂಲಕ ಯಾವ ನೆಪವನ್ನೂ ಆಕೆ ಹೂಡಬೇಕಾಗಿರಲಿಲ್ಲ. ಭಾಗವ್ವ ತನ್ನ 'ಪುರಾಣ' ವನ್ನೆ ಮುಂದರಿಸಿದಳು.

"ಇದೇ ನೀವು ಬಂದಿರಲ್ಲಾ. ಬರುವ ಮುಂಚೆ ಈಕೆ ನದಿಯಿಂದ ಬಂದಳು. ಬರುವಾಗ ಬಾಗಿಲ ಮುಂದೆ ಮಾಡಿಕೊಂಡು ಬರಬೇಡವೆ ? ಅಷ್ಟು ಹೇಳಿದ್ದಕ್ಕೆ ಈಗ ಅರ್ಧ ಗಂಟೆ ಉರಿಯುತ್ತಿದ್ದಾಳೆ. ಬಂದವಳೇ ಕೊಡ ನೆಗ್ಗಿ ಹೋಗುವಂತೆ ಅಪ್ಪಳಿಸಿದಳು. ಈ ಪರಿ ಸಿಟ್ಟು ಮಾಡಲಿಕ್ಕೆ ಇವರಿಗೆ ಅಂಥದೇನು ಬಂದಿರುತ್ತದೆಯೊ?"

"ಹಾಗೆಲ್ಲಾ ಮಾಡಬಾರದು, ತಾಯಿ. ಹಿರಿಯರ ಮೇಲೆ ಸಿಟ್ಟು ಮಾಡಬಾರದು ಅವರೇನು ಹೇಳಿದ್ದು ಕೆಟ್ಟದ್ದಕ್ಕೆ ಹೇಳುತ್ತಾರೆಯೆ ?" ಎಂದು ಮುಂತಾಗಿ ಹರಿಯಿತು ತಂಗೆವ್ವನ ಉಪದೇಶಾಮೃತ ಕಾವೇರಿ ಬಾಗಿಲ ಹಿಂದಿ ನಿಂದಲೆ ಕೇಳುತ್ತಿದ್ದಳು.

"ಹನ್ನೆರಡಾಗಿರಬೇಕು, ಹೊರಡುತ್ತೇನೆ...." ಎಂದಳು ತಂಗೆವ್ವ.

"ಅದೇನು ? ಹೀಗೆ ಬಂದು ಹೀಗೆಯೆ ಹೊರಟಿರಲ್ಲಾ ?"

"ಹಾಂ ! ಮರೆತೇ ಇದ್ದೆ. ಇತ್ತೀಚೆಗಂತೂ ಹೀಗೆ ಆಗುತ್ತದೆ. ಬಂದ ಕೆಲಸವನ್ನೆ ಮರೆತುಬಿಡುತ್ತೇನೆ...ಹುಂ.... ನಿಮ್ಮ ಸೊಸೆಯ ಕಡೆಯಿಂದ ಈ ಕಾಗದ ಓದಿಸಬೇಕು ಅಂತ ಬಂದಿದ್ದೆ. ಎಲ್ಲಿದ್ದಾಳೆ ?"

"ಯಾರ ಕಾಗದ ?"

"ಯಾರದು ಯಾರಿಗೆ ಗೊತ್ತು ? ನಿಮ್ಮ ಸೊಸೆಯೆ ಹೇಳಬೇಕು."

"ಕಾವೇರೀ...."

ಕಾವೇರಿ ನಡುಮನೆಯ ಬಾಗಿಲಿಂದ ಹೊರಗೆ ಬಂದಳು. ಬರುವುದೊಂದೇ ತಡ, ಭಾಗಮ್ಮನ ಬಾಯಿಗೆ ಮತ್ತೆ ಸಿಕ್ಕುವಂತಾಯಿತು.

" ನೋಡಿದಿರಾ ? ಮಾನಮರ್ಯಾದೆ ಅನ್ನುವುದರ ಪರಿವೆಸೇ ಉಳಿಯಲಿಲ್ಲ. ತಲೆಯಮೇಲಷ್ಟು ಸೆರಗು ಹಾಕಿಕೊಳ್ಳೆ.... ನಿನ್ನ ಕೂದಲು ಬಹಳ ಸುಂದರವಾಗಿವೆ; ಗೊತ್ತು ಎಲ್ಲಾರಿಗೂ...."

ಕಾವೇರಿ ನಾಲಗೆ ಕಚ್ಚಿಕೊಂಡು ತಲೆಯಮೇಲೆ ಸೆರಗು ಹೊದ್ದಳು. ತನ್ನನ್ನು ಅಲ್ಲಿಗೆ ಕರೆದದ್ದು ಯಾಕೆಂಬುದು ಗೊತ್ತಿದ್ದರೂ ಅದನ್ನು ತೋರಗೊಡುವಂತಿರಲಿಲ್ಲ. ಹಾಗೆ ಮಾಡಿದ್ದರೆ ಅವರ ಮಾತನ್ನು ಬಾಗಿಲ ಹಿಂದಿನಿಂದ ಕೇಳಿದ ಆರೋಪಕ್ಕೆ ಗುರಿಯಾಗಬೇಕಾಗುತ್ತಿತ್ತು. ಆದ್ದರಿಂದ ಮರ್ಯಾದೆಗೆ ಸರಿಯಾದ' ಅಂತರ ದಲ್ಲಿ ಸರಿಯಾಗಿ ತಲೆ ತಗ್ಗಿಸಿಕೊಂಡು ನಿಂತಳು. ಆದರೆ ಪತ್ರವನ್ನೋದಿಸಿಕೊಳ್ಳಲು ಬಂದ ತಂಗೆಮ್ಮನ ಲಕ್ಷ್ಯ ಆಕೆಯ ಕಡೆಗೆ ಇರಲೆ ಇಲ್ಲ.

" ಹೀಗೆಲ್ಲಾ ಈಗಿನ ಸೊಸೆಯಂದಿರು ನಡೆದುಕೊಳ್ಳುವುದು ಯಾಕೆ ಅಂತೀರಾ ? ನನಗೆ ಕೇಳಿದರೆ, ಗಂಡಂದಿರು ಇವರನ್ನು ಹುಚ್ಚುಚ್ಚಾಗಿ ಪ್ರೀತಿಸು ತ್ತಾರೆ; ಇವರು ಹೇಳಿದ ಹಾಗೆ ಕುಣಿಯುತ್ತಾರೆ. ಅಂದಮೇಲೆ ಮನೆಯಲ್ಲಿಯ ಹಿರಿಯರ ಮಾನಮರ್ಯಾದೆ ಎಲ್ಲಿ ಉಳಿಯಿತು ? ಯಾಕೆ ಉಳಿದೀತು ? "

" ನೀವು ಹೇಳೋದು ಹಾಗೂ ಇರಬಹುದು. ಆದರೆ ನಮ್ಮ ಶೀನೂ ನನಗೆ ಗೊತ್ತಿಲ್ಲವೆ ? ಈಕೆಯನ್ನು ಏನು ಪ್ರೀತಿ ಮಾಡಿಯಾನು ? ಮದುವೆ ಆಗಿ ಎಂಟು ವರ್ಷ ಆಗಿಹೋದರೂ ಹಣೆಬರಹಕ್ಕೆ ಒಂದು ಮಗು ಇಲ್ಲ."

ಕಾವೇರಿಗೆ ಈ ಮಾತಾದರೂ ಅನಿರೀಕ್ಷಿತವಾಗಿರಲಿಲ್ಲ. ಆದರೂ ಮನಸ್ಸು ನೊಂದುಕೊಂಡಿತು, ಮುದುಡಿತು. ಇನ್ನೊಂದೆಡೆ ಮುಖ ತಿರುವಿ ನಿಂತಳು. ತಂಗೆಮ್ಮ ಆಕೆಯನ್ನು ಸೂಕ್ಷ್ಮವಾಗಿ ನೋಡಿ ಹೇಳಿದಳು :

" ಮಕ್ಕಳೇನು, ಆಗಬಹುದು. ನಿಮ್ಮ ಕಾವೇರಿಗೇನು ಮಕ್ಕಳಾಗದಷ್ಟು ವಯಸ್ಸಾಯಿತೆ ? ಏನೊ, ಒಬ್ಬೊಬ್ಬರಿಗೆ ತಡವಾಗಿ ಆಗಬಹುದು. ದೇವರು ದಿಂಡರ ಸೇವೆ ಮಾಡಿಸಬೇಕು ಅಷ್ಟೆ."

" ಎಲ್ಲ ಆಯಿತು. ದೇವರಾಯಿತು, ಸೇವೆಯಾಯಿತು. ಮುಖ್ಯ ಹಣೆಯಲ್ಲಿ ಬರೆದಿರಬೇಕು, ತಂಗೆಮ್ಮ ಅಲ್ಲಿಯೆ ಇಲ್ಲದಿದ್ದರೆ ಏನಾಗಬೇಕು. "

" ಆದಾವು, ಬಿಡಿರಿ, ಭಾಗಮ್ಮ. ಮಕ್ಕಳೇನು ? ಒಮ್ಮೆ ಸುರು ಆಯಿತೆಂದರೆ.... ಆ ನಮ್ಮ ನೆರೆಮನೆಯ ರಕುಮಾಬಾಯರ ಸೊಸೆ ನೋಡಿದಿರಾ ಹೇಗೆ ಗೋಳಾಡು ತ್ತಾಳೆ. ' ಸಾಕು ಮಾಡು ದೇವರೆ ' ಎಂದು ದಿನನಿತ್ಯ ಬೇಡಿಕೊಳ್ಳುತ್ತಾಳೆ. "

" ಅದೇ. ನನ್ನ ಹಣೆಬರಹ ! ಮೊಮ್ಮಕ್ಕಳನ್ನು ಕಾಣೋ ಭಾಗ್ಯ ನನಗಿಲ್ಲ. ಅದು ಮುಖ್ಯ.... ಯಾರೇನು ಮಾಡುವುದು ? "

ಭಾಗಮ್ಮನ ದನಿಯಲ್ಲಿ ನಿಜವಾಗಿಯೂ ಮರುಕ ಮೂಡಿತ್ತು. ಮೊಮ್ಮಕ್ಕಳಿಲ್ಲದ್ದು ನಿಜವಾಗಿ ತನ್ನ ದುರ್ದೈವ ಎಂದು ಆಕೆಗೆ ಆ ಕ್ಷಣಕ್ಕೆ ಅನಿಸಿರಬೇಕು. ಕಾವೇರಿಗೆ ಇವರಿಬ್ಬರ ಈ ಮಾತು ಯಾವಾಗ ಹೇಗೆ ಮುಗಿಯಬಹುದೆಂದು ತೋಚಲೆ ಇಲ್ಲ. ಅಲ್ಲದೆ, ಈ ಮಾತು ನಡೆದಾಗ ತಾನು ಅಲ್ಲಿ ನಿಲ್ಲುವುದೂ ಕಷ್ಟ, ಹೊರಟುಹೋಗುವುದೂ ಕಷ್ಟ. ಹೀಗಿರುವಾಗ ಏನು ಮಾಡಬೇಕೆಂದುಕೊಳ್ಳುವಷ್ಟರಲ್ಲಿಯೆ ತಂಗೆಮ್ಮ ತನ್ನ ಸೀರೆಯಲ್ಲಿ ಮಡಿಸಿಟ್ಟ ಒಂದು ಕಾಗದವನ್ನು ತೆಗೆದು ಕಾವೇರಿಯ ಕೈಗಿಟ್ಟಳು. ಕಾವೇರಿ ಕಾಗದದ ಮೇಲೆ ಕಣ್ಣೋಡಿಸುತ್ತಿರುವಾಗ ಆ ಇಬ್ಬರೂ ತನ್ನನ್ನೇ ನೋಡುತ್ತಿರುವರೆಂಬುದು ಕಾವೇರಿಗೆ ಒಂದು ಬಗೆಯ ಸಂಕೋಚವನ್ನುಂಟುಮಾಡುತ್ತಿತ್ತು. ಒಂದು ಬಾರಿ ಓದಿಕೊಂಡು ಮೇಲ್ಗಡೆಯಲ್ಲಿ ಬರೆದ ತಾರೀಖನ್ನು ನೋಡಿದಳು. ತಂಗೆಮ್ಮ ತಂದ ಕಾಗದ ಸುಮಾರು ಮೂರು ಮೂರೂವರೆ ತಿಂಗಳು ಹಿಂದಿನದಾಗಿತ್ತು. ಅದರಲ್ಲಿ ಬರೆದುದನ್ನು ನಿಧಾನವಾಗಿ ಓದಿ ಹೇಳಿದಳು. ಆದರೆ ತಂಗೆಮ್ಮ ಅದನ್ನು ಓದಿಸಿಕೊಂಡುದೇಕೆ ಎಂಬ ವಿಷಯವಾಗಲಿ, ಅದರಲ್ಲಿ ಬರೆದ ವಿಷಯದ ಸಂಬಂಧಸೂತ್ರವೇನೆಂಬುದಾಗಲಿ, ಆಕೆಗೆ ತಿಳಿಯಲೆ ಇಲ್ಲ. ಯಾವನೊ ಒಬ್ಬ ರೈತ ತಂಗೆಮ್ಮನ ಮಗನ ಹೆಸರಿಗೆ ಬರೆದ ಆ ಕಾಗದದಲ್ಲಿ ಕೊಡಬೇಕಾದ ಹಣದ ವಿಚಾರವೇನೇನೊ ಇದ್ದಿತು. ಪೂರ್ವಾಪರ ಸಂಬಂಧ ತಿಳಿಯದೆ ಸಮಗ್ರವಾಗಿ ಅರ್ಥಮಾಡಿ ಹೇಳಲು ಕಾವೇರಿಗೆ ಸಾಧ್ಯವಾಗದ್ದರಿಂದ ಕೇಳುತ್ತಿದ್ದ ಭಾಗಮ್ಮ ತಂಗೆಮ್ಮ ಅವರಿಗೆ ಸಮಾಧಾನವಾಗಲಿಲ್ಲ. ಕೊನೆಗೆ ಆ ದೋಷವೂ ಕಾವೇರಿಯ ಪಾಲಿಗೆ ಬಂದಿತು. ಅದನ್ನು ಯಾರೂ ಆಡಿತೋರಿಸಲಿಲ್ಲವೆಂಬುದೊಂದೆ ಸಮಾಧಾನ.

"ನಾನಿನ್ನು ಹೊರಡುತ್ತೇನೆ ಮಧ್ಯಾಹ್ನ ಒಂದಿಷ್ಟು ಬೇಗನೆ ಬಂದುಬಿಡುತ್ತೀರಾ" ಎಂದಳು ತಂಗೆಮ್ಮ ಹೊರಡಲನುವಾಗಿ. ಹೊರಡುತ್ತಿರುವಾಗ ಆ ಹಳೆಯ ಕಾಗದವನ್ನು ಆಕೆ ಜೋಪಾನವಾಗಿ ಸೊಂಟಕ್ಕೆ ಸಿಕ್ಕಿಸುತ್ತಿರುವುದನ್ನು ನೋಡಿದರೆ ವಿಚಿತ್ರವೆನಿಸುತ್ತಿತ್ತು. ತನ್ನ ಮಗನ ಹಣಕಾಸಿನ ವಿಚಾರದಲ್ಲಿ ಆಕೆ ಯಾವ ಬಗೆಯ ಸಂಶಯಿತವೃತ್ತಿಯನ್ನು ತಾಳುತ್ತಿದ್ದಳೆಂಬುದೂ ತಿಳಿಯುವಂತಿತ್ತು

"ಬೇಗನೆ ಏನು? ನಿತ್ಯ ಬರುವ ಹೊತ್ತಿಗೆ ಬರುತ್ತೇನೆ."

ಕಾವೇರಿ ಒಳಗಡೆ ತನ್ನ ಕೆಲಸದಲ್ಲಿ ತೊಡಗಿದ್ದಳು "ನಾನು ಮೈತೊಳೆದುಕೊಂಡು ಬೇಳೆಗೆ ಇಡಲೆ?" ಎಂದು ಕೇಳಿದ್ದಕ್ಕೆ "ಏನೂ ಬೇಡ, ನಾನೇ ಇದೇ ಮೈತೊಳೆದುಕೊಳ್ಳುತ್ತೇನೆ" ಎಂದಿದ್ದಳು ಭಾಗಮ್ಮ. ಆದ್ದರಿಂದ ಕಾವೇರಿಗೆ ಒಗೆದು ತಂದ ಬಟ್ಟೆಗಳನ್ನು ಒಣಗಹಾಕುವುದರ ಹೊರತು ಬೇರೆ ಕೆಲಸವಿರಲಿಲ್ಲ. ಮುಂದೆ ಸುಮಾರು ಮುಕ್ಕಾಲು ಗಂಟೆ ಭಾಗಮ್ಮ ತಂಗೆಮ್ಮ ಹರಟೆ ಹೊಡೆಯುತ್ತಲೆ ಇದ್ದರು. ಏನು ವಿಷಯ ಎಂಬುದು ಕಾವೇರಿಗೆ ತಿಳಿಯಲೆ ಇಲ್ಲ. ತಿಳಿಯಬೇಕೆಂಬ ಕುತೂಹಲವೂ ಆಕೆಯಲ್ಲಿರಲಿಲ್ಲ.

ತಂಗೆಮ್ಮ ಹೊರಟುಹೋದನಂತರ ಭಾಗಮ್ಮ ಮತ್ತೆ ಹಿಂದಿನ ಅಂಗಳಕ್ಕೆ ಬಂದು ಕಾವೇರಿ ತೊಳೆದುತಂದ ಪಾತ್ರೆಗಳನ್ನೆ ಮತ್ತೆ ತನ್ನ ಮುಂದಿರಿಸಿಕೊಂಡು ಗೊಣಗಾಟಕ್ಕೆ ಮೊದಲುಮಾಡಿದಳು. "ಇವರಿಗೆ ಕೆಲಸ ಮಾಡಿರಿ ಎಂದು ಹೇಳುವುದೆ ನಮ್ಮ ಮೂರ್ಖತನ ಮಾಡಿಯಾರೆಂದು ಕಾಯ್ದು ಮತ್ತೆ ಅದನ್ನೇ ಮಾಡಿಕೊಳ್ಳಬೇಕಾದರೆ ನಮ್ಮ ಹಣೆಬರಹ ಅಲ್ಲವೆ ?"

"ಏನಾಯಿತು ಈಗ ? ಆದದ್ದಾದರೂ ಏನು ?" ಎಂದಳು ಕಾವೇರಿ—ಆ ಮಾತಿನ ಅನಗತ್ಯವಾದ ಸರಣಿಯನ್ನು ತಡೆಯಲಾಗದೆ.

"ಆಗುವುದೇನು ಮಣ್ಣು ? ದೇವರು ನಮ್ಮದೆ ಕಣ್ಣು ಮುಚ್ಚಬೇಕು, ಅಷ್ಟೆ. ಆದರೆ ಆ ದೇವರಿಗೆಲ್ಲಿ ಕಣ್ಣು ?"

"ನಾನೇ ಇನ್ನೊಮ್ಮೆ ತಿಕ್ಕುತ್ತೇನೆ, ಏಳಿರಿ ."

"ಒಮ್ಮೆ ತಿಕ್ಕಿಕೊಂಡು ಬಂದು ದಣಿದಿದ್ದೀಯ, ಸಾಕಲ್ಲ."

ಇಷ್ಟರಲ್ಲಿ ಹಿತ್ತಲಲ್ಲಿ ಒಣಗಹಾಕಿದ ಬಟ್ಟೆಗಳ ಮೇಲೆ ಭಾಗಮ್ಮನ ಲಕ್ಷ್ಯ ಹರಿಯಿತು. ಮತ್ತೊಂದು ಮಾತಿಗೆ ಅನುಕೂಲವಾಯಿತು.

"ನಿನಗೆ ಎಷ್ಟು ಸಲ ಹೇಳಲಿಲ್ಲ, ನಾನು—ಆ ಮುಳ್ಳುತಂತಿಯ ಮೇಲೆ ಸೀರೆ ಒಣಹಾಕಬೇಡ ಎಂದು ? ಎರಡು ಸಲ ಹೀಗೆಯೆ ಹರಿದುಹೋಯಿತು ...ಹರಿದರೆ ನಿನಗೇನು ಬಿಡು, ಸೀರೆ ಇಲ್ಲ ಎಂದು ನಿಂತುಬಿಟ್ಟರೆ ಆಯಿತು. ತರುವವ ಹೇಗಾದರೂ ತಂದುಕೊಡುತ್ತಾನೆ...."

ಭಾಗಮ್ಮನ ಮಾತು ನಡೆದೇ ಇತ್ತು.

"ಒಳಗಡೆ ಒಣಗುವುದಿಲ್ಲ. ಇದೇ ಏನೋ ಒಂದಿಷ್ಟು ಬಿಸಿಲು ಬಿದ್ದಿತ್ತು ಎಂದು ಹಾಕಿದ್ದೆ...."

"ಬೇರೆ ಜಾಗ ಇಲ್ಲವೆ ? ತಂತಿಯ ಮೇಲೆ ಹಾಕಬೇಡ ಅಂದೆ....ಅಷ್ಟೂ ಹೇಳಬಾರದೇನು ನಾನು ?"

ಹೆಚ್ಚಿಗೆ ಮಾತನಾಡಿ ಮಾತು ಬೆಳಸುವುದಕ್ಕಿಂತ ಒಣಗಹಾಕಿದ ಸೀರೆಯನ್ನು ಎತ್ತಿಕೊಂಡು ಒಳಗೆ ಹೋಗುವುದೆ ಲೇಸೆನಿಸಿ ತಂತಿಬೇಲಿಯ ಮೇಲಿನ ಸೀರೆಯನ್ನು ನಿಧಾನವಾಗಿ ಬಿಡಿಸಿಕೊಂಡಳು. ಬಿಡಿಸುತ್ತಿರುವಾಗ ಕಣ್ಣುತಪ್ಪಿಸಿ ಭಾಗಮ್ಮ ನೋಡುತ್ತಿರಬಹುದೆಂಬುದರಲ್ಲಿ ಕಾವೇರಿಗೆ ಸಂದೇಹವೆ ಇರಲಿಲ್ಲ.

—**ಇನಾಂದಾರ ವೆಂಕಟರಾಯರು**

## ಅಭ್ಯಸನಗಳು

**ಪ್ರಶ್ನೆಗಳು:—**

೧) ಸೊಸೆಯ ಪ್ರತಿಯೊಂದು ಮಾತಿನ ಮತ್ತು ಕೃತಿಯ ಅಪಾರ್ಥವನ್ನು ಅತ್ತೆ ಹೇಗೆ ಮಾಡಿಕೊಳ್ಳುತ್ತಿದ್ದಳು ?

೨) ತಂಗೆಮ್ಮ ಪತ್ರವನ್ನೇಕೆ ತಂದಿದ್ದಳು ?
೩) ಕಾವೇರಿಯಲ್ಲಿ ನೀವು ಕಂಡ ಗುಣಗಳಾವುವು ?

ಭಾಷಾಭ್ಯಾಸ·—

೧) ಭಾಗಮ್ಮನ ಆಕ್ಕಸದ ಮಾತುಗಳನ್ನು ಎತ್ತಿ ಹೇಳಿರಿ.
'ನಡೆಸುವದೇನು ಮಣ್ಣು ? ಇದ್ದೇ ಇದೆಯಲ್ಲ— ದಿನದ ಕೊಳಚಿಯ ಕೆಲಸ. ಎಷ್ಟು ಮಾಡಿದರೂ ಅಷ್ಟೇ. ದೇವರು ನಮ್ಮದೇ ಕಣ್ಣುಮುಚ್ಚಬೇಕು ಅಷ್ಟೇ. ಆದರೆ ಆ ದೇವರಿಗೆಲ್ಲಿ ಕಣ್ಣು ?'
ಈ ವಾಕ್ಯಗಳಲ್ಲಿ ಭಾಗಮ್ಮನ ಯಾವ ಸ್ವಭಾವವು ವ್ಯಕ್ತವಾಗುತ್ತದೆ ?

ಶಬ್ದ ವಿಚಾರ:—

೧) ಉರಿ-ದುಮು ದುಮು ಉರಿ,— ಇದರಂತೆ ಮಿಂಚು, ಕಡಿ, ಹರಿ, ಮರುಗು, ಕುಣಿ,—ಇವುಗಳಿಗೆ ಯೋಗ್ಯ ಅವ್ಯಯಗಳನ್ನು ಹಚ್ಚಿರಿ.
೨) ಕೈಸವೆ ಕೈಮುರಿ, ಕೈಕಾಯು—ಇವುಗಳನ್ನು ನಿಮ್ಮ ವಾಕ್ಯಗಳಲ್ಲಿ ಉಪಯೋಗಿಸಿರಿ.
೩) ಗೊಣಗು, ಒಟಗುಟ್ಟು, ಬಡಬಡಿಸು, —ಇವುಗಳಲ್ಲಿಯ ಅರ್ಥವ್ಯತ್ಯಾಸವನ್ನು ಹೇಳಿರಿ.
೪) ತೋಡು, ಕೇಳು, ಕುಣಿ, ಜಾರು, ನೋಡು-ಇವುಗಳ ಕೃನ್ನಾಮಗಳನ್ನು ಹೇಳಿರಿ.

ವಾಕ್-ಶಿಕ್ಷಣ:—

ಭಾಗಮ್ಮನ ಪಾತ್ರವನ್ನು ಅಭಿನಯಿಸಿ ತೋರಿಸಿರಿ.

ಚರ್ಚೆ:—

ಅತ್ತೆ ಸೊಸೆಯರ ಇಂತಹ ಅಸಂತೋಷವನ್ನು ನಿವಾರಿಸುವ ಉಪಾಯಗಳನ್ನು ಕುರಿತು ವಿವೇಚಿಸಿರಿ.

ಬರಹ:—

ಕಾವೇರಿಯ ಸಹನಶೀಲತೆಯನ್ನು ಬಣ್ಣಿಸಿರಿ.

# ೨೧. ವಿಶಾಲ ಹಿಂದೂ ಧರ್ಮ

[ ಹಿಂದೂಧರ್ಮವೆಂಬುದು ಯಾವನೊಬ್ಬನಿಂದ ಸ್ಥಾಪಿತವಾದ ಮತವಲ್ಲ. ಯಾವ ಮತ-ಧರ್ಮವನ್ನೂ ತಿರಸ್ಕರಿಸದೆ, ಅವು ಒಪ್ಪಿದರೆ ಅವೆಲ್ಲವುಗಳನ್ನು ತನ್ನಲ್ಲಿ ಅಳವಡಿಸಿ ಕೊಳ್ಳಬಲ್ಲ ಉದಾರವಾದ ವಿಶಾಲ ಹೃದಯವು ಇದಕ್ಕಿದೆ.

Mind of Mahatma (ಮಹಾತ್ಮರ ಮನೋರಂಗ) ಎಂಬ ಹೊತ್ತಿಗೆಯಿಂದ ಇದನ್ನು ಆಯ್ದುಕೊಳ್ಳಲಾಗಿದೆ. ]

ನನ್ನ ಮಟ್ಟಿಗೆ ಹಿಂದೂ ಧರ್ಮವು ಸ್ವಯಂಪೂರ್ಣವಾಗಿದೆ. ಅದರ ಉದಾರಾಶ್ರಯದಲ್ಲಿ ಎಲ್ಲ ಬಗೆಯ ನಂಬಿಕೆಗಳಿಗೂ ಸಂರಕ್ಷಣೆ ದೊರಕುತ್ತದೆ. ನನ್ನ

ಹೆಂಡತಿಯ ಬಗ್ಗೆ ಇದ್ದ ನನ್ನ ಭಾವನೆಗಳನ್ನು ವರ್ಣಿಸುವುದು ಕಷ್ಟ. ಹಾಗೆಯೇ ಹಿಂದೂಧರ್ಮದ ಬಗ್ಗೆ ಇರುವ ನನ್ನ ಭಾವನೆಗಳನ್ನು ಹೇಳುವುದೂ ಕಷ್ಟ. ಆಕೆಯಿಂದ ನನಗೆ ಪ್ರೇರಣೆ ದೊರಕುವಂತೆ ಇನ್ನಾವ ಸ್ತ್ರೀಯಿಂದಲೂ ದೊರಕದು. ಆಕೆಯಲ್ಲಿ ಕುಂದುಕೊರತೆಗಳಿಲ್ಲವೆಂದಲ್ಲ ನಾನು ಎಣಿಸಿದುದಕ್ಕಿಂತಲೂ ಹೆಚ್ಚಾಗಿ ಇವೆ ಎನ್ನಬಲ್ಲೆ. ಆದರೂ ಒಂದು ಗೂಢವಾದ ಸಂಬಂಧವಿಶೇಷವು ನಮ್ಮಿಬ್ಬರಲ್ಲಿದೆ. ಇದೇ ಮೇರೆಗೆ ಹಿಂದೂ 'ಧರ್ಮದಲ್ಲಿ ಎಷ್ಟು ಕುಂದುಕೊರತೆಗಳು, ಮಿತಿಮೇರೆಗಳು ಇದ್ದರೂ ಅದರ ಬಗ್ಗೆ ನನ್ನ ಭಾವನೆ ಅಂಥದೇ ಇದೆ.

ಹಿಂದೂ ಧರ್ಮದ ವ್ಯಾಪ್ತಿ ಮರ್ಯಾದಿತವಾದದ್ದಲ್ಲ. ಪ್ರಪಂಚದ ಎಲ್ಲ ಧರ್ಮೋಪದೇಶಕರಿಗೂ ಅದರಲ್ಲಿ ಗೌರವದ ಸ್ಥಾನವಿದೆ. ಪ್ರಸಾರವನ್ನೇ ಧ್ಯೇಯವಾಗಿಟ್ಟುಕೊಂಡ ಧರ್ಮ ಅದಲ್ಲ. ಅನೇಕ ಪಂಗಡಗಳನ್ನು ಅರಗಿಸಿಕೊಂಡಿದೆ ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಅರಗಿಸಿಕೊಂಡ ಈ ಕ್ರಮ ನಿಧಾನವಾಗಿ ನಡೆದದ್ದು; ಆ ಧರ್ಮದ ಬೆಳವಣಿಗೆಯ ಅಂಗವಾಗಿ ಸಾಗಿದ್ದು. ಪ್ರತಿಯೊಬ್ಬನು ತನ್ನ ಧರ್ಮ-ಶ್ರದ್ಧೆಗಳನ್ನು ಅನುಸರಿಸಿ ತನ್ನ ತನ್ನ ದೇವರನ್ನು ಪೂಜಿಸಲು ಹಿಂದೂ ಧರ್ಮವು ವಿಧಿಸುತ್ತದೆ. ಆದ್ದರಿಂದ ಉಳಿದ ಎಲ್ಲ ಧರ್ಮಗಳೊಡನೆ ಕಲಹ ಕೈಕೊಳ್ಳದೆ ಗೆಳೆತನದಿಂದ ಇರಲು ಬಯಸುತ್ತದೆ.

ಭಾರತೀಯ ಸಂಸ್ಕೃತಿಗೆ ಹಿಂದೂ ಧರ್ಮವು ಕೊಟ್ಟ ಘನವಾದ, ವಿಶಿಷ್ಟವಾದ ಕಾಣಿಕೆಯೆಂದರೆ ಅಹಿಂಸಾತತ್ತ್ವ. ಕಳೆದ ಮೂರು ಸಾವಿರ ವರ್ಷಗಳಿಗೂ ಮಿಕ್ಕಿ ಈ ದೇಶದ ಇತಿಹಾಸವನ್ನು ಒಂದು ವಿಶೇಷವಾದ ಬಗೆಯಿಂದ ರೂಪಿಸಿದೆ. ಹಿಂದುಸ್ತಾನದ ಕೋಟ್ಯಂತರ ಜನರ ಜೀವನದಲ್ಲಿ ಇದು ಇಂದಿಗೂ ಒಂದು ಜೀವಂತ ಶಕ್ತಿಯಾಗಿದೆ. ವಿಕಾಸಶೀಲವಾದ ಈ ತತ್ತ್ವ ಈಗಲೂ ಜನಜೀವನಕ್ಕೊಂದು ಚೈತನ್ಯವನ್ನು ಕೊಡುತ್ತಿದೆ. ಅದರ ಪ್ರಭಾವದ ಮೂಲಕವೆ ಹಿಂದುಸ್ತಾನದಲ್ಲಿ ಸಶಸ್ತ್ರ ಕ್ರಾಂತಿ ಅಶಕ್ಯವಾಗಿದೆ. ಹೀಗಾದದ್ದು ಕೆಲವರು ಭಾವಿಸಿದ ಹಾಗೆ, ನಾವು ದುರ್ಬಲರು ಎಂದಲ್ಲ. ಗುಂಡಿಕ್ಕಿ ಪ್ರಾಣ ಹೀರಲು ದೇಹಬಲಕ್ಕಿಂತ ಹೆಚ್ಚಾಗಿ ರಾಕ್ಷಸೀ ವೃತ್ತಿಯ ಅವಶ್ಯಕತೆ ಇದೆ.

ಎಲ್ಲ ಜೀವರಾಶಿಯ ಉಗಮಸ್ಥಾನವು ಒಂದೇ ಆಗಿದೆ. ಆ ಉಗಮಸ್ಥಾನಕ್ಕೆ ಅಲ್ಲಾ ಎನ್ನಿ, ದೇವರೆನ್ನಿ, ಪರಮೇಶ್ವರನೆನ್ನಿ—ಯಾವ ಹೆಸರಾದರೂ ಆಯಿತು. ಇದೇ ಹಿಂದೂ ಧರ್ಮದ ತತ್ತ್ವಸಾರ.

ನನ್ನ ಹಿಂದೂ ಧರ್ಮವು ಮತಮತಾಂತರಗಳಿಂದ ಪರಿಮಿತವಾಗಿಲ್ಲ. ಇಸ್ಲಾಮ, ಬೌದ್ಧ, ಕ್ರಿಶ್ಚಿಯನ್, ಪಾರಸಿ ಇತ್ಯಾದಿ ಧರ್ಮಗಳಲ್ಲಿಯ ಉತ್ತಮಾಂಶಗಳನ್ನೆಲ್ಲ ಒಳಗೊಳ್ಳುತ್ತದೆ. ಸತ್ಯವೆ ನನ್ನ ಧರ್ಮ. ಅಹಿಂಸೆಯೆ ಅದನ್ನು ಸಾಧಿಸುವ ಒಂದೇ ಒಂದು ಮಾರ್ಗ. ಹಿಂಸಾಧರ್ಮವನ್ನು ನಾನು ಕೊನೆಯಾಗಿ ಸಂಪೂರ್ಣ ನಿರಾಕರಿಸಿಬಿಟ್ಟಿದ್ದೇನೆ.

—ಗಾಂಧೀಜಿ

## ಅಭ್ಯಸನಗಳು

**ಪ್ರಶ್ನೆಗಳು:—**

೧. ಹಿಂದೂ ಧರ್ಮವು ಪರಧರ್ಮಸಹಿಷ್ಣುವಾಗಿರುವ ಕಾರಣವೇನು ?

೨. ಹಿಂದುಸ್ಥಾನದಲ್ಲಿ ಸಶಸ್ತ್ರ ಕ್ರಾಂತಿಯು ಏಕೆ ಅಶಕ್ಯವಾಗಿದೆ ?

೩. ಉಳಿದ ಧರ್ಮಗಳಿಗೂ ಹಿಂದೂ ಧರ್ಮಕ್ಕೂ ಇರುವ ವ್ಯತ್ಯಾಸವೇನು ?

**ಭಾಷಾಭ್ಯಾಸ:—**

ಕೆಳಗಿನ ವಾಕ್ಯಗಳನ್ನು ಸ್ಪಷ್ಟೀಕರಿಸಿರಿ.

೧. ಗುಂಡಿಕ್ಕಿ ಪ್ರಾಣ ಹೀರಲು ದೇಹಬಲಕ್ಕಿಂತ ರಾಕ್ಷಸೀವೃತ್ತಿಯ ಅವಶ್ಯಕತೆಯಿದೆ.

೨. ಸತ್ಯವೇ ನನ್ನ ಧರ್ಮ. ಅಹಿಂಸೆಯೆ ಅದನ್ನು ಸಾಧಿಸುವ ಒಂದೇ ಒಂದು ಮಾರ್ಗ.

**ಶಬ್ದವಿಚಾರ —**

೧. ಸ್ವಯಂಪೂರ್ಣ, ಜೀವಂತ ಶಕ್ತಿ, ಧರ್ಮಶ್ರದ್ಧೆ— ಇವುಗಳ ಅರ್ಥವನ್ನು ಹೇಳಿರಿ.

೨. ಮತಾಂತರ, ದೇಶಾಂತರ—ಇದೇ ಬಗೆಯ ಐದು ಶಬ್ದಗಳನ್ನು ಹೇಳಿರಿ.

೩. 'ಕೆ' ಪ್ರತ್ಯಯಾಂತ (ತೋರಿಕೆ) ಐದು ಭಾವನಾಮಗಳನ್ನು ಹೇಳಿರಿ.

**ವಾಕ್-ಶಿಕ್ಷಣ:—**

ಧರ್ಮಸಮನ್ವಯವನ್ನು ತೋರಿಸುವ ಶ್ರೀ. ಕಾರಂತರ 'ಮುಕ್ತದ್ವಾರ' ವೆಂಬ ಗೀತನಾಟಕದಲ್ಲಿಯ (ಪುಟ೩೯—೪೦) ಭಾಗವನ್ನು ಅಭಿನಯಿಸಿರಿ.

**ಚರ್ಚೆ:—**

ಸೈನಿಕ-ಶಿಕ್ಷಣ ಪಡೆಯುವದು ಹಿಂದೀಯರಿಗೆ ಯೋಗ್ಯವಲ್ಲ.

**ಬರೆಹ:—**

ಹಿಂದೂ ಧರ್ಮದ ವೈಶಿಷ್ಟ್ಯವನ್ನು ಕುರಿತು ಬರೆಯಿರಿ.

# ೨೨. ಮಹಾಪಂಡಿತ ರಾಹುಲ ಸಾಂಕೃತ್ಯಾಯನ

[ ಅನುಕೂಲಸ್ಥರ ಮನೆಯಲ್ಲಿ ಹುಟ್ಟುವುದು ಯಾರ ಕೈಯಲ್ಲೂ ಇಲ್ಲ; ಆದರೆ ಎಂತಹ ವಿಪರೀತ ಪರಿಸ್ಥಿತಿಯಲ್ಲಿ ಜನ್ಮ ತಾಳಿದ್ದರೂ ಅದರೊಳಗಿಂದ ಹೊರಬಿದ್ದು ತನ್ನ ಸಜ್ಜನಿಕೆ, ಬುದ್ಧಿವಂತಿಕೆ ಸಾಹಸಾದಿ ಗುಣಗಳಿಂದ ಸಮಾಜಕ್ಕೆ ಉಪಯುಕ್ತನಾಗಿ ಬಾಳುವ ಹೋರಾಟದಲ್ಲಿ ತನ್ನ ಅಂತಃಸತ್ತ್ವವನ್ನು ಜಗತ್ತಿಗೆ ಮನಗಾಣಿಸಿ ಕೊಡುವಂತಹ ಸಂದರ್ಭಗಳಲ್ಲಿಯೇ ಯಾವುದೊಂದು ವ್ಯಕ್ತಿಯ ಬೆಲೆಯು ತಿಳಿದುಬರುತ್ತಿರುತ್ತದೆ. ಒಬ್ಬನ ಪದವಿ, ಬ್ಯಾಂಕಿನ ಶಿಲ್ಕು, ಅಧಿಕಾರ ಸ್ಥಾನಗಳಂತಹ ಸಂಗತಿಗಳಿಂದ ಮನುಷ್ಯನ ಬೆಲೆಯನ್ನು ಕಟ್ಟುವುದು ಮೋಸಕ್ಕೆ ಕಾರಣವಾಗಿರುತ್ತದೆ.

[ ಒಬ್ಬ ಬಡ ರೈತನ ಮಗನು ಜಗನ್ಮಾನ್ಯ ವಿದ್ವಾಂಸನೆಂದು ಖ್ಯಾತಿಪಡೆದ ರಾಹುಲಜೀಯವರ ಚರಿತೆಯು ತನ್ನ ಉದ್ಧಾರವು ತನ್ನನ್ನೇ ಅವಲಂಬಿಸಿದೆ ಎಂಬ ಮಾತನ್ನು ಮನವರಿಕೆ ಮಾಡಿಕೊಡುವಂತಹದಾಗಿರುತ್ತದೆ. ]

ರಾಹುಲ ಸಾಂಕೃತ್ಯಾಯನ ಎಂಬ ಹೆಸರನ್ನು ಸಂಸ್ಕೃತ ಭಾಷೆ, ತುಲನಾತ್ಮಕ ಭಾಷಾಶಾಸ್ತ್ರಗಳಲ್ಲಿ ಅಭಿರುಚಿಯುಳ್ಳ ಇಡೀ ಪ್ರಪಂಚವೇ ಆದರ ಪ್ರೀತಿಗಳಿಂದ ಕಾಣುವುದು. ಇವರ ಪಾಂಡಿತ್ಯ ಸಂಶೋಧನ ಸಾಮರ್ಥ್ಯವನ್ನು ಕಂಡು ಜಗತ್ತಿನ ವಿದ್ವಾಂಸರೆಲ್ಲ ಬೆರಗಾಗಿದ್ದಾರೆ. ಜಾಗತಿಕ ವಿದ್ವನ್ಮಂಡಲಿಯಲ್ಲಿ ಗಣ್ಯಸ್ಥಾನ ಪಡೆದ ಭಾರತೀಯ ಮಹಾಪಂಡಿತರಿವರು. ಈ ಅಗಾಧ ಪಾಂಡಿತ್ಯವನ್ನವರು ಒಂದು ವಿಶ್ವವಿದ್ಯಾಲಯದ ಒಂದು ಕೋಣೆಯಲ್ಲಿ ಹಾಯಾಗಿ ಓದಿ ಪಡೆದುದಲ್ಲ. ಪ್ರಪಂಚದಲ್ಲಿ ಅಮೇರಿಕೆಯನ್ನುಳಿದು ಸಿಂಹಳ, ತಿಬೇಟ, ಚೀನ, ರಶಿಯಾ, ಜರ್ಮನಿ, ಫ್ರಾನ್ಸ್, ಇಂಗ್ಲಂಡ್ ಮೊದಲಾದ ಬಹುತರ ಎಲ್ಲ ದೇಶಗಳ ಪ್ರವಾಸ ಮಾಡಿರುವರು. ಪ್ರಪಂಚದಲ್ಲಿರುವ ಭಾಷೆಗಳೆಷ್ಟು ? ಹಿಂದೀ ಇವರ ಮಾತೃಭಾಷೆ ಬಿಡಿರಿ, ಸಂಸ್ಕೃತ ಪಾಂಡಿತ್ಯ ಅಪರೂಪವಲ್ಲವೆಂದು ಅದನ್ನು ಬಿಡಿರಿ. ಇಂಗ್ಲಿಷ ವಿಶ್ವದ ಸರ್ವಸಾಮಾನ್ಯ ಭಾಷೆ ಅದನ್ನು ಬಿಡಿರಿ; ರಶ್ಯನ್, ಜರ್ಮನ್, ಫ್ರೆಂಚ್, ಪರ್ಶಿಯನ್, ಅರಬಿ, ತಿಬೇಟಿ, ಚೀನಿ, ಸಿಂಹಳಿ....ಈ ಭಾಷೆಗಳಲ್ಲೂ ಬಲ್ಲಿದವರಾಗಿದ್ದಾರೆ ರಾಹುಲರು. ತಾವು ಹೋದಹೋದಲ್ಲಿ ಅಲ್ಲಲ್ಲಿಯ ಭಾಷೆಗಳಲ್ಲಿರುವ ಜ್ಞಾನ ಭಾಂಡಾರಗಳನ್ನೊಡೆದು ಅವರು ತಮ್ಮ ಅರಿವಿನ ಬೊಕ್ಕಸವನ್ನು ತುಂಬಿಕೊಂಡಿದ್ದಾರೆ. ಹೀಗೆ ನಾನಾ ಕಡೆಗಳಲ್ಲಿಯ ಜ್ಞಾನಸಾರವನ್ನು ಅಳವಡಿಸಿಕೊಂಡು, ನಾನಾ ಕಡೆಗಳಲ್ಲಿಯ ಅನುಭವಗಳಿಂದ ಸಂಸ್ಕಾರಗೊಂಡು ಕಳೆವೆತ್ತ ವಿದ್ಯಾಮೂರ್ತಿ ಸಾಂಕೃತ್ಯಾಯನರು.

ರಾಹುಲರು ಹುಟ್ಟಿದ್ದು ಉತ್ತರ ಪ್ರದೇಶದ ಒಂದು ಹಳ್ಳಿಯಲ್ಲಿ. ಮೊದಲು ಅವರಿಗೆ ಈ ಹೆಸರಿರಲಿಲ್ಲ ಕೇದಾರನಾಥ ಎಂದು ಅವರ ತೊಟ್ಟಿಲ ಹೆಸರು. ಕೇದಾರನಾಥರ ಅಜ್ಜ ಬ್ರಿಟಿಶ್ ಸೈನ್ಯದಲ್ಲಿದ್ದು ನಿವೃತ್ತನಾದ ಯೋಧ; ಕೇದಾರನಾಥರ ತಂದೆ ಒಕ್ಕಲುತನ ಮಾಡುತ್ತಿದ್ದನು. ಶಾಲೆಗೆ ಹೋಗಿ ಓದು ಕಲಿಯುವದೆಂದರೆ ಕೇದಾರನಾಥನಿಗೆ ತಲೆಬೇಸರದ ಮಾತಾಗಿತ್ತು. ಅಂತೂ ಹೇಗೋ ಹಳ್ಳಿಯಲ್ಲಿ ಪ್ರಾಥಮಿಕ ಅಭ್ಯಾಸ ಮುಗಿಸಿ, ಬಳಿಕ ನಿಜಾಮಾಬಾದದಲ್ಲಿ ಮುಲ್ಕೀ ಪರೀಕ್ಷೆಯವರೆಗೆ ಕಲಿತುಬಿಟ್ಟನು. ಮಗ ಇಂಗ್ಲಿಷ ಕಲಿಯಲೆಂದು ಹಿರಿಯರ ಅಪೇಕ್ಷೆ. ಆದರೆ ಕೇದಾರನಾಥ ಅಲ್ಲಿಂದ ಕಾಲ್ದೆಗೆದು ಕಲಕತ್ತೆಗೆ ಓಡಿಹೋದ ! ತಿರುಗಿ ಮನೆಯನ್ನೇ ಸೇರಲಿಲ್ಲ.

ಆಗಲೇ ಅವರ ದೇಶಪರ್ಯಟನಕ್ಕೆ ಪ್ರಾರಂಭವಾಯಿತು. ಅಯೋಧ್ಯೆ, ಹರಿದ್ವಾರ, ಗಂಗೋತ್ರಿ, ಜಮುನೋತ್ರಿ—ಮುಂತಾದ ಕ್ಷೇತ್ರಗಳನ್ನು ಸುತ್ತಿದನು, ಈ ಯಾತ್ರೆಯಲ್ಲಿ ಕೇದಾರನಿಗೆ ಒಂದು ಅನುಭವ ಬಂತು 'ವಿದ್ಯಾವಿಹೀನಃ ಪಶುಃ'

ಸರಿ ಅವನ ವಿಚಾರದ ದಿಕ್ಕು ತಟ್ಟನೆ ಬದಲಾಯಿತು, ವಿದ್ಯಾರ್ಜನೆಯ ಹಂಬಲ ಹಿರಿದಾಯಿತು. ಸಂಸ್ಕೃತವನ್ನು ಕಲಿತನು. ಕಾವ್ಯ, ವ್ಯಾಕರಣಗಳನ್ನು ಓದಿ ಮುಗಿಸಿದನು. ಮುಂದೆ ಕೇದಾರನಾಥನು ಬಿಹಾರದಲ್ಲಿ ಅಲೆಯುತ್ತಿದ್ದಾಗ ಒಂದು ಮಠದ ಮಹಂತನು ಇವನ ಬುದ್ಧಿವಂತಿಕೆಗೆ ಮೆಚ್ಚಿ ಇವನನ್ನು ಪಟ್ಟಶಿಷ್ಯನನ್ನಾಗಿ ಆರಿಸಿದನು. ಅಲ್ಲಿದ್ದಾಗ ಅವನು ದಕ್ಷಿಣಭಾರತದ ಅನೇಕ ಯಾತ್ರೆಗಳನ್ನು ಮಾಡಿದನು. ಮಠದಲ್ಲಿ ಸುಖೋಪಭೋಗಗಳಿಗೆ ತುಂಬಾ ಅನುಕೂಲತೆಗಳಿದ್ದವು. ಆದರೆ ಕೇದಾರನಾಥನು ಸ್ವದೇಶಿ ವ್ರತಸ್ಥನಾಗಿದ್ದನು ಅಲ್ಲದೆ ಜೀವನದ ಸಾರ್ಥಕವು ಎಲ್ಲಿದೆ? ಎಂದು ಅರಸುವ ಲಾಲಸೆಯುಳ್ಳವನು ಆ ಮಠದ ವಾತಾವರಣವು ಅವನಿಗೆ ಹಿಡಿಸಲಿಲ್ಲ. ಇದ್ದ ವಿದ್ಯೆ ಸಾಲದು. ಇನ್ನೂ ಅಧ್ಯಯನ ಬೇಕು ಎಂದು ಅವನು ಹಂಬಲಿಸುತ್ತಿದ್ದನು ಆಗವನಿಗೆ ೨೦ ವರುಷ ವಯಸ್ಸು (೧೯೧೪).

ಅನೇಕ ಮತಗಳ ವಿದ್ವಾಂಸರೊಡನೆ ಜ್ಞಾನಜಿಜ್ಞಾಸೆಯಿಂದ ಕೇದಾರನು ವಾದವಿವಾದ ನಡೆಸುತ್ತಿದ್ದನು: ಅವುಗಳಲ್ಲಿ ಆರ್ಯ ಸಮಾಜದ ತತ್ತ್ವವಿಚಾರಗಳಿಂದ ಪ್ರಭಾವಿತನಾಗಿ ಅದಕ್ಕೆ ಸೇರಿದನು. ಆರ್ಯಸಮಾಜದ ಪ್ರಚಾರಕ್ಕಾಗಿ ಪಂಜಾಬ ಪ್ರಾಂತವನ್ನೆಲ್ಲ ಸುತ್ತಿದನು. ಆಗ ಆತನಿಗೆ ಆರ್ಯಸಮಾಜದ ಹಿರಿಮೆಯನ್ನು ತೋರಿಸುವದಕ್ಕೆ ಇಸ್ಲಾಂ ಧರ್ಮದ ಜ್ಞಾನ ಬೇಕೆಂದು ತೋರಿತು. ಸರಿ; ಅರಬಿ ಭಾಷೆಯನ್ನು ಕಲಿತನು; ಇಸ್ಲಾಂ ಧರ್ಮತತ್ತ್ವಗಳನ್ನು ಅರಿತುಕೊಂಡನು. ಬಳಿಕ ಇಸ್ಲಾಂ ಅಥವಾ ಕ್ರೈಸ್ತ ಧರ್ಮಗಳಿಗಿಂತ ಆರ್ಯ ಧರ್ಮವು ಶ್ರೇಷ್ಠವಾದುದೆಂದು ಒಳ್ಳೇ ಪರಿಣಾಮಕಾರಿಯಾಗಿ ಬೋಧಿಸಿದನು; ಲೇಖನಗಳನ್ನು ಬರೆದನು.

೧೯೧೭ರಲ್ಲಿ ರಶಿಯಾದಲ್ಲಿ ರಾಜ್ಯಕ್ರಾಂತಿಯಾಯಿತು. ಅದರಿಂದ ಕೇದಾರನಾಥನ ಜೀವನದಲ್ಲಿಯೂ ಇನ್ನೊಂದು ಕ್ರಾಂತಿಯುಂಟಾಯಿತು. ರಶಿಯಾದಲ್ಲಿ ಹೊಸ ಸಮಾಜ ರೂಪುಗೊಳ್ಳುತ್ತಿದೆ. ನಮ್ಮ ಸಮಾಜದಲ್ಲಿಯೂ ಅಂತಹ ಮಾರ್ಪಾಟುಗಳು ಏಕಾಗಬಾರದು? ಈ ವಿಚಾರಚಕ್ರ ಆತನ ತಲೆಯಲ್ಲಿ ತಿರುಗತೊಡಗಿತು. "೨೨ನೆಯ ಶತಮಾನದ ಭಾರತ" ಎಂಬ ಗ್ರಂಥವನ್ನು ಬರೆದನು. ಅದೊಂದು ಕಾದಂಬರಿ. ಎರಡುನೂರು ವರುಷಗಳ ತರುವಾಯದ ಪರಿವರ್ತಿತ ಭಾರತದ ಭವ್ಯ ಕಲ್ಪನಾಚಿತ್ರವನ್ನು ಅದರಲ್ಲಿ ಚಿತ್ರಿಸಿದನು. "ಭಾರತವು ಸ್ವತಂತ್ರವಾಗಿದೆ, ಬಡವ ಬಲ್ಲಿದ ಎಂಬ ಭೇದ ಉಳಿದಿಲ್ಲ. ಸಮತೆಯ ತಳಹದಿಯ ಮೇಲೆ ಹೊಸ ಸಮಾಜ ನಿಂತಿದೆ"—ಕೇದಾರನಾಥನು ರೂಪಿಸಿದ ಈ ಆದರ್ಶ ಚಿತ್ರವನ್ನು ನಾವದರಲ್ಲಿ ಕಾಣುತ್ತೇವೆ.

ಆರ್ಯಸಮಾಜದ ತತ್ತ್ವಪ್ರಣಾಲಿಯನ್ನು ಪ್ರಚಾರ ಮಾಡುವಾಗ ವೇದಗಳ ಹಿರಿಮೆಯನ್ನು ಹೇಳಬೇಕಾಗುತ್ತಿತ್ತು. ಆಗ ಕೇದಾರನಾಥನಿಗೆ ಇನ್ನೊಂದು ವಿಚಾರ ಮೂಡಿತು. ವೇದಗಳು ಅನುಮೋದಿಸುವ ಯಜ್ಞಯಾಗಾದಿಗಳನ್ನು

ಬೌದ್ಧ ಮತವು ನಿಷೇಧಿಸುತ್ತಿದೆ; ಅದು ಹೇಳುವದರಲ್ಲಿಯೂ ತಥ್ಯವಿರಬಹುದಲ್ಲವೆ? ಹೀಗೆ ಅನಿಸುವದೇ ತಡ, ಪಾಲಿ ಮತ್ತು ಪ್ರಾಕೃತ—ಭಾಷೆಗಳನ್ನು ಕಲಿತನು. ಬೌದ್ಧ ಮತ್ತು ಜೈನ ಧರ್ಮದ ಮೂಲ ಗ್ರಂಥಗಳು ಆ ಭಾಷೆಯಲ್ಲಿವೆ. ಅವುಗಳ ಅಧ್ಯಯನವಾಯಿತು. ಬುದ್ಧನ ಜನ್ಮಸ್ಥಳವನ್ನೂ ಇತರ ಬೌದ್ಧ ಕ್ಷೇತ್ರಗಳನ್ನೂ ಆತನು ಸಂದರ್ಶಿಸಿದನು. ಈ ಅಭ್ಯಾಸದಿಂದ ಆತನಲ್ಲಿ ಆ ಮತವನ್ನು ಸ್ವೀಕರಿಸಬೇಕೆಂಬ ಲವಲವಿಕೆಯು ಉಂಟಾಯಿತು.

ಇದು ೧೯೨೧ನೆಯ ಇಸವಿಯ ಸುಮಾರು. ಅಸಹಕಾರ ಆಂದೋಲನಕ್ಕಾಗಿ ದೇಶದ ಕರೆ ಬಂದಿತು. ಕೇದಾರನಾಥನು ಅದರಲ್ಲಿ ಧುಮುಕಿದನು. ಮಧ್ಯಭಾರತದ ಹಳ್ಳಿ ಹಳ್ಳಿಗಳಿಗೂ ಚಳವಳಿಯನ್ನು ಒಯ್ದು ಮುಟ್ಟಿಸಿದನು. ಜೇಲು ಕಂಡನು. ಬಕ್ಸಾರ ಸೆರೆಮನೆಯಲ್ಲಿದ್ದಾಗ "೨೦ನೆಯ ಶತಮಾನದ ಭಾರತ" ವನ್ನು ಸಂಸ್ಕೃತದಲ್ಲಿ ಅನುವಾದಿಸಿದನು. ಸೆರೆಮನೆಯಿಂದ ಹೊರಗೆ ಬಂದಮೇಲೆ ಸುಮ್ಮನೆ ಕುಳಿತಿರದೆ ಬಿಹಾರದಲ್ಲಿ ರೈತರ ಸಂಘಟನೆಗೆ ತೊಡಗಿದನು. ಬರೀ ಭಾಷಣದ ಬಂಟನಾಗದೆ, ನೆರೆಹಾವಳಿಯಿಂದ ಸಂತ್ರಸ್ತರಾದ, ಪ್ಲೇಗಿನಂತಹ ಪಿಡುಗುಗಳಿಂದ ಪೀಡಿತರಾದ ಬಡಬಗ್ಗರ ಸೇವೆಗಾಗಿ ಮೈಮುಟ್ಟಿ ದುಡಿದನು.

೧೯೨೪ರಲ್ಲಿ ಚೌರಿಚೌರಾ ಪ್ರಕರಣದ ಅನಂತರ ಕೇದಾರನಾಥನು ಪಾಟ್ನಾದಲ್ಲಿ ಉಜ್ವಲವಾದ ಭಾಷಣ ಮಾಡಿದನು. ಆತನ ಬಂಧನಕ್ಕಾಗಿ ಸರಕಾರದ ಆಜ್ಞೆ ಹೊರಟಿತು. ಅಷ್ಟರಲ್ಲಿ ಬೌದ್ಧಧರ್ಮದ ಅಭ್ಯಾಸಕ್ಕಾಗಿ ಆತನು ನೇಪಾಳಕ್ಕೆ ಹೋಗಿದ್ದನು. ಎರಡು ವರುಷಗಳ ತರುವಾಯ ಅಲ್ಲಿಂದ ಬಂದ ಮೇಲೆ ತಾನಾಗಿಯೇ ಹೋಗಿ ಪೋಲೀಸರ ಕೈವಶವಾದನು. ಎರಡು ವರುಷಗಳ ಶಿಕ್ಷೆ ಅವನಿಗಾಯಿತು. ಈ ಅವಧಿಯಲ್ಲಿ ಕೇದಾರನಾಥನು ಗಣಿತ, ಜ್ಯೋತಿಷ ಶಾಸ್ತ್ರಗಳ ಅಭ್ಯಾಸ ಮಾಡಿದನು; ಕೆಲವು ಕಾದಂಬರಿಗಳನ್ನು ಬರೆದನು. ಆತನು ಬಿಡುಗಡೆ ಹೊಂದಿ ಬಂದಾಗ ರಾಜಕೀಯ ರಂಗದಲ್ಲಿ ಹಲವು ಪಕ್ಷಪಕ್ಷಾಂತರಗಳು ಹುಟ್ಟಿಕೊಂಡಿದ್ದವು. ಆ ರಾಜಕಾರಣ ಬೇಡವೆನಿಸಿ ಕೇದಾರನಾಥರು ಕಾಶ್ಮೀರ–ತಿಬೇಟಗಳತ್ತ ಸಂಚಾರ ಹೊರಟರು.

ಮುಂದೆ ೧೯೨೭ರಲ್ಲಿ ಬೌದ್ಧ ಧರ್ಮದ ಅಭ್ಯಾಸಕ್ಕಾಗಿ ಕೇದಾರನಾಥರು ಲಂಕಾದ್ವೀಪಕ್ಕೆ ಹೋದರು. ಅಲ್ಲಿ 'ವಿದ್ಯಾಲಂಕಾರ ಮಹಾವಿದ್ಯಾಲಯ' ದಲ್ಲಿ ಪ್ರಾಧ್ಯಾಪಕ ಪದವಲ್ಲದೆ, 'ತ್ರಿಪಿಟಕಾಚಾರ್ಯ' ಎಂಬ ಪದವಿಯೂ ಅವರಿಗೆ ದೊರೆಯಿತು. ಪಾಲಿಭಾಷೆಯ ಮೌಲಿಕಗ್ರಂಥಗಳು ತಿಬೇಟದಲ್ಲಿ ಮಾತ್ರ ಉಳಿದಿವೆ ಎಂದು ಅವರಿಗೆ ತಿಳಿದುಬಂತು. ಕೂಡಲೆ ಅತ್ತ ಹೊರಳಿತು ಅವರ ಶೋಧಕ ದೃಷ್ಟಿ. ಅಲ್ಲಿಗೆ ಹೋಗಲು ಹಿಮಾಲಯವನ್ನು ದಾಟಬೇಕು. ಗ್ಯಾಂಚಿ ಪಟ್ಟಣದ ಮೂಲಕ ಹೋಗುವದೇ ಇದ್ದುದರಲ್ಲಿ ಸುಲಭವಾದ ದಾರಿಯಾಗಿತ್ತು. ಕೇದಾರನಾಥರು ರಾಷ್ಟ್ರೀಯ ವೃತ್ತಿಯವರು. ಅವರಿಗೆ ಅಲ್ಲಿ ಹಾಯ್ದು ಹೋಗುವದಕ್ಕೆ ಬ್ರಿಟಿಶ್

ಸರಕಾರದ ಒಪ್ಪಿಗೆ ಸಿಕ್ಕುವುದು ಸಾಧ್ಯವಿರಲಿಲ್ಲ. ಆದುದರಿಂದ ಅತ್ಯಂತ ದುರ್ಗಮ ಮಾರ್ಗವಾದರೂ ನೇಪಾಳದಲ್ಲಿ ಹಾಯ್ದು ಹೋಗುವದೊಂದೇ ಉಪಾಯ. ಈ ಮಾರ್ಗದಲ್ಲಿ ಇನ್ನೂ ಕೆಲವು ತೊಂದರೆಗಳಿದ್ದವು. ಮಹಾಶಿವರಾತ್ರಿಯ ಪರ್ವಕಾಲದಲ್ಲಿ ಹೊರತು ಮಿಕ್ಕ ಸಮಯಗಳಲ್ಲಿ ಹಿಂದೀಯರು ಸರಕಾರಿ ಸಮ್ಮತಿಯಿಲ್ಲದೆ ನೇಪಾಳದಲ್ಲಿ ಪ್ರವೇಶಿಸುವಂತಿರಲಿಲ್ಲ. ಮತ್ತು ಆ ಮಾರ್ಗದಲ್ಲಿ ನೇಪಾಳಿಗಳ ಹೊರತು ಇತರರನ್ನು ತಿಬೇಟದಲ್ಲಿ ಬರಗೊಡುತ್ತಿರಲಿಲ್ಲ. ಕೇದಾರನಾಥರು ಹಾಗೇ ಆಗಲಿ ಎಂದರು. ಶಿವರಾತ್ರಿಯ ಪರ್ವಕಾಲದಲ್ಲಿಯೇ ನೇಪಾಳಕ್ಕೆ ಹೋದರು. ಅಲ್ಲಿ ನೇಪಾಳೀ ವೇಷಭೂಷಣ ಧರಿಸಿ ತಿಬೇಟವನ್ನು ಸೇರಿದರು. ಅಲ್ಲಿ ಹದಿನೈದು ತಿಂಗಳು ಅವರಿದ್ದರು. ೨೨ ಕತ್ತೆ ಹೊರೆಗಳಷ್ಟು ಪ್ರಾಚೀನ ಹಸ್ತಪ್ರತಿಯ ಗ್ರಂಥಗಳನ್ನು ಸಂಗ್ರಹಿಸಿ ಭಾರತಕ್ಕೆ ತಂದರು. ಅವುಗಳಲ್ಲಿ ಕೆಲವನ್ನು ತಮ್ಮೊಂದಿಗೆ ಲಂಕೆಗೆ ಒಯ್ದರು; ಐತಿಹಾಸಿಕ ಮಹತ್ತ್ವದ ಹಲವು ಚಿತ್ರಗಳನ್ನು ಪಾಟ್ನಾ ವಸ್ತು ಸಂಗ್ರಹಾಲಯಕ್ಕೆ ಕೊಟ್ಟರು. ಆ ಬಳಿಕ ಅವರು ಕೆಲಕಾಲ ಲಂಕೆಯಲ್ಲಿಯೆ ವಾಸಿಸಿದರು. ಅಲ್ಲಿ ಬೌದ್ಧ ಧರ್ಮವನ್ನು ಸ್ವೀಕರಿಸಿ ಕೇದಾರನಾಥರು ರಾಹುಲ ಸಾಂಕೃತ್ಯಾಯನರಾದರು.

ಬೌದ್ಧ ಧರ್ಮದ ಅನೇಕ ಗ್ರಂಥಗಳನ್ನು ರಾಹುಲಜಿ ಬರೆದರು. ಅದರಿಂದ ಅವರ ಹೆಸರು ದೇಶದೇಶಗಳಲ್ಲಿ ಹಬ್ಬಿತು. ಲಂಕೆಯಿಂದ ಯುರೋಪಕ್ಕೆ ಹೋದ ಬೌದ್ಧ ಶಿಷ್ಟಮಂಡಲದಲ್ಲಿ ಅವರಿಗೆ ಸ್ಥಾನವು ದೊರೆತಿತು. ಆಗವರು ಇಂಗ್ಲಂಡ, ಫ್ರಾನ್ಸ್, ಜರ್ಮನಿಗಳನ್ನು ಸಂದರ್ಶಿಸಿದರು; ಹಲವಾರು ಶ್ರೇಷ್ಠ ಪಾಶ್ಚಾತ್ಯ ವಿದ್ವಾಂಸರ ಪರಿಚಯವನ್ನು ಗಳಿಸಿದರು. ರಶಿಯವನ್ನು ನೋಡಬೇಕೆಂಬ ಅವರ ಬಯಕೆ ಮಾತ್ರ ಆಗ ಈಡೇರಲಿಲ್ಲ. ೧೯೩೩ರ ಸುಮಾರಿಗೆ ಅವರು ಮರಳಿ ಭಾರತಕ್ಕೆ ಬಂದರು.

ಸಾಂಕೃತ್ಯಾಯನರು ಇಲ್ಲಿಗೆ ಬಂದ ಬಳಿಕ, ಅವರ ವಿದ್ಯಾರ್ಜನೆಯ ನಿತ್ಯ ನೂತನವಾದ ಹಂಬಲಕ್ಕೆ ಒಳ್ಳೆಯ ಎಡೆ ಸಿಕ್ಕಿತು. ಡಾ. ಕಾಶೀಪ್ರಸಾದ ಜಯ-ಸ್ವಾಲ ಎಂಬ ಬ್ಯಾರಿಸ್ಟರರು ಭಾರತದ ವಿದ್ಯಾಸಂಸ್ಕೃತಿ ವೈಭವದ ಅಭಿಮಾನಿ; ಅನೇಕ ಸಂಶೋಧನೆಗಳಿಂದ ಹೆಸರಾದವರು. ರಾಹುಲರ ಅಭ್ಯಾಸಕ್ಕೆ ಎಲ್ಲ ಅನುಕೂಲತೆಗಳನ್ನು ಅವರು ಒದಗಿಸಿಕೊಟ್ಟರು. ಬೌದ್ಧ ಧರ್ಮದ ಹಳೆ ಹೊತ್ತಿಗೆಗಳ ನೆಲೆವೀಡಿನ ಕಡೆಗೆ ರಾಹುಲರ ಜಿಜ್ಞಾಸುದೃಷ್ಟಿ ಇನ್ನೂ ಇತ್ತು. ೧೯೩೪ರಲ್ಲಿ ಎರಡನೆಯ ಸಲ ತಿಬೇಟದ ಯಾತ್ರೆ ಕೈಕೊಂಡರು. ಪ್ರಭಾಕರ ಗುಪ್ತನ ಪ್ರಮಾಣ ವಾರ್ತಿಕ-ಭಾಷ್ಯದ ಶೋಧನೆಗಾಗಿ ಈ ವರೆಗೆ ಜಗತ್ತಿನ ಅನೇಕ ಶೋಧಕರು ಪಟ್ಟ ಪರಿಶ್ರಮಗಳೆಲ್ಲ ನಿಷ್ಫಲವಾಗಿದ್ದವು. ಆ ದುರ್ಲಭ ಗ್ರಂಥವು ರಾಹುಲರಿಗೆ ಈ ಯಾತ್ರೆಯಲ್ಲಿ ದೊರೆತಿತು! ಅವರು ಪಡೆದ ಯಶಸ್ಸನ್ನು ಜಗತ್ತೇ ಹೊಗಳಿತು.

೧೯೩೫ರಲ್ಲಿಯೂ ಸಂಚಾರ ಮುಂದುವರಿಯಿತು. ಜಪಾನಕ್ಕೆ, ಕೋರಿಯಾಕ್ಕೆ, ಮಂಚೂರಿಯಾಕ್ಕೆ ಹೋದರು; ಚೀನವನ್ನು ಸುತ್ತಿದರು. ಅಲ್ಲಿಂದ ಸೈಬೀರಿಯದ ಕಾಡನ್ನು ಕಳೆದು ರಶಿಯವನ್ನು ತಲುಪಿದರು. ತಮ್ಮ ಒಹುದಿನದ ಹಾರೈಕೆಯನ್ನು ಪೂರೈಸಿಕೊಂಡರು. ಅಲ್ಲಿ ಮಾಸ್ಕೊ, ಬಾಕು— ಮೊದಲಾದ ನಗರಗಳನ್ನು ನೋಡಿಕೊಂಡು ಇರಾಣದ ಮಾರ್ಗವಾಗಿ ಸ್ವದೇಶಕ್ಕೆ ಬಂದರು. ಲೆನಿನ್‌ಗ್ರ್ರಾಡ್ ವಿಶ್ವವಿದ್ಯಾಲಯದಲ್ಲಿ ಸಂಶೋಧನ ಕಾರ್ಯಕ್ಕಾಗಿ ರಾಹುಲ ಸಾಂಕೃತ್ಯಾಯನರಿಗೆ ಕರೆ ಬಂದಿತು; ಹೋದರು. ಅಲ್ಲಿ ಎಲ್ಸೆನಾ ಎಂಬ ವಿದುಷಿ ಇವರೊಂದಿಗೆ ಸಂಶೋಧನಕಾರ್ಯ ಮಾಡುತ್ತಿದ್ದಳು. ಮುಂದೆ ಅವಳನ್ನು ರಾಹುಲರು ಮದುವೆಯಾದರು. ಆದರೆ ಹೆಚ್ಚುಕಾಲ ರಶಿಯಾದಲ್ಲಿ ನಿಲ್ಲಲು ಅವರಿಗೆ ಸಾಧ್ಯವಾಗಲಿಲ್ಲ. ಕರ್ತವ್ಯವು ಅವರನ್ನು ಭಾರತಕ್ಕೆ ಕರೆಯಿತು ತಿಬೇಟದಲ್ಲಿ ತನ್ನ ಕೆಲಸ ಇನ್ನೂ ತುಂಬಾ ಇದೆ; ಭಾರತದಲ್ಲಿ ಕಾಂಗ್ರೆಸ್ಸು ಕೆಲ ಪ್ರಾಂತಗಳಲ್ಲಿ ಅಧಿಕಾರಕ್ಕೆ ಬಂದಿದೆ; ತನ್ನ ಕಾರ್ಯಕ್ಕೆ ಇದು ಒಳ್ಳೆಯ ಸಮಯವೆಂದೆನಿಸಿತವರಿಗೆ. ಹೊರಡುವ ನಿಶ್ಚಯ ಮಾಡಿದರು. ಅವರ ನೆಚ್ಚಿನ ಮಡದಿ ಎಲ್ಸೆನಾ ಆಗ ಬಸುರಿ. ಹೆಂಡತಿಯ ಹಾಗು ಆಗಲಿರುವ ಮಗುವಿನ ಮೋಹ ಅವರನ್ನು ಹಿಡಿದಿಡಲು ಸಮರ್ಥವಾಗಲಿಲ್ಲ. ಈ ಬೌದ್ಧ ಭಿಕ್ಷುವೂ ಸಿದ್ಧಾರ್ಥನಂತೆ ಹೊರಟುಬಿಟ್ಟನು.

ಈ ಸಲ ಸರಕಾರದ ಪ್ರತಿನಿಧಿಯೆಂದೇ ರಾಹುಲರು ತಿಬೇಟಕ್ಕೆ ಹೋದರು. ಅಲ್ಲಿಯ ಅನೇಕ ಸಂಸ್ಕೃತ ಗ್ರಂಥಗಳ ಸುಮಾರು ಒಂದುವರೆ ಲಕ್ಷ ಶ್ಲೋಕಗಳ ಫೋಟೋ ತೆಗೆದುಕೊಂಡರು. ಸುಮಾರು ಐವತ್ತುಸಾವಿರ ಶ್ಲೋಕಗಳನ್ನು ನಕಲು ಮಾಡಿಕೊಂಡರು. ಒಂಬತ್ತನೆಯ ಶತಮಾನದ ನಾಥ ಪಂಥೀಯ ಸಿದ್ಧನೊಬ್ಬನ ಕಾವ್ಯವು ಅವರಿಗೆ ದೊರೆಯಿತು. ಹಿಂದೀ ಭಾಷೆಯ ಇತಿಹಾಸ ದೃಷ್ಟಿಯಿಂದ ಅದೊಂದು ಅಪೂರ್ವ ಗ್ರಂಥ. ಸರಕಾರೀ ಪ್ರತಿನಿಧಿಯಾಗಿ ಹೋಗಿದ್ದರೂ ತಮ್ಮ ವೆಚ್ಚಕ್ಕಾಗಿ ಅವರು ಕೇವಲ ೧೦೦ ರೂಪಾಯಿ ತೆಗೆದುಕೊಂಡಿದ್ದರು. ಅಂತಹ ವಿರಕ್ತವೃತ್ತಿ ರಾಹುಲಜಿಯವರದು.

ರಾಹುಲಜಿಯವರು ಸುಮಾರು ೬೦ ಗ್ರಂಥಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಸಂಸ್ಕೃತ ಗ್ರಂಥಗಳು ಎರಡು; ೮ ಕಾದಂಬರಿಗಳು, ೮ ನಾಟಕ, ೮ ಪ್ರವಾಸ ವರ್ಣನೆ; ಸಿಂಹಲಿ, ತಿಬೇಟೀ ಮೊದಲಾದ ಪರಭಾಷಾ ಪರಿಚಯ ಗ್ರಂಥಗಳು ಕೆಲವು. ಇವರ ಸಂಸ್ಕೃತ ಗ್ರಂಥಗಳ ಬಗೆಗೆ ಫ್ರಾನ್ಸಿನ ಲೇವಿ ಎಂಬ ತ್ರಿಖಂಡ ಕೀರ್ತಿಯ ಪಂಡಿತರು ಬರೆದ ಮಾತುಗಳು ಇವರ ಬರವಣಿಗೆಗಳ ಹಿರಿಮೆಯ ಕಲ್ಪನೆಯನ್ನು ತಂದುಕೊಡುತ್ತಿವೆ. ಒಂದು ಓಲೆಯಲ್ಲಿ ಅವರೆಂದಿದ್ದಾರೆ. "ನಿಮ್ಮ ಸಹಜ ಮಧುರ ಶೈಲಿಯನ್ನು ಹೊಗಳದಿರಲಾರೆ, ಅಶ್ವಘೋಷ, ನಾಗಾರ್ಜುನ, ವಸುಬಂಧುಗಳು ಬರೆದ ರೀತಿಯಲ್ಲಿಯೇ—ಅಷ್ಟೇ ಉಜ್ವಲವಾಗಿ— ನಿಮ್ಮಷ್ಟು ಸೊಗಸಾಗಿ ಸಂಸ್ಕೃತ ಬರೆದವರನ್ನು ಈ ನೂರು ವರುಷಗಳಲ್ಲಿಯೇ ಕಂಡಿಲ್ಲ.'

ರಾಹುಲರು ಸ್ವತಂತ್ರ ವೃತ್ತಿ. ಮೂಢ ನಂಬಿಕೆಯಿಂದ ಯಾವ ಹಾದಿಯನ್ನೂ ಹಿಡಿದವರಲ್ಲ ಅವರು ಸಾರಾಸಾರ ವಿಚಾರಾಂತ್ಯದಲ್ಲಿ ಸರಿದೋರಿದಂತೆ ನಡೆಯುವಲ್ಲಿ ಯಾರ ವಿರೋಧವನ್ನೂ ಲೆಕ್ಕಿಸರು; ಕಂಡ ತಪ್ಪನ್ನು ಖಾಡಾಖಾಡಿಯಾಗಿ ಅಡಲು ಹಿಂಜರಿಯರು. ಕೆಲಕಾಲ ಇವರು ಕಮ್ಯುನಿಸ್ಟ ಸಂಗಡ ಸೇರಿದ್ದರು. ಇಂತಹ ವ್ಯಕ್ತಿ ತನಗೆ ಸಿಕ್ಕದ್ದಕ್ಕೆ ಕೆಂಪು ಬಾವುಟದ ಆ ತಂಡವು ತುಂಬ ಹಿಗ್ಗಿತು. ಆದರೆ ಸರ್ವಾಧಿಕಾರತ್ವದಲ್ಲಿ ಸೂತ್ರದ ಗೊಂಬೆಯಂತೆ ಕುಣಿಯುವದು ರಾಹುಲರಿಗೆ ಎಂದಿಗೂ ಒಗ್ಗದ ಮಾತು. ಬೇಗನೆಯೆ ಆ ಸಂಗಡದ ಪರಲು ಹರಿದುಕೊಳ್ಳಬೇಕಾಯಿತು. ಇಂದಿನ ಅವರ ಬಾಳು ಮುಖ್ಯವಾಗಿ ಜ್ಞಾನೋಪಾಸನೆಗೇ ವಿೂಸಲು.

—ಶಂ. ಬಾ. ಜೋಶಿ

## ಅಭ್ಯಸನಗಳು

**ಪ್ರಶ್ನೆಗಳು:—**

೧) ಸಾಂಕೃತ್ಯಾಯನರು ಬಹುಭಾಷಾಕೋವಿದರಾಗಲು ಕಾರಣವೇನು?

೨) ಎಲ್ಲ ಬಗೆಯಿಂದಲೂ ಅನುಕೂಲವಿದ್ದ ಮಠವನ್ನು ರಾಹುಲಜಿಯವರು ಏಕೆ ಬಿಡಬೇಕಾಯಿತು ?

೩) ಇವರು ಕಾದಂಬರಿ ಬರೆಯಲು ಏಕೆ ಕೈಹಾಕಿದರು ?

೪) ಜ್ಞಾನಾರ್ಜನೆ ಮಾಡುವದನ್ನು ಬಿಟ್ಟು ರಾಹುಲಜಿ ಚಳವಳಿಯಲ್ಲಿ ಏಕೆ ಧುಮುಕಿದರು ?

೫) ಬೌದ್ಧ ಧರ್ಮವನ್ನು ಅರಿಯುವದಕ್ಕಾಗಿ ಇವರು ಕೈಕೊಂಡ ಸಾಹಸಗಳಾವುವು ?

೬) ಬೌದ್ಧ ಧರ್ಮದಲ್ಲಿ ರಾಹುಲಜಿಯವರಿಗೆ ಅಭಿರುಚಿ ಹೇಗೆ ಹುಟ್ಟಿತು?

೭) ರಶಿಯನ್ನರ ಕಮ್ಯುನಿಸ್ಟ ಪಂಥವನ್ನು ಕೊನೆಗೆ ತ್ಯಜಿಸಿದರೇಕೆ ?

**ಭಾಷಾಭ್ಯಾಸ:—**

೧) ಪ್ರಪಂಚದಲ್ಲಿರುವ ಭಾಷೆಗಳೆಷ್ಟು ? ಹಿಂದಿ ಇವರ ಮಾತೃಭಾಷೆ..... ಕಳೆವೆತ್ತ ವಿದ್ಯಾಮೂರ್ತಿ ಸಾಂಕೃತ್ಯಾಯನ.
ಈ ವಾಕ್ಯಗಳಲ್ಲಿರುವ ಶೈಲಿಯನ್ನು ಸಿರೀಕ್ಷಿಸಬೇಕು. ಇಲ್ಲಿ ಸಾಂಕೃತ್ಯಾಯನರ ವಿದ್ವತ್ತನ್ನು ಒಹು ಮಾರ್ಮಿಕವಾಗಿ ಬಣ್ಣಿಸಿದ್ದಾಗಿದೆ. ಇದೇ ಬಗೆಯಾಗಿ ವಿನೋಬಾ ಭಾವೆಯವರ ವಿದ್ವತ್ತೆಯನ್ನು ಬಣ್ಣಿಸಿರಿ.

**ಶಬ್ದ ವಿಚಾರ.—**

೧) ಕಳೆವೆರು, ಕಳೆಗುಂದು, ಕಳೆಹೀನನಾಗು, ಕಳೆಯೇರು, ಕಳೆತರು— ಇವುಗಳನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ಬರೆಯಿರಿ.

೨) ಜಿಜ್ಞಾಸೆ, ಗಣ್ಯಸ್ಥಾನ, ತ್ರಿಪಿಟಕ—ಇವುಗಳ ಅರ್ಥವನ್ನು ತಿಳಿದುಕೊಳ್ಳಿರಿ.

೩) ಭಾಷಣ ಬಂಟ— ಈ ಅರ್ಥವನ್ನು ಸೂಚಿಸುವ ಮೂರು ಬೇರೆ ಶಬ್ದಗಳನ್ನು

**ವಾಕ್-ಶಿಕ್ಷಣ:—**

೧) ರಾಹುಲ ಸಾಂಕೃತ್ಯಾಯನರು ರಶಿಯಾ ದೇಶದಲ್ಲಿ ತಮ್ಮ ಹೆಂಡತಿಯನ್ನು ಬಿಟ್ಟು ಬರುವಾಗ ಆವಳೊಡನೆ ನಡೆದ ಸಂಭಾಷಣೆಯನ್ನು ಬರೆದು ಅಭಿನಯಿಸಿರಿ.

೨) ವಿದ್ಯಾರ್ಜನೆಗಾಗಿ ಕಡುಕಷ್ಟಬಟ್ಟ ಯಾವದೇ ದೇಶದ ಒಬ್ಬ ವಿದ್ವಾಂಸನ ಜೀವನ ಚರಿತ್ರೆಯನ್ನು ಹೇಳಿರಿ.

**ಚರ್ಚೆ:—**

ಸ್ವತಂತ್ರವೃತ್ತಿಯವರು ನಾಡಿಗೆ ಹಾನಿಕರ.

**ಬರೆಹ:—**

ರಾಹುಲಜಿಯವರು ತಮ್ಮ ಆತ್ಮಚರಿತ್ರೆಯನ್ನು ಬರೆದ ಹಾಗೆ ಇದನ್ನು ಮಾರ್ಪ ಡಿಸಿಕೊಂಡು ಬರೆಯಿರಿ.

---

# ೨೩. ಮೋಚಿ

[ ಕಥೆಯ ಒಂದು ಶ್ರೇಷ್ಠವಾದ ಮಾದರಿ. ಸಹಾನುಭೂತಿ, ಕರುಣೆಗಳಿಂದ ಪ್ರೇರಿತರಾಗಿ, ಸಂಕಷ್ಟದಲ್ಲಿ ತೊಳಲಾಡುವವರಿಗೆ ನೆರವಾಗುವದರಲ್ಲಿಯೆ ಮನುಷ್ಯತ್ವವಿದೆ. ಭೂತದಯೆ ಅಂಕುರಿಸದ ಪ್ರಾಣಿ ಮನುಷ್ಯನೆಂಬ ಹೆಸರಿಗೆ ಕಲಂಕ. ಇದು ಒಂದು ವಿಚಾರ. ಇನ್ನೊಂದು ವಿಚಾರವೆಂದರೆ, ಹೆರವರಿಂದ ಪಡೆವ ಸಹಾಯವು ತಮ್ಮ ಆತ್ಮಸ್ವಾತಂತ್ರ್ಯವನ್ನು ನಾಶಮಾಡುತ್ತದೆ ಎಂಬ ಅರಿವು ತೀವ್ರವಾಗಿದ್ದಷ್ಟು ಆತನು ಶ್ರೇಷ್ಠ ಮನುಷ್ಯ. ಒಬ್ಬರ ಹಂಗಿನಲ್ಲಿ ಇರ ಬೇಕಾದವನ ಬಾಳು ನಾಯಿಯ ಪಾಡು. ಕೊಡುವಲ್ಲಿ ಹಿರಿಮೆ ಇದೆ. ಕೈಯೊಡ್ಡುವಲ್ಲಿ ಕೀಳ್ಮೆ ಅಂಟಿಕೊಳ್ಳದೆ ಇರದು. ಒಬ್ಬ ದರಿದ್ರ ಮೋಚಿಯಲ್ಲಿ ಇರುವ ಸ್ವಾಭಿಮಾನದ ಹಿರಿಯ ಸದ್ಗುಣವನ್ನು ಹೃದಯಸ್ಪರ್ಶಿಯಾಗುವಂತೆ ಇಲ್ಲಿ ಚಿತ್ರಿಸಿದ್ದಾಗಿದೆ. ಭಾರತೀಪ್ರಿಯರ ರುದ್ರ ವೀಣೆ ಎಂಬ ಕಥಾಸಂಗ್ರಹದಿಂದ ಇದನ್ನು ಆಯ್ದುಕೊಳ್ಳಲಾಗಿದೆ. ]

೧

" ಬನ್ನಿ, ಮಾಸಾಮಿ "
" ಏನೋ, ಸರಿಯಾಗಿ .......? "
" ಪ್ರೂ . ... ..ಬಿಡಿ ನನ್ನೊಡ್ಯ, ಕಳ್ಟಿ. "
" ಎಷ್ಟು ಕೊಡ್ಬೇಕೋ ? "
" ಐ .. .. ಕೆಲ್ಸ ನೋಡ್ಬಾರದಾ ಶಿವ. .... . ? "
" ಅದಿರ್ಲಿ ನೀ ಹೇಳೋ. "
" ತಮ್ಸಂತೋಸ ಬುದ್ದಿ. "
" ಲೇ ಲೇ....ಆ ಕೊನೆ ಸ್ವಲ್ಪ ಚೆನ್ನಾಗಿ...."
" ವೊಸಿ ಸುಮ್ಕಿರ ದ್ಯಾವ್ರೆ. "
" ಅಲ್ಲಿ, ಅದ್ನೋಡು.... ಎಡಗಡೆ "

" ಊ, ಸರಿಯಾಯ್ತು ನನ್ನೊಡ್ಯಾ. "

" ಎಷ್ಟು ಕೊಡಲೋ ? "

" ನಾ ಯೆಳ್ಳಿಲ್ವಾ ಬುದ್ಧೀ ? "

" ಏನೂ ? "

" ತಮ್ಮ ಖುಸಿ ಅಂತ. "

" ಹೂ........ತೊಗೋ. "

" ಸರಿ ಶಿವ. ನಾ ಕೇಳ್ಬ್ಯಕಾ ಇದ್ಕೆ ? "

" ನಿನ್ನ ಹೆಸರೇನೋ ? "

" ಯಾಕ್ಬುದ್ದೀ ? "

" ಅಲ್ಲ; ಕೇಳಿದೆ ಸುಮ್ನೆ. "

" ರಾಜಾ ಬುದ್ದೀ ; ರಾಜಾಂತ. "

* * * *

ಇದ್ದಕ್ಕಿದ್ದ ಹಾಗೆ ಎಚ್ಚರವಾಯಿತು; ಗಾಬರಿಯಾಗಿ ಕಣ್ಣು ಬಿಟ್ಟು ನೋಡಿದೆ. ಪಕ್ಕದಲ್ಲಿ ಕಮಲು ! ನಿದ್ದೆಗಣ್ಣಿನಲ್ಲಿಯೇ ನಗುತ್ತ—

" ಅದೇನೂಂದ್ರಿ ? " ಎಂದಳು.

" ಏನು ? "

" ಅಲ್ಲಾ; ನೀವಂತಾ ಇದ್ದದ್ದು. "

" ಏನೇ ಹಾಗೆಂದ್ರೇ ? "

" ಅಲ್ಲಾ; ಅದೇನೊ ರಾಜ ಧೊರೆ ಅಂತ........ "

" ನಿಂಗೆ ಬುದ್ಧಿ ಇಲ್ಲ ಅಂತ.... ಮಲಕ್ಕೊ ಸುಮ್ಮನೆ. "

" ಇಲ್ಲಾಂದ್ರೆ ನಿಜವಾಗಲೂ. "

" ನೋಡಿದೀಯಾ, ಅವಳ್ನ........"

" ಸರಿ; ಕನವರಿಸಿಕೊಳ್ಳುತಾ ಇದ್ದಿರಿ ಅಂದ್ರೇ........"

" ಹೋಗೇ ಹುಚ್ಚುಚ್ಚಾಗಿ ಮಾತಾಡಬೇಡ. "

ಕಮಲು ಸುಮ್ಮನೆ ಮಲಗಿಕೊಂಡಳು; ನನಗೆ ಪುನಃ ನಿದ್ದೆ ಹತ್ತಲಿಲ್ಲ. ಹಾಗೇ ಕಣ್ಣುಮುಚ್ಚಿಕೊಂಡೆ........ ಹಿಂದಿನ ಸಂಜೆ ನಾನು ಜೋಡು ಹೊಲಿಸುವದಕ್ಕೆ ಹೋದದ್ದು ತಟ್ಟನೆ ಜ್ಞಾಪಕಕ್ಕೆ ಬಂತು. ನಾನು ಹೋಗುತ್ತಿದ್ದಾಗ ದಾರಿಯಲ್ಲಿ ಮೋಚಿಯೊಬ್ಬನು ಕೆಲಸವಿಲ್ಲದೆ ಕೂತು ತನ್ನ ಸಣ್ಣ ಹಾರೆಗಳನ್ನು ಒಂದಕ್ಕೊಂದು ಬಡಿದು ತಾಳದಂತೆ ಕುಟ್ಟುತ್ತ ಅದೇನೋ ಕುರುಕಲು ಪದ ಹೇಳಿಕೊಳ್ಳುತ್ತಿದ್ದುದು, ನನ್ನನ್ನು ಕಂಡು ನಗುತ್ತ ಹಾರೆಗಳನ್ನು ಕೆಳಗಿಟ್ಟು

"ಗುಡ್ಲು ಬುದ್ಧೀ—ಗುಡ್ಲು."

"ನೀನು ನಡಿ ಮುಂದೆ. ಅಲ್ಲಿಗೆ ಬರತೀನಿ."

"ಅದ್ಯಾಕ್ನನ್ನೊಡ್ಯಾ?"

"ನೀ ಹೆದರಬೇಡ ರಾಜ, ನಿನ್ನ ನೋಡಬೇಕು."

"ಬ್ಯಾಡಿ ದ್ಯಾವ್ರೇ."

"ಯಾಕೊ?"

"ತಾವು........ನೋಡ್ಬಾರದು ಬುದ್ಧೀ—ಗರೀಬನ್ಗುಡ್ಲು."

"ನೋಡಬಹದು, ಎಲ್ಲಾ ನೋಡಬಹುದು."

"ಏನ್ಮಾಡ್ಬೇಕ್ಬುದ್ದೀ.......ಅಲ್ಲಿ?"

ನಾನು ಮಾತಾಡಲಿಲ್ಲ. ಸ್ವಲ್ಪ ಧನಿ ಬದಲಾಯಿಸಿ—

"ರಾಜ" ಎಂದೆ.

"ಆ"

"ನಿನಗೆಷ್ಟು ಮಕ್ಕಳು?"

"ಅವೆ ಬುದ್ದೀ. ನಾಲ್ಕೈದವೆ."

"ನಿನ್ನ ಹೆಂಡತಿ?"

"ಇಲ್ಲಾ ದ್ಯಾವ್ರ ಓದ್ಲು"

"ಏನು ಹಾಗೆಂದ್ರೆ?"

"ಓದ್ಲು ಬುದ್ದೀ, ತೀರ್ಕೊಂಡ್ಳು."

"ಎಷ್ಟು ವರ್ಷವಾಯಿತು?"

"ಬಾಳ ದೂರ ಬುದ್ದಿ—ಗೆಪ್ತಿ ಇಲ್ಲ."

"ಮಕ್ಕಳು ದೊಡ್ಡವ್ರೋ—ಚಿಕ್ಕವ್ರೋ?"

"ಪಿಳ್ಳೆಗಳು ನನ್ನೊಡ್ಯಾ."

ಮಾತನಾಡುತ್ತ ದೂರದಲ್ಲಿ ಒಂದು ಸಣ್ಣ ಮುರುಕಲು ಗುಡಿಸಲನ್ನು ಕಂಡೆ; ರಾಜ ಬೇಗಬೇಗನೆ ನಡೆದ. ಹತ್ತು ಮಾರು ಮುಂದೆ ಹೋದವನು ನಿಂತ—ಹಿಂತಿರುಗಿ "ಅದೇ ಬುದ್ದಿ ನನ್ಮನೆ" ಎಂದ. ಏರುತ್ತಿದ್ದ ಕತ್ತಲಲ್ಲಿ ಆ ಗುಡಿಸಲನ್ನು ನೋಡಿದೆ. ಬಹಳ ಹಳೆಯದು. ಮುಂಭಾಗವೆಲ್ಲ ಕುಸಿದು ಬೀಳುವಂತಿತ್ತು. ಒಂದು ಚಾಪೆಯ ತಡಿಕೆ ಬಾಗಿಲಾಗಿತ್ತು. ಒಳಗಣಿಂದ ಮಂಕು ಬೆಳಕು ಹೊರಚೆಲ್ಲುತ್ತಿತ್ತು. ರಾಜನು ಮುಂದೆ ಹೋಗಿ ಬಾಗಿಲನ್ನು ಹಿಂದೆ ತೆಗೆದ; ಒಳಗಣಿಂದ ಹರಕಲು ಬಟ್ಟೆಯ, ಬಡತನ ನಿರಾಶೆಗಳು ಮೂರ್ತಿವೆತ್ತಂತಿದ್ದ ಮಕ್ಕಳೆರಡು ಹೊರಗೆ ಬಂದವು. ರಾಜನು ಮಕ್ಕಳ ಕಡೆ ತಿರುಗದೆ ನನ್ನನ್ನು ನೋಡಿ—

"ತಾವ್ಮುಂದೆ ಬರ್ಬಾರ್ದು ಬುದ್ದಿ" ಎಂದ.

"ಯಾಕೋ?"

" ನಾನು ಮೋಚಿ ಬುದ್ದಿ........ಎಡಗೈನವ.

ಸ್ವಲ್ಪ ಹೊತ್ತು ನಿಂತು ಯೋಚಿಸಿದೆ. ಮನಸ್ಸು ಬರಿದಾಗಿತ್ತು.

" ರಾಚ " ಎಂದೆ.

" ಏನ್ಬುದ್ದೀ ? "

" ಇದು ತೊಗೋ. "

" ಅದ್ಯಾನ್ಬುದ್ದೀ "

" ತೊಗೋ. ದುಡ್ಡು ತೊಗೋ ನಿನ್ನ ಮಕ್ಕಳಿಗೆ......."

" ಬ್ಯಾಡಿ ನನ್ನೊಡ್ಯಾ. "

" ಇಲ್ಲ, ನೀ ತೊಗೋ " ಸ್ವಲ್ಪ ಹೊತ್ತು ನೀರವ. ರಾಚನು ನಿಷ್ಪಂದ ನಯನಗಳಿಂದ ನನ್ನನ್ನೇ ನೋಡುತ್ತ, "ಇವೊತ್ತು ಬ್ಯಾಡಿ ದ್ಯಾವ್ರೇ, ನಾಳೆ ಕೊಡಿ" ಎಂದ. ಆ ಧ್ವನಿಯಿಂದ ಅವನು ರುದ್ಧಕಂಠನಾಗಿದ್ದಂತೆ ಬೋಧೆಯಾಯಿತು. ನಾನು ಒಂದೆರಡು ಹೆಜ್ಜೆ ಹಿಂದಿಟ್ಟು ನಿಧಾನವಾಗಿ ಹಿಂದೆ ತಿರುಗಿದೆ. " ಕಾವಳ ಎಚ್ಚು ಬುದ್ಧೀ, ನಾನೂ ಒಂದಿಗೇ ಬತ್ತೀನಿ, " ಎಂದ. " ಏನೂ ಬೇಡ, ನೀನು ಯಾಕೆ ? " ಎಂದೆ. ಆದರೆ ಅವನು ಕೇಳಲಿಲ್ಲ.

ಮಾರನೆಯ ಸಂಜೆ ಕತ್ತಲೇರುತ್ತಿದ್ದಂತೆ, ರಾಚನನ್ನು ಹುಡುಕಿಕೊಂಡು ಅವನು ಕೂತುಕೊಳ್ಳುವ ಸ್ಥಳಕ್ಕೆ ಹೋದೆ. ಅಲ್ಲಿ ಅವನಿರಲಿಲ್ಲ. ಹಾಗೆಯೇ ಅವನ ಗುಡಿಸಲ ಕಡೆ ತಿರುಗಿದೆ; ಒಬ್ಬನೇ ನಡೆದೆ ದಾರಿ ಗೊತ್ತಿತ್ತು. ದೂರದಲ್ಲಿ ಗುಡಿಸಲೂ ಕಾಣಿಸಿತು. ಒಳಗಣಿಂದ ಬೆಳಕು ಬರುತ್ತಿರಲಿಲ್ಲ— "ರಾಚ" ಎಂದೆ ಗಟ್ಟಿಯಾಗಿ. ಉತ್ತರವಿಲ್ಲ. ಇನ್ನೂ ಮುಂದೆ ಹೋಗಿ ಬಾಗಿಲ ಹತ್ತಿರ ನಿಂತುಕೊಂಡೆ. ಪುನಃ ಕೂಗಿದೆ........ನೀರವ, ನೀರವ ಗುಡಿಸಲು ಬಾಗಿಲು ತೆರೆದಿತ್ತು. ಕೂಗುತ್ತ ಒಳಕ್ಕೆ ಕಾಲಿಟ್ಟೆ. ತಣ್ಣನೆಯ ಗಾಳಿ ಒಳಗಣಿಂದ ಸುತ್ತಿ ಕೊಂಡು ಸುತ್ತಿಕೊಂಡು ಹೊರಗೆ ಬಂತು. ಗುಡಿಸಲ ಒಳಗೆ—ಹೊರಗೆ ಎತ್ತಲೂ ಕತ್ತಲು; ತಾನೇ ತಾನಾಗಿತ್ತು. ಸುತ್ತ ಹುಡುಕಿದೆ; ಕೂಗಿದೆ; ನಿಶ್ಶಬ್ದ! "ರಾಚ ಇ....ಲ್ಲ" ಎಂದುಕೊಂಡೆ ಹೊರಗೆ ಬಂದೆ. ಬಾಗಿಲಲ್ಲಿ ನಿಂತು ತಲೆಯೆತ್ತಿ ಮೇಲೆ ನೋಡಿದೆ. ಮನದೊಳಗೆ "ರಾಚ ಇಲ್ಲ" ಎಂದುಕೊಂಡೆ. ಬಹು ದೂರದ ಅನಂತ ಅತೀತ ಕಾಲಿಮಾಮಯ ಶೂನ್ಯದಿಂದ—"ರಾ....ಚ....ಇ....ಲ್ಲ...." ಎಂದು ಮಾರ್ದನಿ ಬಂದಂತಾಯಿತು! ಒಂದು ಗಳಿಗೆಯ ವರೆಗೆ ನೀರವನಾಗಿ ನಿಷ್ಪಂದ ನಯನಗಳಿಂದ ಆ ಶೂನ್ಯವನ್ನೇ ನೋಡುತ್ತ ಪ್ರಸ್ತರ ಮೂರ್ತಿಯಂತೆ ನಿಂತೆ.

ರಾತ್ರಿ ಹಾಸುಗೆಯ ಮೇಲೆ ಮಲಗಿಕೊಂಡಾಗ ಕಮಲು ಬಂದು ಹತ್ತಿರ ನಿಂತುಕೊಂಡಳು. ಬಾಹ್ಯಶೂನ್ಯನಾದಂತಿದ್ದೆ. ಹೃದಯದಾಳದಲ್ಲಿ ಅಂದು ಸಂಜೆ ನಡೆದುದೆಲ್ಲಾ ಗಾಢತರವಾಗಿ ಚಿತ್ರಿತವಾಗಿತ್ತು. ಸಹಿಸಲಾರದೆ ಅಳಿಸಲು ಪ್ರಯ

ತ್ನಿಸಿದೆ. ಸಾಧ್ಯವಾಗಲಿಲ್ಲ. ನಾನೆಂಥ ಹುಚ್ಚ! ಅವನ ಕೈ ಹಿಡಿದೆತ್ತಬೇಕೆಂದು ಬಗೆದೆ. ಅವನ ದಾರಿದ್ರ್ಯದ ಅಳಲನ್ನು ತವಿಸಲು ತವಕಗೊಂಡೆ. ನಾನು ಯಾರು ಅದನ್ನು ಮಾಡುವುದಕ್ಕೆ? ನನ್ನಿಂದ ತನಗೆ ತೊಂದರೆಯಾಗಬಹುದೆಂದು ಭಾವಿಸಿದನೆ? ನಾನು ಅದನ್ನು ಕನಸಿನಲ್ಲಿಯೂ ಎಣಿಸಿರಲಿಲ್ಲವಲ್ಲ. ಇದು ಅವನಿಗೆ ತಿಳಿಯದೆ ಹೋಯಿತೆ? ತಿಳಿದರೂ ಬೇಡವಾಯಿತೋ? ಹೌದು; ಬೇಡವಾಯಿತು. ನನ್ನ ಉಪಕಾರದ ಹೊರೆ ಅವನಿಗೆ ಬೇಡವಾಯಿತು ಅವನದು ನಿಃಸ್ವಾರ್ಥ ಜೀವನ; ದುಡಿದು ಹೊಟ್ಟೆಹೊರೆಯುವ ಬಗೆ; ನೊಂದು ನೋವನ್ನು ನುಂಗಿಕೊಳ್ಳುವ ಸ್ವಭಾವ. ಅವನ ಬಗೆಗೆ ನಾನು ವ್ಯತಿರಿಕ್ತವಾಗಿ ನಡೆದೆ. ನನ್ನಿಂದ ಅವನು ಈ ಸ್ಥಳವನ್ನು ಬಿಟ್ಟು ಹೊರಟುಹೋದ.... ಎಲ್ಲಿಗೆ?

ಈ ನೆನಹು ಹೃದಯವನ್ನು ಹಿಂಡಿಬಿಟ್ಟಿತು. ಬಹು ದೂರದಲ್ಲೆಲ್ಲಿಯೋ ತುಮುಲ ವಿಪ್ಲವವಾಗುತ್ತಿರುವಂತೆ ಬೋಧೆಯಾಗುತ್ತಿತ್ತು. ಮನಸ್ಸು ಕ್ಷತವಿಕ್ಷತವಾಗಿತ್ತು. ಮೆಲ್ಲನೆ ಕಣ್ದೆರೆದೆ. ಕಮಲು ಮಂಚವನ್ನು ಒರಗಿ ನಿಂತು ಬಾಷ್ಪಪೂರಿತ ಲೋಚನೆಯಾಗಿದ್ದಳು. ಅಂತಃಕರಣ ಕರಗಿತು ಒಳಗೊಂದು ಚಿತ್ರ; ಹೊರಗೊಂದು ಚಿತ್ರ, ಒಂದಕ್ಕೊಂದು ವಿರುದ್ಧ. ಅವಳನ್ನು ನೋಡುತ್ತ ಮೆಲ್ಲನೆ ನುಡಿದೆ— "ಅವನ ಲೀಲೆ!"

—**ಭಾರತೀಯ**

## ಅಭ್ಯಸನಗಳು

**ಪ್ರಶ್ನೆಗಳು:—**

೧) ರಾಜನು ಹಾಡು ಹೇಳುತ್ತಿದ್ದುದು, ಅರ್ಧ ಆಣೆಗೆ ಸಂತುಷ್ಟನಾದುದು, ಆತನ ಯಾವ ಬಗೆಯ ಸ್ವಭಾವದ ನಿದರ್ಶನವಾಗಿದೆ?

೨) ಮೋಚಿಯನ್ನು ನೆನೆದಾಗ ಕಣ್ಣೀರು ಬಂದ ಕಾರಣವೇನು?

೩) ಮರುದಿನ ಸರಿಯಾಗಿದ್ದ ಜೋಡಿನ ಕೊನೆ ಕಿತ್ತುಕೊಂಡನೇಕೆ? ರಾಜನಲ್ಲಿ ಹೋದ ಕಾರಣವೇನು?

೪) ರಾಜನು ಆ ಜೋಡನ್ನು ತಿರುತಿರುಗಿಸಿ ನೋಡಿದನೇಕೆ?

೫) ರಾಜನು ಆ ವ್ಯಕ್ತಿಯನ್ನು ಕಂಡು ಹಿಮ್ಮೆಟ್ಟಿದನೇಕೆ?

೬) ಹೆಚ್ಚು ದುಡ್ಡು ಸಿಕ್ಕರೂ ರಾಜನು ಅದನ್ನು ಆಶಿಸಲಿಲ್ಲವೇಕೆ?

**ಭಾಷಾಭ್ಯಾಸ:—**

೧) ಕಥೆಯ ಕಟ್ಟಡವನ್ನು ನಿರೀಕ್ಷಿಸಿರಿ. ಕನಸಿನಲ್ಲಿ ಕಂಡ ಹಾಗೆ ಕಥೆಯನ್ನು ಪ್ರಾರಂಭಿಸಿದ್ದಾಗಿದೆ. ಆ ಪ್ರಸಂಗವು ಆತನ ಮನಸ್ಸಿನ ಮೇಲೆ ಎಷ್ಟು ಆಳವಾದ ಪರಿಣಾಮವನ್ನು ಮಾಡಿದ್ದಿತೆಂಬುದನ್ನು ಸೂಚಿಸಲು ಅಲ್ಲಿ ತೋರಿದ ಕೌಶಲ ಅಭ್ಯಸನೀಯವಾಗಿದೆ.

೨) ಬಡವರ ಪಕ್ಷಪಾತಿಯಾಗಿ, ಬೇರೊಬ್ಬರನ್ನು ಹಳಿಯದೆ ಅಥವಾ ಅಂತಹ ಯಾವ ಪ್ರಚಾರಕ ವ್ಯಾಖ್ಯಾನ ಕೊಡೆಯದೆ, ಸೂಕ್ತವಾದ, ಧ್ವನಿಯುಕ್ತವಾಗಿರುವ ಈ ರಚನಾರೀತಿ ಮನೋಹರವಾಗಿದೆ.

ಶಬ್ದ ವಿಚಾರ:—

೧) ಲಾಸ್ಯ-ತಾಂಡವಗಳಲ್ಲಿಯ ಭೇದವೇನು ?

೨) ಗೂಡು, ಗುಡಿಸು, ಗುಡಿ, ಗುಡಾರ—ಇವು ಯಾವ ಮೂಲ ಶಬ್ದದಿಂದ ನೋಕಿತಿವೆ ? ಇವುಗಳಲ್ಲಿಯ ಅರ್ಥವನ್ನು ಸ್ಪಷ್ಟಪಡಿಸುವ ಒಂದೊಂದು ವಾಕ್ಯವನ್ನು ಬರೆಯಿರಿ.

ವಾಕ್-ಶಿಕ್ಷಣ.—

ಒಬ್ಬರಲ್ಲಿ ಊಟಕ್ಕೆ ವಾರವನ್ನು ಕೇಳಹೋಗುವಾಗಿನ ದೃಶ್ಯವನ್ನು ಕಲ್ಪಿಸಿ ಅಭಿನಯಿಸಿರಿ.

ಚರ್ಚೆ:—

ಸಮಾಜಜೀವಿಯು ತಾನು ಯಾರ ಹಂಗಿನಲ್ಲೂ ಇಲ್ಲವೆಂಬುದು ಆತ್ಮವಂಚನೆ.

ಬರೆಹ:—

'ಪರಾವಲಂಬನವೆ ನರಕ' ಎಂಬುದನ್ನು ಮನಗಾಣಿಸಿಕೊಡುವ ಒಂದು ಪ್ರಸಂಗವನ್ನು ಕಲ್ಪಿಸಿ ಬರೆಯಿರಿ.

# ೨೪. ವ್ಯಂಗ್ಯ ಚಿತ್ರಗಳು

[ ಕೋಪ ಪ್ರಕೃತಿಯ ಗುಣ. ಸಂಸ್ಕೃತಿಯು ಅದನ್ನು ಮಾರ್ಪಡಿಸಿಕೊಂಡು ಅದ ಗುಣವನ್ನೇ ಏಳ್ಗೆಯ ಸಾಧನವನ್ನಾಗಿ ಬಳಸಿಕೊಳ್ಳಬಲ್ಲುದಾಗಿದೆ. ಸಮಾಜದೊಳಗಿನ ಅನೀತಿ ಅನ್ಯಾಯಗಳನ್ನು ಕಂಡು ಕೆರಳದವರು ನಾಗರಿಕರಲ್ಲ; ರಾಷ್ಟ್ರದ ಮೇಲೆ, ಮಾನವ ಜನಾಂಗದ ಮೇಲೆ ಯಾರಿಂದ ಆಪತ್ತು ಉಂಟಾಗುತ್ತಿಯೋ ಅವರ ವಿಷಯದಲ್ಲಿ ಸಿಟ್ಟು ತಲೆದೋರದಿದ್ದರೆ, ಅದು ಮನುಷ್ಯತ್ವವನ್ನು ಕಳಕೊಂಡ ಮನುಷ್ಯಾಕಾರದ ಪ್ರಾಣಿ ಎಂದು ಬಗೆಯಲಾಗುತ್ತದೆ.

ಒಬ್ಬನನ್ನು ಕಂಡು ನಗುವುದು ಸ್ವಭಾವದೊಳಗಿನ ಒಂದು ದೋಷವೇ ಸರಿ. ಆದರೆ ವ್ಯಂಗ್ಯಚಿತ್ರಗಳ ಕಲೆಯು ವಿಕಾಸವಾಗಿ, ಆ ಅವಗುಣವನ್ನೇ ಲೋಕಕಲ್ಯಾಣದ ಸಾಧನವಾಗಿ ಬಳಸಿಕೊಂಬ ಸಂಸ್ಕೃತಿಯ ಚಾತುರ್ಯ ಮತ್ತು ರಸಿಕತೆಯನ್ನು ಕಂಡು ಮಾನವಕುಲದ ವಿಕಾಸದ ಬಗೆಗೆ ಶ್ರದ್ಧೆಯು ಬಲಗೊಳ್ಳುತ್ತದೆ. ಮಾನವನೊಳಗಿನ ಬುದ್ಧಿ-ಭಾವನೆಗಳಲ್ಲಿರುವ ಕಸವನ್ನೂ ರಸವನ್ನಾಗಿ ಮಾರ್ಪಡಿಸಿಕೊಂಬ ಅಪೂರ್ವ ಶಕ್ತಿಯು ಲೋಕಕಲ್ಯಾಣಕ್ಕಾಗಿಯೇ ಮೀಸಲಾಗಿ ಉಳಿದಲ್ಲಿ ಭೂಲೋಕವು ಆನಂದ ಭುವನವಾಗಿ ಪರಿಣಮಿಸದೆ ಇರಲಾರದು.]

ನಗೆಯನ್ನು ತಮ್ಮ ಸಮಾಜದ ಉನ್ನತಿಗಾಗಿ ಬಳಸಿಕೊಂಡವರಲ್ಲಿ ಬ್ರಿಟಿಷ ರನ್ನು ಸರಿಗಟ್ಟುವರು ಬೇರಾವ ರಾಷ್ಟ್ರದವರೂ ಇಲ್ಲ. ಮನುಷ್ಯನು ಸಮಾಜದಲ್ಲಿ ಒಳ್ಳೆಯ ರೀತಿಯಿಂದ ನಡೆದುಕೊಳ್ಳುವುದಕ್ಕೆ ಕೇವಲ ಕಾಯಿದೆ ಕಾನೂನುಗಳ ಹೆದರಿಕೆಯೇ ಕಾರಣವಲ್ಲ; 'ಇನ್ನೊಬ್ಬರು ನಕ್ಕಾರು' ಎಂಬ ವಿಚಾರವೇ ಮುಖ್ಯ.

ವಾಗಿ ಜನವನ್ನು ಹಾದಿಯ ಮೇಲೆ ತರುತ್ತಿರುತ್ತದೆ. ಎಲ್ಲಿ ಮತ್ತು ಹೇಗೆ ನಗಬೇಕು, ಎಂಬುದೂ ತಿಳಿದಿರಬೇಕಾಗುತ್ತದೆ. ಆಟದೊಳಗಣ ಗೊಡ್ಡಿಯ ಹುಚ್ಚಾಟದ ನಗೆಯಿಂದ ಯಾವ ಪರಿಣಾಮವೂ ಆಗಲಾರದು. 'ನಗು ಬಂದರೆ ನಕ್ಕುಬಿಡಿ' ಜಾತಿಯ ಹಾಸ್ಯದಿಂದ ಸಾಮಾಜಿಕ ಅಥವಾ ರಾಜಕೀಯ ಸುಧಾರಣೆಯಾಗುವ ಸಂಭವ ಕಡಿಮೆ.

ಮನುಷ್ಯನಿಗೆ ತನ್ನ ಬೆನ್ನು ತನಗೆ ಕಾಣುವದಿಲ್ಲ. ಅಲ್ಲದೆ 'ತನ್ನಿಂದ ತಪ್ಪು ಆಗಿದೆ' ಎಂಬುದನ್ನು ಸಾಮಾನ್ಯವಾಗಿ ಯಾರ ಮನಸ್ಸೂ ಒಪ್ಪಲು ಸಿದ್ಧವಿರುವದಿಲ್ಲ. ಮಾನವನ ಈ ಕೊರತೆಯನ್ನು ಹೋಗಲಾಡಿಸಿ ಅವನನ್ನು ತಿದ್ದಲು ನಗೆ ಎಂಬ ಕನ್ನಡಿಯ ನೆರವು ಪಡೆದುಕೊಳ್ಳುವಲ್ಲಿ ಬ್ರಿಟಿಷರು ಅತ್ಯಂತ ಚತುರರಾಗಿದ್ದಾರೆ. ರಶಿಯಾ, ಜರ್ಮನಿ ಮೊದಲಾದ ರಾಷ್ಟ್ರಗಳಿಗಿಂತ ಇಂಗ್ಲಂಡಿನಲ್ಲಿಯೇ ವಿನೋದದ ಈ ಕಲೆಯು ಪರಿಪಕ್ವವಾಗಿ ವಿಕಾಸಗೊಳ್ಳಲು ಕಾರಣಗಳಿವೆ. ತಾಳ್ಮೆಯಿಲ್ಲದ ಅಥವಾ ಅತಿ ಗಂಭೀರ ಸ್ವಭಾವದ ಜನಕ್ಕೆ ನಗು ಎಂಬುದೆ ತಿಳಿಯದು. ಅವರು ಬಾಳಿನಲ್ಲಿ ತಾವು ನಕ್ಕು ಅರಿಯರು. ಇನ್ನೊಬ್ಬರಿಗೂ ನಗಲು ಕೊಡರು. ರೂಢಿ ಸಂಪ್ರದಾಯಗಳ ವಿಶೇಷ ಬಿಗುವು, ಧರ್ಮ ತತ್ತ್ವಜ್ಞಾನಗಳ ಅತಿರೇಕದ ಆಸಕ್ತಿ, ಸರ್ವಾಧಿಕಾರೀ ಮನೋವೃತ್ತಿ ಇರುವ ಸಮಾಜದಲ್ಲಿ ವಿನೋದಕ್ಕೆ ಬಹಿಷ್ಕಾರವಿರುತ್ತದೆ. ಒಂದೊಂದು ದೇಶದ ಸಾಹಿತ್ಯವು ಆಯಾ ದೇಶದ ಮನಸ್ಸಿನ ಸಂಸ್ಕಾರವೆಂತಹದು ಎಂಬುದನ್ನು ತೋರಿಸುತ್ತದೆ.

ಇಂಗ್ಲಂಡಿನ ಸಿರಿವಂತ ತರುಣರು ತಮ್ಮ ಅಧ್ಯಯನ ಮುಗಿದ ಬಳಿಕ ಪರದೇಶ ಸಂಚಾರ ಮಾಡಿ ಬರುವುದು ವಾಡಿಕೆಯಾಗಿದೆ. ೧೬ನೆಯ ಶತಮಾನದಲ್ಲಿ ಇಟಲಿಗೆ ಹೋಗುವ ಹುಚ್ಚು ಇತ್ತು. ಆ ದೇಶದಿಂದ ಮರಳಿ ಬಂದ ತರುಣರು ಇಟಲಿಯ ಊಟ-ಉಡಿಗೆಗಳನ್ನು ಅನುಕರಿಸುವಲ್ಲಿ ಹೆಮ್ಮೆಪಡುತ್ತಿದ್ದರು. ಸ್ವಾಭಿಮಾನಿಯಾದ ಇಂಗ್ಲಿಷ ಸಮಾಜಕ್ಕೆ ತರುಣರ ಈ ಅಂಧಾನುಕರಣ ಸಂಬರಲಿಲ್ಲ. ಇಂತಹ ಅರ್ಥವಿಹೀನ ಪರಾನುಕರಣದ ಸ್ವಭಾವದವರನ್ನು ಎಚ್ಚರಿಸುವ ವಿಡಂಬನ ಗ್ರಂಥಗಳು ಹುಟ್ಟಿದುವು. ಈ ಅಂಧಾನುಕರಣದ ನಗೆಬರಹಗಳೊಂದಿಗೆ ವಿನೋದಚಿತ್ರಗಳೂ ತಲೆಯೆತ್ತಿದುವು. ಇಂಗ್ಲಂಡಿನಲ್ಲಿ ವ್ಯಂಗಚಿತ್ರಗಳಿಗೆ ಪ್ರಾರಂಭವಾದುದು ಹೀಗೆ.

ಎಂತಹ ಮಾನ್ಯ ಗೃಹಸ್ಥರೇ ಇರಲಿ, ಮಹಾಮಂತ್ರಿಗಳಿರಲಿ, ಯಾವ ಶ್ರೇಷ್ಠ ಸಮಾಜ, ಹಿರಿಯ ಪಂಥ ಅಥವಾ ಪ್ರತಿಷ್ಠಿತ ವರ್ಗವೇ ಇರಲಿ, ನಡೆವಳಿಕೆಯಲ್ಲಿ ಇಲ್ಲದ ಡಾಂಭಿಕನ, ಅತಿರೇಕ, ಆಗ್ರಹಾದಿಗಳು ತಲೆದೋರಿ ಸಮಾಜದ ಹಾನಿಯಾಗಿರುತ್ತದೆಂದು ಎನಿಸಿದಾಗ ಇಂಗ್ಲಂಡಿನ ಜನ "ಈ ಉಸಾಬರಿ ನಮಗೇಕೆ ಬೇಕಪ್ಪಾ" ಎಂದು ತೆಪ್ಪಗೆ ಕುಳ್ಳಿರುವುದಿಲ್ಲ. ಕೂಡಲೆ ಪ್ರತಿಕ್ರಿಯೆಗಳಿಗೆ ಪ್ರಾರಂಭ

ವಾಯ್ತೆಂದೇ ತಿಳಿಯಬೇಕು. ಕ್ರಿಯೆಗೆ ಪ್ರತಿಯಾಗಿ ಕ್ರಿಯೆಯು ಆರಂಭವಾಗುವುದೇ ಜೀವಂತತನದ ಲಕ್ಷಣವಾಗಿದೆ. ದೇಹದಲ್ಲಿ ಜೀವವಿರುವವರೆಗೆ ಎಲ್ಲ ಪ್ರಾಣಿಗಳಲ್ಲೂ ಹೀಗೆ ಕ್ರಿಯೆ–ಪ್ರತಿಕ್ರಿಯೆಗಳು ನಡೆದೇ ಇರುತ್ತವೆ. ಜೀವಂತ ಸಮಾಜಕ್ಕೂ ಇದೇ ನಿಯಮವು ಅನ್ವಯಿಸುತ್ತದೆ. ಬ್ರಿಟನ್ನು ಜೀವಂತ ಸಮಾಜದ ದೇಶ. ಯಾರ ಭಿಡೆ ಮುರವತ್ತೂ ಇಲ್ಲದೆ ಸಮಾಜವು ತನ್ನ ತೂಕವನ್ನು ಕಾಯ್ದುಕೊಳ್ಳುವ ಪ್ರಯತ್ನದಲ್ಲಿ ಯಾವಾಗಲೂ ತೊಡಗಿರುತ್ತದೆ. ಯಾವ ಸಮಾಜದಲ್ಲಿ ಪ್ರಾಮಾಣಿಕ ಭಿನ್ನಾಭಿಪ್ರಾಯದ ಎದುರು ಪಕ್ಷಕ್ಕೆ ತಲೆಯೆತ್ತಿ ಉಸಿರಾಡಿಸಲು ಇಂಬು ಇಲ್ಲವೋ ಅದು ಜೀವಂತ ವಿಚಾರದ ಸಮಾಜವಾಗಿರದೆ ಅದೊಂದು 'ಕುರಿಯ ಹಿಂಡು,' ಸ್ವತಂತ್ರ ವಿಚಾರಶಕ್ತಿಗೆ ತಿಲಾಂಜಲಿಯನ್ನಿತ್ತ ಜನರ ಸಮೂಹ ಎಂದೇ ಹೇಳಬೇಕಾಗುತ್ತದೆ. ವ್ಯಂಗಚಿತ್ರಗಳು ಇಂಗ್ಲಿಷ ಸಮಾಜದ ಜೀವಂತ ಪ್ರತಿಕ್ರಿಯೆಯ ಪ್ರತೀಕಗಳಾಗಿವೆ. ಜಗತ್ತಿನಲ್ಲಿ ವ್ಯಂಗಚಿತ್ರಕಲೆಯ ಉಗಮವು ಮೊದಲು ಇಂಗ್ಲಂಡಿನಲ್ಲಿಯೇ ಆಗುವ ಕಾರಣವೇನು ಮತ್ತೆ ?

ಇಂಗ್ಲಂಡಿನ ಜನವು ಆಟಗುಳಿ ಸ್ವಭಾವದ್ದೆಂಬ ಮಾತು ಈ ವ್ಯಂಗ್ಯಚಿತ್ರಗಳ ವಿಚಾರದಲ್ಲಿಯೂ ಅನುಭವಕ್ಕೆ ಬರುತ್ತದೆ. 'ಲೋ' ಎಂಬ ವಿಖ್ಯಾತ ಚಿತ್ರಕಾರನು ಇಂಗ್ಲಂಡಿನ ಮಹಾಪ್ರಧಾನರಾದ ಚರ್ಚಿಲ್‌ರನ್ನು ಟೀಕಿಸಿ, ಆಗಾಗ ವ್ಯಂಗ್ಯಚಿತ್ರಗಳನ್ನು ಬರೆಯುತ್ತಿದ್ದನು. 'ಲೊನು ನನ್ನನ್ನು ನಗೆಯಾಡಿ ಬರೆದ ಚಿತ್ರಗಳನ್ನು ನೋಡದೆ ಇದ್ದ ದಿನ ನನಗೆ ಏನೋ ಒಂದು ಕೊರತೆಯೆನಿಸುತ್ತದೆ" ಎಂದು ಚರ್ಚಿಲ್ಲರು ಮರಳಿ ನಗುವನ್ನು ಬೀರುತ್ತಿದ್ದರು. ಇಂಗ್ಲಂಡಿನ ಜನಗಳು ಕ್ರಿಕೆಟ್ ಆಟದಂತೆ ನಗೆಯನ್ನು ಒಂದು ಆಟವೆಂದು, ಸಮಾಜದ ಮಾನಸಿಕ ಆರೋಗ್ಯ ಸ್ವಾಸ್ಥ್ಯಗಳನ್ನು ಕಾಯ್ದುಕೊಳ್ಳಲು ಉಪಯೋಗಿಸಿಕೊಂಬುದು ಅನುಕರಣೀಯವಾಗಿಲ್ಲವೇ?



ಛೇ! ಬರಿ ಪತ್ರ ತರುತ್ತೀ! ಮನಿಯಾರ್ಡರೇ ಇಲ್ಲ!
[ ಶಂಕರ್ಸ ವೀಕ್ಲಿಯ ಕೃಪೆಯಿಂದ]

ಮನಸ್ಸಿಗೆ ವ್ಯಂಗ ಚಿತ್ರಗಳ ಮೂಲಕವಾಗಿ ಆಗುವ ಸಂಸ್ಕಾರವು ಅಮೌಲಿಕವಾಗಿದೆ. ನಗಿಸಿ ಬುದ್ಧಿಕಲಿಸುವ ಗುಣವು ಈ ಬಗೆಯ ಚಿತ್ರಗಳ ವೈಶಿಷ್ಟ್ಯ. ಇಲ್ಲಿ ಮೊದಲನೆಯ ಚಿತ್ರವು 'ಅಂಚೆಜವಾನನು ದಿನಾಲು ಬರಿ ಪತ್ರಗಳನ್ನು ಮಾತ್ರ ಕೊಡುವನು. ಮನಿಯಾರ್ಡರುಗಳನ್ನು ಏಕೆ ತರಬಾರದು? ಎಂಬ ವಿಚಾರವನ್ನು ವ್ಯಂಗ್ಯವಾಗಿ ಹೇಗೆ ವ್ಯಕ್ತಪಡಿಸಿದೆ ಯೆಂಬುದನ್ನು ನೋಡಬಹುದು.

ಮನುಷ್ಯ ಸ್ವಭಾವದೊಳಗಿನ ಇನ್ನೊಂದು ಕುಂದನ್ನು ಈ ಎರಡನೆಯ ಚಿತ್ರದಲ್ಲಿ ಎತ್ತಿ ಪರಿಣಾಮಕಾರಕವಾಗಿ ತೋರಿಸಲಾಗಿದೆ. ತಾನು ಮರಣೋನ್ಮುಖನಾಗಿದ್ದಾನೆ; ಆದರೆ ಸತ್ತಮೇಲೆ ಕೂಡ ತನ್ನ ಹೆಸರು ಶಾಶ್ವತವಾಗಿ ಉಳಿಯಬೇಕೆಂಬ ಆಶೆ ತಪ್ಪಿಲ್ಲ. ಇಡೀ ಆಯುಷ್ಯವನ್ನೆಲ್ಲ ಎಂತೆಂತೋ ಕಳೆದು ಕೊನೆಗಾಲದಲ್ಲಿ ತನ್ನ ಕೀರ್ತಿ ಉಳಿಯಬೇಕೆಂದು ಹಂಬಲಿಸುವವರನ್ನು ನಗೆಯಾಡುವ ಚಿತ್ರವಿದು. ಕೈ ನಡೆವಾಗ ಊರಿಗೆ



ಮರಣೋನ್ಮುಖ ರೋಗಿ—ಡಾಕ್ಟರ ಬೇಗ ಹೋಗಿ, ಪತ್ರಿಕಾಕರ್ತರನ್ನೂ ಫೋಟೋಗ್ರಾಫರರನೂ ಕರೆದು ತನ್ನಿರಿ. [ಶಂಕರ್ಸ ವೀಕ್ಲಿಯ ಕೃಪೆಯಿಂದ]

ಉಪಕಾರ ಮಾಡದೆ, ಸಜ್ಜನಿಕೆಯಿಂದ ನಡೆಯದೆ, ಸಾಯುವ ಮುಂದೆ, ಸುದ್ದಿಗಾರರನ್ನೂ ಪತ್ರಿಕಾಕರ್ತರನ್ನೂ ಕರೆಸಿ, ಫೋಟೋಸಹಿತ ಚರಿತ್ರ ಛಾಪಿಸಬೇಕೆಂಬ ಹುಚ್ಚು ಈ ಚಿತ್ರ ನಿರೀಕ್ಷಿಸುವವರಿಗೆ ಸಕಾಲದಲ್ಲಿ ಎಚ್ಚರಿಯಲು ಸೂಚಿಸುತ್ತಿರುವುದಿಲ್ಲವೇ ? ಮೊದಲೇ ತನ್ನ ಸತ್ಕಾರ್ಯಗಳಿಂದ ನಾಲ್ವರ ಬಾಯಲ್ಲಿ ಉಳಿದವರಿಗೆ ಈ ಬಗೆಯಾಗಿ ನಗಿಸಿಕೊಂಬ ಹೆದರಿಕೆಯೇ ಇರುವುದಿಲ್ಲಿ.

ಅತಿ ಲಾಭದ ಆಸೆಯಿಂದ ತಮ್ಮ ಹತ್ತಿರ ಆವಶ್ಯಕ ಪದಾರ್ಥಗಳನ್ನು ಹೆಚ್ಚು ಸಂಗ್ರಹಿಸಿ, ಬಚ್ಚಿಟ್ಟು, ಧಾರಣಿಗಳು ಏರುವಂತೆ ಮಾಡುವ ಕಾಯಕ ನಡೆಸುತ್ತಿರುವುದು ನೀತಿಗೆಟ್ಟ ವರ್ತಕರ ಸ್ವಭಾವವೇ ಆಗಿದೆ. ವರ್ತಕರು ತಮ್ಮಲ್ಲಿ ಸಕ್ಕರೆಯನ್ನು ಹೀಗೆ ಒಟ್ಟರಿಸಿಕೊಂಡು, ಜನಗಳಿಗೆ ಸಕ್ಕರೆ ಸಿಗದಂತೆ ಮಾಡಿದಾಗ ಧಾರಣಿ ತುಟ್ಟಿಯಾಯಿತು, ಆಗಿನ ಚತುರ ಆಹಾರಮಂತ್ರಿಗಳಾದ ಕೀರ್ತಿಶೇಷ ಕಿಡ್ವಾಯಿಯವರು ಆಶೆಬುರುಕ ಧನಲೋಭಿ ವರ್ತಕರನ್ನು ಹೇಗೆ ನಗೆಗೀಡು ಮಾಡಿದರು ಎಂಬ ಸಂಸ್ಮರಣೀಯ ಪ್ರಸಂಗವು ಈ ಮೂರನೇ ಚಿತ್ರದಲ್ಲಿ ವ್ಯೈವೆತ್ತು ನಿಂತಿದೆ. ಮಾನ್ಯ ಕಿಡ್ವಾಯಿಯವರು ಮಾರ್ಮಿಕ ಸರಸ ವಿನೋದಿಗಳೆಂದು ಹೆಸರಾಗಿದ್ದರು, ಅವರ ಮೊಗದಲ್ಲಿ ಹೊರಸೂಸುತ್ತಿರುವ ಆ ನಗುವನ್ನು ಈ ಚಿತ್ರದಲ್ಲಿ ಎಷ್ಟು ಸೊಗ

ಸಾಗಿ ವ್ಯಕ್ತಪಡಿಸಿದ್ದಾರೆ! ಅತ್ತ ಗಾಬರಿಗೊಂಡು ಬಂದ ಕುತಂತ್ರದ ವರ್ತಕರ ತಂಡವನ್ನು ನೋಡಬೇಕು. ಜನರ ಬಾಯಿ ಬಡಿದು ಕಳ್ಳತನದಿಂದ ತಮ್ಮಲ್ಲಿ ಸಂಗ್ರಹಿಸಿಟ್ಟ ಸಕ್ಕರೆಯು ಇನ್ನು ಅಲ್ಲಿಯೆ ಬಿದ್ದು ಹಾಳಾಗುವ ಹೊತ್ತು ಬಂದಿತಲ್ಲ,




ಕಳ್ಳ ಸಂಗ್ರಹ ವರ್ತಕರು · ಅಯ್ಯೊ ? ನಮ್ಮ ಹೊಂಚು ಹಾಳಾಯಿತಲ್ಲ !

[ಶಂಕರ್ಸ್ ವೀಕ್ಲಿಯ ಕೃಪೆಯಿಂದ]

ಮಾನ್ಯ ಕಿಡ್ವಾಯಿಯವರು ದೂರದರ್ಶಿತ್ವದಿಂದ ಪೇಟೆಯಂಗಡಿಯಲ್ಲಿ ಬೇಕಾದಷ್ಟು ಗಿರಾಕಿಗಳಿಗೆ ಸಕ್ಕರೆ ಸಿಕ್ಕುವ ಏರ್ಪಾಟು ಮಾಡಿದ್ದರಿಂದ ತಾವು ಹಾನಿಗೆ ಈಡಾಗ ಬೇಕಾಗಿ ಬಂದಿತಲ್ಲವೆಂದು ಕಕ್ಕಾವಿಕ್ಕಿಯಾಗಿ ಸಕ್ಕರೆ ಉಗ್ರಾಣದ ಬಾಗಿಲು ತೆರೆವ ಗಡಬಿಡಿ ನಡೆಸಿದ್ದನ್ನು ಎಷ್ಟು ಅರ್ಥಪೂರ್ಣವಾಗಿ ಚಿತ್ರಿಸಿದ್ದಾಗಿದೆಯೆಂಬುದನ್ನು ನಿರೀಕ್ಷಿಸಬೇಕು.

ಇಂತಹ ಚಿತ್ರಗಳ ಮೂಲಕ ತಾವು ನಗಿಸಿಕೊಳ್ಳಬೇಕಾಗುವುದಲ್ಲ!—ಎಂಬ ನಾಚಿಕೆಯು ಹುಟ್ಟಿ ವರ್ತಕರ ದುರಾಸೆಯು ಕೆಲಮಟ್ಟಿಗಾದರೂ ಕಡಿಮೆಯಾಗಲೇ ಬೇಕಾಗುತ್ತದೆ. ಹೊತ್ತಿಗೆ ಸರಿಯಾಗಿ ಹೀಗೆ ನಗುವುದು ಗೊತ್ತಿರುವ ಸಮಾಜದಲ್ಲಿ ಲಂಚಗುಳಿತನ, ಕಳ್ಳಸಂತೆ ಮೊದಲಾದ ಅವಗುಣಗಳು ತಲೆಯೆತ್ತಿ ಮೆರೆಯಲಾರವು. ನಮ್ಮ ದೇಶದಲ್ಲಿ ಎಲ್ಲಿ, ಹೇಗೆ ಮತ್ತು ಯಾವಾಗ ನಗಬೇಕೆಂಬುದು ನಮ್ಮ ಸಮಾಜದ ಬಹುಜನಕ್ಕೆ ಇನ್ನೂ ತಿಳಿದಿಲ್ಲವೆಂಬುದಕ್ಕೆ ಬೇರೆ ಪ್ರಮಾಣಗಳೇ ಬೇಡ. ನಮ್ಮ ಸಮಾಜದ ರಾಜಕೀಯ, ಸಾಮಾಜಿಕ, ಧಾರ್ಮಿಕ ರಂಗಗಳಲ್ಲಿ ನಡೆದ ಅನ್ಯಾಯ–ಅನೀತಿಗಳ ಕೃತಿಗಳೇ ಈ ಮಾತನ್ನು ಸ್ಪಷ್ಟಪಡಿಸುತ್ತವೆ. ಇಂಗ್ಲಂಡಿನಲ್ಲಿ ಲಾರ್ಡ

ಕ್ಲೈವನಿಗೆ ಸಮಾಜದಿಂದ ನಗಿಸಿಕೊಳ್ಳುವ ಹೊತ್ತು ಬಂದದ್ದಕ್ಕೆ ಅವನಿಗೆ ತನ್ನ ಜೀವನ ಬೇಸರಿಕೆ ಬಂದಿತು! ಕ್ಲೈವನಿಗೆ ಬಂಗಾಲದ ನವಾಬನೆಂದು ಹೇಳುವ ವಾಡಿಕೆಯುಂಟಾಯಿತು. ಆತನ ಕೈಯಲ್ಲಿ ಬಂಗಾಲ ಪ್ರಾಂತವು ಸಿಕ್ಕಿತು. ಆತನು ಈಸ್ಟ ಇಂಡಿಯಾ ಕಂಪನಿಗೆ ತಿರುಗಿ ನಿಂತು ತಾನೇ ಇಲ್ಲಿಯ ಅರಸನೆಂದು ಸಾರಿದ್ದರೆ ನಮ್ಮ ದೇಶದ ಅನೇಕ ರಾಜರು ಆತನ ಬೆಂಬಲಕ್ಕೆ ಬರಬಹುದಾಗಿತ್ತು. ಆದರೆ ಆತನು ತನ್ನ ನಾಡಿಗೆ ಇಂತಹ ದ್ರೋಹ ಬಗೆಯಲಿಲ್ಲ. ಹಿಂದೂ ದೇಶದಲ್ಲಿರುವಾಗ ನಮ್ಮ ಜನದಿಂದ ಆತನಿಗೆ ಅಪಾರವಾದ ಸಂಪತ್ತು ದೊರೆತಿತ್ತು. ಅದನ್ನು ತಕ್ಕೊಂಡು ಇಂಗ್ಲಂಡಿನಲ್ಲಿ ಸುಖವಾಗಿ ಬಾಳಬೇಕೆಂದು ಹೋದನು ಆದರೆ ಇಂಗ್ಲಿಷ ಸಮಾಜದ ಸದಭಿರುಚಿಗೆ ಇದು ಒಗ್ಗಲಿಲ್ಲ. ಪ್ರಾಮಾಣಿಕ ಪ್ರಯತ್ನಗಳಿಂದಲ್ಲದೆ ಅಡ್ಡ ದಾರಿಗಳಿಂದ ಸಂಪತ್ತು ಗಳಿಸಿ, ಕೋಟ್ಯಾಧೀಶನಾದವನಿಗೂ ಬ್ರಿಟಿಶ್ ಜನತೆಯು ಹೀನನೆಂದೇ ಬಗೆಯುವುದು. ಕ್ಲೈವ, ವಾರನ್ ಹೇಸ್ಟಿಂಗ್ಸರ ಕುಟಿಲ ತಂತ್ರಗಳಿಂದ ಹಿಂದುಸ್ತಾನದಲ್ಲಿ ಬ್ರಿಟಿಶ್ ಸಾಮ್ರಾಜ್ಯದ ಸ್ಥಾಪನೆಯಾಯಿತು ಆದರೂ ಇಂಗ್ಲಂಡಿನ ಪಾರ್ಲಿಮೆಂಟಿನಲ್ಲಿ ಇವರ ಈ ಅನ್ಯಾಯಗಳು ವಿರುದ್ಧ ಕೂಗು ಏಳದೆ ಇರಲಿಲ್ಲ. ಜನರು ಈ ಬಗೆಯಾಗಿ ತಮ್ಮನ್ನು ಆಡಿಕೊಂಡಾರು, ನಕ್ಕಾರು ಎಂಬ ಹೆದರಿಕೆಯು ಇಂಗ್ಲಂಡದ ನಾಗರಿಕರ ಶೀಲವನ್ನು ಎತ್ತರದ ಮಟ್ಟದಲ್ಲಿ ಕಾದುಕೊಂಡು ಹೋಗಿದೆ. ಬರಿಯ ಕಾಯಿದೆಗಳ ಭೀತಿಯಿಂದ ಯಾವ ದೇಶವನ್ನೂ ಸುಧಾರಿಸಲು ಸಾಧ್ಯವಿಲ್ಲ. ಜನಗಳಲ್ಲಿ ಅನ್ಯಾಯದ ಪ್ರತೀಕಾರ ಮಾಡುವಂತೆ ನಗೆಯಾಡುವ ಸ್ವಭಾವವು ಬೆಳೆದು ಬರಬೇಕು. ಲಂಚದಿಂದ ಲಕ್ಷಾಧೀಶನಾದವನಿಗೆ ಸಮಾಜದಲ್ಲಿ ಮೋರೆ ಎತ್ತುವುದು ಕಠಿಣವಾದರೆ ಲಂಚಗುಳಿತನವು ನಿರ್ಮೂಲವಾಗಲು ತಡವಿಲ್ಲ 'ದುಡ್ಡೇ ದೊಡ್ಡಪ್ಪ' 'ಹಣ ಕಂಡರೆ ಹೆಣ ಬಾಯಿ ಬಿಡುತ್ತದೆ' ಎಂಬೀ ಬಗೆಯ ಗಾದೆಯ ಮಾತುಗಳಿಂದ ದುಡ್ಡಿನ ಮುಂದೆ ಮಾನಮರ್ಯಾದೆ, ರಾಷ್ಟ್ರಾಭಿಮಾನ, ಮನುಷ್ಯತ್ವ ಇವುಗಳಿಗೆ ಬೆಲೆಯಿಲ್ಲವೆಂದು ಬಗೆಯುವಂತಹ ಕೀಳುಮನಸ್ಸಿನ ಜನಗಳು ಸಮಾಜದಲ್ಲಿ ಒಹು ಸಂಖ್ಯೆಯಲ್ಲಿ ಇರುವವರೆಗೆ ಎಂತಹ ಕಾನೂನಿನಿಂದಲೂ ಅನೀತಿಯನ್ನು ನಿರ್ಮೂಲ ಮಾಡುವುದಕ್ಕೆ ಶಕ್ಯವಿಲ್ಲ, ಈ ದೃಷ್ಟಿಯಿಂದ ಜನಕ್ಕೆ ಸರಿಯಾಗಿ ನಗಲು ಕಲಿಸುವ, ನೀಚಪ್ರವೃತ್ತಿಗಳ ಜನರಿಗೆ ತಲೆ ತಗ್ಗಿಸ ಹಚ್ಚುವ ವ್ಯಂಗ್ಯ ಚಿತ್ರಗಳ ಹಿರಿಮೆ ಎಂತಹದೆಂಬದನ್ನು ತಿಳಿದು ನೋಡಬೇಕು.

ಮರವಟ್ಟಿದ ಮೈಗೆ ಹೇಗೆ ಸ್ಪರ್ಶಜ್ಞಾನವು ಇಲ್ಲದಾಗಿರುತ್ತದೋ ಹಾಗೆ ರೂಢ ವಿಚಾರಗಳಿಂದ ಬುದ್ಧಿಯು ಬಧಿರವಾದಾಗ ವ್ಯಂಗ್ಯ ವಿನೋದವು ಮತ್ತೆ ಹೊಸ ಅರಿವನ್ನು ತಂದುಕೊಡುತ್ತದೆ. ಇದೀಗ ಈ ನಾಲ್ಕನೆಯ ಚಿತ್ರವನ್ನು ನಿರೀಕ್ಷಿಸಿರಿ, ಇದರಲ್ಲಿ ಧ್ವನಿತವಾಗುವ ವಿಚಾರವೇನೆಂಬದನ್ನು ಬಗೆದು ನೋಡಿರಿ. ಆಡು ಮತ್ತು ಹುಲಿಯನ್ನು ಒಂದೇ ತಟ್ಟೆಯಲ್ಲಿ ಉಣ್ಣಹಚ್ಚುವ ಸರ್ಕಸ ಮ್ಯಾನೇಜರರು ಯಾರೆಂಬುದು ಆ ಚಿತ್ರದಲ್ಲಿ ತಾನೆ ಗೊತ್ತಾಗುವಂತಿದೆ. ಮಹಾಪ್ರಧಾನ ಪಂ.

ಜವಾಹರಲಾಲರು ಕೋಟ್ಯಧೀಶರಾದ ಕಾರಖಾನೆದಾರರಿಗೆ ತಮ್ಮ ಕೆಲಸಗಾರರಿಗೂ ಲಾಭದಲ್ಲಿ ಪಾಲು ಹಂಚಲು ಉಪದೇಶಿಸಿದ್ದನ್ನು ಕುರಿತು ಈ ವ್ಯಂಗ್ಯ ಚಿತ್ರವು ಹೊರಟಿದೆ. ಕಾರಖಾನೆದಾರರಿಗೆ ಆಗುವ ಲಾಭಕ್ಕೆ ಅಲ್ಲಿಯ ಕೆಲಸಗಾರರ ಪರಿಶ್ರಮ



. ಒಂದೇ ತಟ್ಟೆಯಲ್ಲಿ ಉಣ್ಣೋಣ !

(ಶಂಕರ್ಸ ವೀಕ್ಲಿಯವರ ಕೃಪೆಯಿಂದ)

ಗಳೇ ಕಾರಣವಾಗಿರುತ್ತವೆ; ಆದುದರಿಂದ ಕಾರಖಾನೆಗಳ ಒಡೆಯರು ತಮ್ಮ ಲಾಭದಲ್ಲಿ ಕೆಲಸಗಾರರನ್ನೂ ಪಾಲುಗಾರರೆಂದು ಬಗೆಯುವದು ನ್ಯಾಯವಾಗಿದೆ —ಎಂಬ ಹೊಸ ವಿಚಾರವನ್ನು ಜನದ ಮುಂದಿಟ್ಟಿದ್ದಾರೆ. ಈವರೆಗೆ, ಹಣ ಹಾಕಿದವರಷ್ಟೇ ಮಾಲಕರೆಂಬ ಕಲ್ಪನೆ ರೂಢವಾಗಿದೆ. ಆದರೆ ಇನ್ನು ಮೇಲೆ ಕೆಲಸಗಾರರ ಒಡೆತನದ ಕಾರಖಾನೆಗಳು ಮಾತ್ರ ದೇಶದಲ್ಲಿ ಇರಬೇಕು ಬಂಡವಾಳಗಾರರ ಸುಲಿಗೆಗೆ ಆಸ್ಪದ ಉಳಿಯಬಾರದು ಎಂಬ ಸಮಾಜವಾದೀ ವಿಚಾರವು ಪ್ರಸಾರವಾಗುತ್ತಲಿದೆ.

ಈ ಐದನೆಯ ಚಿತ್ರವನ್ನು ನೋಡಿರಿ. ಇದು ವಿಲ್ ಡಾಯಸನ್ ಎಂಬ ವಿಖ್ಯಾತ ವಿನೋದೀ ಚಿತ್ರಕಾರನ ಕೃತಿಯು. ಆತನು ನ್ಯೂಯಾರ್ಕಿಗೆ ಹೋದಾಗ 'ಈ ಪಟ್ಟಣದ ಬಗೆಗೆ ತಮ್ಮ ಅಭಿಪ್ರಾಯವನ್ನು ಏನಾದರೂ ಹೇಳುವಿರೆಯೇ?' ಎಂದು ಪತ್ರಿಕೆಗಳ ಸುದ್ದಿಗಾರರು ಕೇಳಿದರು. ಆತನು ನಾಳೆಯ ಪತ್ರಿಕೆಗಳಲ್ಲಿ ನೋಡಿಕೊಳ್ಳಿ ಎಂದು ಹೇಳಿದ. ಮರುದಿನ ಪತ್ರಿಕೆಗಳಲ್ಲಿ ಈ ಚಿತ್ರವು ಪ್ರಕಟವಾಗಿತ್ತು. ಈ ಚಿತ್ರದ ಕೆಳಗೆ ಬರೆದ ಒಂದೇ ವಾಕ್ಯವು ಎಷ್ಟು ಅರ್ಥಗರ್ಭಿತವಾದ, ಹದನಾದ ಮಾತು ಇದೆ ಎಂಬುದನ್ನು ಗಮನಿಸಿರಿ. ಮೇಲಿನಿಂದ ನ್ಯೂಯಾರ್ಕ ಪಟ್ಟಣವನ್ನು


ಸೈತಾನ— ಬದುಕಿದ್ದರೆ, ನಾನಿಲ್ಲಿಯೂ ಕಲಿಯ ತಕ್ಕದ್ದು ತುಂಬ ಇದೆ!

ನಿರೀಕ್ಷಿಸುತ್ತಿದ್ದ ಸೈತಾನವು ಒಡನುಡಿದ ವಾಕ್ಯವು ಅದು; 'ಇಲ್ಲಿ ನನಗೂ ಕಲಿಯ ಬೇಕಾದುದು ಎಷ್ಟು ಇದೆ!' ಎಂಬ ಈ ಬಗೆಯ ಮಾತಿನಲ್ಲಿರುವ ಸೂಕ್ಷ್ಮ ಧ್ವನಿಯು ಎಷ್ಟು ಆಳವಾದುದಾಗಿದೆ! ಸೈತಾನನೆಂದರೆ ಪಾಪದ ಪ್ರತ್ಯಕ್ಷ ಮೂರ್ತಿ, ಅಂತಹ ಸೈತಾನನೇ ಎನ್ನುವದೇನು? ಈ ನ್ಯೂಯಾರ್ಕ ಪಟ್ಟಣವು ನನಗೂ ಗುರುವಿನ ಸ್ಥಾನ ದಲ್ಲಿದೆ. ಎಂಬುವಲ್ಲಿ ತುಂಬಿ ಹೊರ ಸೂಸುತ್ತಿರುವ ವ್ಯಂಗ್ಯಧ್ವನಿಯು ವಿಚಾರವಂತರ ಮನಸ್ಸನ್ನು ಸೂರೆ ಗೊಳ್ಳುತ್ತದೆ. ಇಂತಹ ಒಂದೇ ಮಾತನ್ನಾಡಿ ತನ್ನ ಮನೋಭಾವ ವನ್ನು ವ್ಯಕ್ತಗೊಳಿಸುವಲ್ಲಿ ಬೇಕಾ ಗುವ ಆತ್ಮಸಂಯಮನ, ಆಳವಾದ ವಿಚಾರಶಕ್ತಿಯು ಅದೆಷ್ಟು ಇರಬೇಕಾಗುತ್ತದೆ!

ಕೊನೆಯ ಈ ಚಿತ್ರವು ಹಾಲಂಡಿನ ಒಬ್ಬ ಕಲಾವಿದನು ಬರೆದುದು.


ಬಂಧಿತರು ಯಾರು?

ಮಹಾತ್ಮಾಜಿಯವರ ಬಂಧ ನದ ನಿಮಿತ್ತದಿಂದ ಆತನು ತನ್ನ ಭಾವನೆಗಳನ್ನು ಈ ಚಿತ್ರದ ಮೂಲಕವಾಗಿ ವ್ಯಕ್ತಗೊಳಿಸಿದ್ದಾನೆ ಇಂಗ್ಲಂ ಡಿನ ಆಗಿನ ಮುಖ್ಯ ಮಂತ್ರಿ ರ‍್ಯಾಮ್ಸೆ ಮ್ಯಾಕ್ಡೊನಾಲ್ಡರು ಗಾಂಧೀಜಿಯವರನ್ನು ಬಂಧಿ ಸಿದುದನ್ನು ಈ ಚಿತ್ರದಲ್ಲಿ ಕಾಣಿಸಲಾಗಿದೆ. ಗಾಂಧೀ ಜಿಯ ಮುಖದಲ್ಲಿ ಉಕ್ಕುವ ಆ ಹಾಸ್ಯವನ್ನು ನೋಡಿ! ಇವರಿಗೆ ತಾನು ಸೆರೆಮನೆಗೆ ಹೋಗಬೇಕಾಯ್ತೆಂಬ ಚಿಂತೆಯ ಲವಲೇಶವಾದರೂ ಮೊಗದಲ್ಲಿ ಕಾಣುವುದೆ? ಅದೇ ಬ್ರಿಟಿಶ ಸಾಮ್ರಾಜ್ಯದ

ಸೂತ್ರಗಳು ಯಾರ ಕೈಯಲ್ಲಿರುವವೋ ಆ ಮಹಾಪ್ರಧಾನ ಮ್ಯಾಕ್ಡೊನಾಲ್ಡರ ಮುಖಭಾವ ನೋಡಿರಿ! ಚಿಂತೆಯ ಸಂತೆ ಅವರ ಮುದ್ರೆಯಲ್ಲಿ ಎದ್ದು ಕಾಣುತ್ತದೆ. ಆದುದರಿಂದ ಈ ಕಲಾವಿದನು ತನ್ನ ಈ ಚಿತ್ರದ ಬುಡದಲ್ಲಿ ಬರೆದ "ಬಂಧಿತರು ಯಾರು?" ಎಂಬ ವಾಕ್ಯವು ಎಷ್ಟು ಮಾರ್ಮಿಕವಾಗಿದೆ ಎಂಬುದನ್ನು ಬಗೆದು ಭಾವಿಸಿರಿ.

ಇದು ಗಾಂಧೀಜಿಯವರ ಬಂಧನಕ್ಕೆ ಸಂಬಂಧಿಸಿದ ಕೇವಲ ತಾತ್ಕಾಲಿಕ ಮಹತ್ವದ ಚಿತ್ರವಲ್ಲ. ಇದರಲ್ಲಿ ಸಾರ್ವಕಾಲಿಕವಾದ ಒಂದು ಸನಾತನ ತತ್ತ್ವವೂ ಅಡಕವಾಗಿದೆ. "ಇನ್ನೊಬ್ಬರ ಸ್ವಾತಂತ್ರ್ಯವನ್ನು ಹರಣಮಾಡಿ, ಅವರನ್ನು ತಮ್ಮ ಕೈಯಲ್ಲಿ ಹಿಡಿದಿಟ್ಟುಕೊಳ್ಳುವವರೇ ಲೋಕದಲ್ಲಿ ನಿಜವಾದ ಬದ್ಧರು" ಎಂಬ ಮಹಾತತ್ತ್ವವು ಇಲ್ಲಿ ಮನವರಿಕೆಗೆ ಬರುತ್ತಲಿದೆ. 'ಹಿಡಿದು ಇಡುವಲ್ಲಿ' ನಮ್ಮ ಸ್ವಾತಂತ್ರ್ಯಕ್ಕೆ ಭಂಗವು ಬರುವುದು. ನಮಗೆ ಬೇಕಾದತ್ತ ಹೋಗುವುದಕ್ಕೆ ಆಗುವುದಿಲ್ಲ. ಹಿಡಿದಿಟ್ಟ ವಸ್ತುವಿನ ಮೂಲಕ ನಮ್ಮ ಸ್ವಾತಂತ್ರ್ಯವು ಸಂಕ್ಷೇಪಗೊಳ್ಳುತ್ತದೆ. ಇದೊಂದು ಆಳವಾದ ತಾತ್ತ್ವಿಕ ವಿಚಾರ. ಎಷ್ಟು ಮನನ ಮಾಡಿದರೂ ಕಡಿಮೆಯೇ!

ಹೀಗೆ ಒಂದೊಂದು ಚಿತ್ರದ ಮೂಲಕವಾಗಿ ನೂರಾರು ಪುಟಗಳಲ್ಲಿಯೂ ಸಮಾಧಾನಕರವಾಗಿ ವಿವರಿಸಲಿಕ್ಕಾಗದ ವಿಷಯವನ್ನು ಒಂದು ಸಣ್ಣ ವ್ಯಂಗ್ಯಚಿತ್ರದಲ್ಲಿ ಕೆಲವೇ ಗೆರೆಗಳಿಂದ ಎಷ್ಟು ಪರಿಣಾಮಕಾರಿಯಾಗಿ ಲೋಕವೇ ಮುಗ್ಧವಾಗುವಂತೆ ವ್ಯಕ್ತಪಡಿಸಲು ಸಾಧ್ಯವಿದೆ! ಶ್ರೇಷ್ಠ ಕಲಾವಿದರ ವ್ಯಂಗ ಚಿತ್ರಗಳನ್ನು ಪ್ರಸಿದ್ಧಿಸುವಲ್ಲಿ ಇಂದಿನ ಸುಪ್ರಸಿದ್ಧ ಪತ್ರಿಕೆಗಳಲ್ಲಿ ಸ್ಪರ್ಧೆ ನಡೆದಿರುವುದು ಕಂಡು ಬರುತ್ತಿದೆ. ನಮ್ಮ ದೇಶದಲ್ಲಿಯೂ ಈಗ ವ್ಯಂಗ್ಯಚಿತ್ರಗಳನ್ನು ಬರೆವ ಪ್ರತಿಭಾವಂತರಾದ ಕಲಾವಿದರು ಕಾಣಿಸಿಕೊಳ್ಳುತ್ತಿದ್ದಾರೆ. 'ಶಂಕರ್ಸ ವೀಕ್ಲಿ' ಎಂಬ ವಾರಪತ್ರಿಕೆಯು ಈ ಬಗೆಯ ಚಿತ್ರಗಳಿಗೇ ಮೀಸಲಾಗಿದೆ. 'ಲಕ್ಷ್ಮಣ' ಮೊದಲಾದವರು ವ್ಯಂಗ್ಯ ಚಿತ್ರಗಳನ್ನು ಬರೆವಲ್ಲಿ ಹೆಸರಾಗಿದ್ದಾರೆ.

ಸರಿಯಾಗಿ ಉಪಯೋಗಿಸಿಕೊಂಡರೆ ನಮ್ಮ ಜೀವನದ ಪೋಷಣೆಗೆ ಸಹಾಯಕವಾಗುವ ಬೆಂಕಿಯೇ, ಅವಿಚಾರದ ಆಟದಲ್ಲಿ ನಾಶಕ್ಕೂ ಕಾರಣವಾಗುವುದು. ವ್ಯಂಗ್ಯಚಿತ್ರ, ಕಥೆ ಕಾದಂಬರಿ, ನಾಟಕಾದಿ ಕಲೆಗಳಿಗೂ ಇದೇ ಮಾತು ಸರಿಹೋಗುತ್ತದೆ. ವ್ಯಂಗ್ಯ ಚಿತ್ರಗಳಿಂದ ಸೂಚಿತವಾಗುವ ಭಾವವು ಮನಸ್ಸನ್ನು ತಿದ್ದಲು, ನಗಿಸಿ ಬುದ್ಧಿ ಹೇಳಲು ಸಮರ್ಥವಾಗಿರಬೇಕಲ್ಲದೆ ಅವಿಚಾರಕ್ಕೆ ಉತ್ತೇಜನ ಕೊಡುವ ಸೂಚನೆಗಳು ಅದರಲ್ಲಿರಕೂಡದು ದ್ವೇಷವನ್ನು ಕೆರಳಿಸಿ, ತಲೆತಿರುಗಿಸುವಂತಹ ಚಿತ್ರಗಳಿಂದ ಸಮಾಜಕ್ಕೆ ಹಾನಿಯುಂಟು.

ವ್ಯಂಗ್ಯ ಚಿತ್ರಗಳೊಳಗಿನ ಧ್ವನಿಯನ್ನು ಅರಿತುಕೊಳ್ಳಲು ಒಂದು ಬಗೆಯ ಹೆಚ್ಚಿನ ತಿಳುವಳಿಕೆ ಬೇಕಾಗುತ್ತದೆ. ಸಂಸ್ಕಾರವಂತರಲ್ಲದವರಿಗೆ, ಸೂಕ್ಷ್ಮ ನಿರೀಕ್ಷಣ

ಶಕ್ತಿಯಿಲ್ಲದವರಿಗೆ, ತಾಳ್ಮೆಯಿಂದ ಪರ್ಯಾಲೋಚಿಸುವ ಸಾಮರ್ಥ್ಯವು ಇಲ್ಲದವರಿಗೆ ಎಂದರೆ ವಿವೇಕವು ಸಾಕಷ್ಟಿಲ್ಲದವರಿಗೆ ಈ ಚಿತ್ರಗಳಿಂದ ಅರ್ಥಬೋಧವಾಗಲು ಸಾಧ್ಯವಿಲ್ಲ. ಆದುದರಿಂದ ತಮ್ಮ ವಿಚಾರಶಕ್ತಿಯನ್ನು ಆಗಾಗ ಉಜ್ವಲಗೊಳಿಸಿಕೊಳ್ಳಲಿಚ್ಛಿಸುವವರು ಸುಪ್ರಸಿದ್ಧ ಕಲಾವಿದರ ವ್ಯಂಗ್ಯ ಚಿತ್ರಗಳನ್ನು ನಿರೀಕ್ಷಿಸುವ ಅಭ್ಯಾಸವನ್ನು ಇಟ್ಟುಕೊಳ್ಳುವುದು ಲೇಸು.

—ಶಂ. ಬಾ. ಜೋಶಿ

## ಅಭ್ಯಸನಗಳು

**ಪ್ರಶ್ನೆಗಳು:—**

೧) ನಗೆಯನ್ನು ಸ್ವಂತದ ಆನಂದಕ್ಕಲ್ಲದೆ, ಮತ್ತೆ ಯಾವ ಬಗೆಯಲ್ಲಿ ಅದನ್ನು ಉಪಯೋಗಿಸಿಕೊಳ್ಳಬಹುದು ?

೨) ನಗುವು ಎಲ್ಲಿ ಅರಳಲಾರದು ?

೩) ಜೀವಂತ ಸಮಾಜದ ಲಕ್ಷಣವೇನು ?

೪) ಇಂಗ್ಲಂಡಿನಲ್ಲಿಯೇ ವ್ಯಂಗ್ಯಚಿತ್ರಗಳು ವಿಕಾಸಗೊಳ್ಳಲು ಕಾರಣವೇನು ?

**ಭಾಷಾಭ್ಯಾಸ:—**

ಸ್ಪಷ್ಟೀಕರಿಸಿರಿ.

೧) ಇಂಗ್ಲಂಡದ ಜನರು ನಗೆಯನ್ನು ಆಟದಂತೆ ಬಳಸಿಕೊಂಡಿದ್ದಾರೆ.

೨) ಹೇಗೆ ನಗುವದು ಗೊತ್ತಿಲ್ಲದ ಸಮಾಜದಲ್ಲಿ ಲಂಚುಗುಳಿತನ, ಕಳ್ಳಸಂತೆ ಮೊದಲಾದ ಅವಗುಣಗಳು ತಲೆಯೆತ್ತುತ್ತವೆ.

೩) ಇಂಗ್ಲಂಡಿನ ನಾಗರಿಕರ ಜೀವನವನ್ನು ಎತ್ತರದ ಮಟ್ಟದಲ್ಲಿ ಕಾದುಕೊಂಡು ಹೋಗಲು ನಗೆಯೆ ಕಾರಣವಾಗಿದೆ.

೪) ಕಾಯದೆಗಿಂತ ನಗುವಿನ ಸಾಮರ್ಥ್ಯ ದೊಡ್ಡದು.

**ಶಬ್ದ ವಿಚಾರ:—**

೧) 'ಗುಳಿ' ಪ್ರತ್ಯಯ ಹಚ್ಚಿ ಶೀಲಗುಣವಾಚಕ ಐದು ಶಬ್ದಗಳನ್ನು ಹೇಳಿರಿ. ಉದಾ: ಆಟಗುಳಿ.

೨) ವಾದ— ಎಂಬ ಪದವನ್ನು ಹಚ್ಚಿ 'ಸಮಾಜವಾದ' ಈ ಬಗೆಯ ಐದು ಶಬ್ದಗಳನ್ನು ಹೇಳಿರಿ.

೩) ಈ ಚಿತ್ರದಲ್ಲಿ ವ್ಯಂಗವಿದೆ. ಈ ಚಿತ್ರದಲ್ಲಿ ವ್ಯಂಗ್ಯವಿದೆ.— ಇವುಗಳಲ್ಲಿರುವ ಅರ್ಥವ್ಯತ್ಯಾಸವನ್ನು ಹೇಳಿರಿ.

**ವಾಕ್-ಶಿಕ್ಷಣ:—**

ವರ್ಣಚಿತ್ರ, ತೈಲಚಿತ್ರ, ವ್ಯಂಗ್ಯಚಿತ್ರ, ರೇಖಾಚಿತ್ರ— ಇವುಗಳಲ್ಲಿಯ ಭೇದವನ್ನು ಅರಿಯಿರಿ.

**ಚರ್ಚೆ:—**

ವ್ಯಂಗ್ಯಚಿತ್ರದಿಂದ ಅನಿಷ್ಟ ಪರಿಣಾಮಗಳೇ ಹೆಚ್ಚಾಗುತ್ತವೆ.

**ಬರೆಹ:—**

ನಿಮ್ಮ ಮನಸ್ಸಿನ ಮೇಲೆ ಪರಿಣಾಮ ಮಾಡಿದ ಎರಡು ವ್ಯಂಗ್ಯ ಚಿತ್ರಗಳನ್ನು ಬಣ್ಣಿಸಿರಿ.

# ೨೫. ಕ್ರಿಸ್ತಿ ಟಿಕರನ ಕೊನೆ

[ ತಾವು ಶ್ರೇಷ್ಠ ವರ್ಣದವರೆಂಬ ಅಹಂಕಾರವು ಒಂದೊಂದು ದೇಶದಲ್ಲೂ ಹೇಗೆ ತಾಂಡವವಾಡಿ ಅನಾಹುತವನ್ನು ಮಾಡುತ್ತಿದೆ ಎಂಬುದನ್ನು ಮನಗಾಣಿಸಿಕೊಡುವ ಪರಿಣಾಮಕಾರಿಯಾದ ಕಥೆಯಿದು. ನಮ್ಮ ದೇಶದಲ್ಲಿ ಚಾತುರ್ವರ್ಣ್ಯದ ಭೇದಗಳಲ್ಲದೆ ಹರಿಜನರಿಗೆ ಆಗುತ್ತಿರುವ ಅನ್ಯಾಯಕ್ಕೂ ಅಳವಿಲ್ಲ. ದಕ್ಷಿಣ ಆಫ್ರಿಕೆಯಲ್ಲಿ ಬಿಳಿಯರು ಹಿಂದೀಯರನ್ನೂ ನಿಗ್ರೋಗಳನ್ನೂ ಕಾಡಿ ಅಲ್ಲಿಂದ ತೊಲಗಿಸಲು ನಡೆಸಿದ ಕುತಂತ್ರಗಳು ಮಿತಿಮೀರಿವೆ. ಸಂಯುಕ್ತರಾಷ್ಟ್ರಸಂಘವು ಜಗತ್ತಿನೊಳಗಿನ ಈ ಬಗೆಯ ಅನ್ಯಾಯಗಳನ್ನೆಲ್ಲ ತೊಡೆದು ಹಾಕಿ ಮಾನವರೆಲ್ಲ ಸರಿಸಮಾನರೆಂಬ ಭಾವವನ್ನು ಉಂಟುಮಾಡುವ ಹಿರಿಗುರಿಯನ್ನು ಇಟ್ಟು ಕೊಂಡಿದೆ. ಎಲ್ಲ ರಾಷ್ಟ್ರಗಳೂ ಪ್ರಾಮಾಣಿಕತನದಿಂದ ಸಹಕರಿಸುವ ವರೆಗೆ ಅವರ ಉದ್ದೇಶವು ಕೇವಲ ಕಾಗದಗಳಲ್ಲೇ ಉಳಿಯುವದು. ಕೆಳಗಿನ ಸ್ಥಿತಿಯಲ್ಲಿದ್ದವರು ಸುಧಾರಿಸಿ ಮೇಲಿನ ಮಟ್ಟಕ್ಕೆ ಬರಬೇಕೆಂಬ ಹಂಬಲವನ್ನೇ ಅಪರಾಧವೆಂದು ಬಗೆಯುವದರಿಂದ ಎಂತಹ ಕ್ರೂರ ಘಟನೆಗಳು ನಡೆದುಹೋಗುವುವು ಎಂಬುದನ್ನು ಚಿತ್ರಿಸುವ ಈ ಕತೆಯು ಓದುಗರಲ್ಲಿ ಹೊಸ ತಿಳಿವನ್ನು ನೀಡುವುದು.]

ಕ್ರಿಸ್ತಿ ಟಿಕರನು ತನ್ನ ಹೆಸರಗತ್ತೆಯ ಮೇಲೆ ಕುಳಿತು ಪೇಟೆಗೆ ಬಂದಾಗ ಇಳಿಹೊತ್ತು ಆಗಿತ್ತು. ಹತ್ತಿಯ ಬೆಳೆಗೆ ಹುಲುಸಾದ ಭೂಮಿಯನ್ನು ಕಂಡು ಹಿಡಿದು ಅಲ್ಲಿ ಹೊಸದಾಗಿ ಸಾಗುವಳಿ ಪ್ರಾರಂಭಮಾಡಿದ ಪ್ರದೇಶವು ಅದು. ಈ ಹೊಸ ವಸಾಹತಿನಲ್ಲಿ ತಲೆಯೆತ್ತಿದ ಪೇಟೆಯ ಊರು. ಅಲ್ಲಿಯೆ ಟಿಕರನ ಒಡೆಯನು ಇರುತ್ತಿದ್ದನು. ದಾರಿಯುದ್ದಕ್ಕೂ ಟಿಕರನು ಸಿಳ್ಳುಹಾಕುತ್ತ ಮೆಲುದನಿಯಲ್ಲಿ ಏನೋ ಒಂದು ಹಾಡನ್ನು ಗುಣುಗುಣಿಸುತ್ತ ಇದ್ದನು. ಅಂದಿನ ಬೆಳಗಿನ ಜಾವ ವೆಲ್ಲವೂ ಮನೆಯ ಸುತ್ತಲಿನ ತಂತೀಬೇಲಿಯ ಕಂಬಗಳಿಗಾಗಿ ಗಿಡಗಳನ್ನು ಕಡಿಯುವುದರಲ್ಲಿ ಅವನಿಗೆ ಅರಿಯದೇ ಹೋಗಿತ್ತು. ಆ ಕೆಲಸವು ಮುಗಿಯುತ್ತ ಬಂದುದಕ್ಕಾಗಿ ಅವನು ಖುಷಿಯಲ್ಲಿದ್ದ. ಅವನಿಗೆ ತನ್ನ ಹೊಲದ ಮನೆಯಿಂದ ಪೇಟೆಗೆ ಬರುವುದಕ್ಕೆ ಬಿಡುವೇ ದೊರೆಯುತ್ತಿದ್ದಿಲ್ಲ. ಎಂದಾದರೂ ಇಂತಹ ಸಂಧಿಯು ದೊರಕಿದರೆ ಅದನ್ನು ಅವನೆಂದೂ ಹೋಗಗೊಡುತ್ತಿದ್ದಿಲ್ಲ. ಪೇಟೆಯೂರಿಗೆ ಬಂದೇ ಬಿಡುತ್ತಿದ್ದನು.

ಪೇಟೆಗೆ ಬಂದೊಡನೆ ಅಲ್ಲಿ ವಸಾಹತಿನ ಕೆಲಸಗಾರರಿಗಾಗಿ ಇದ್ದ

ಆತನ ಸಂಗಡಿಸರೂ ನೆರೆಹೊರೆಯವರೂ ಆದ ನಿಗ್ರೋಜನಗಳು ಅವನಿಂದ ದೂರ ವಿರುವ ಪ್ರಯತ್ನದಲ್ಲಿದ್ದ ಹಾಗೆ ಆತನಿಗೆ ಸಂದೇಹ ಬಂದಿತು. ಹತ್ತಿಯ ಹೊಲದ ನೆಲೆವೀಡಿನಲ್ಲಿ ಟಕರನು ತನ್ನ ಮಡದಿಯೊಡನೆ ಬಂದು ನಿಂತು ಸುಮಾರು ಮೂರು ತಿಂಗಳು ಆಗಿರಬಹುದು. ಟಕರನು ಎಲ್ಲರೊಡನೆಯೂ ಕಲೆತು, ಕೆಲೆದು ಎಲ್ಲರಿಗೂ ಬೇಕಾದವನಾಗಿದ್ದನು, ತನ್ನನ್ನು ಕಂಡರೆ ಆಕ್ಕರತೆಯಿಂದ ಹತ್ತಿರ ಬಂದು ಮಾತನಾಡುವವರಲ್ಲಿ ಸಂತೋಷಗೊಳ್ಳುತ್ತಿದ್ದ ತನ್ನ ಜನ ಈಗ ಮೋರೆ ತಿರುವಿ ಕೊಂಡು ಕಂಡರೂ ಕಾಣದವರಂತೆ ಜಾರುತ್ತಿರುವುದು ಆತನಿಗೆ ಸೋಜಿಗವೆನಿಸಿತು.

ಇದರ ಕಾರಣವೇನಿರಬಹುದು, ಎಂಬ ತೊಡಕು ಬಗೆಹರಿಯದಾಯ್ತು. ಆ ಮನಃಸ್ಥಿತಿಯಲ್ಲಿಯೇ ಆತನು ಅಲ್ಲಿಯ ಕೆಲಸಗಾರರ ಕಚೇರಿಯ ಕಡೆಗೆ ಮೆಲ್ಲ ಮೆಲ್ಲನೆ ಸಾಗಿದ್ದನು.

ದಾರಿಯಲ್ಲಿ ಫ್ರಾಗಿ ವಿಲರನು ಸಿಕ್ಕನು. ಆತನು ಟಕರನ ಕಣ್ಣು ತಪ್ಪಿಸಿ, ನುಸುಳುವ ಹವಣಿಕೆಯಲ್ಲಿದ್ದನು. ಆದರೆ ಅದಕ್ಕೂ ಮೊದಲೇ ಟಕರನು ಆತನನ್ನು ತೋಳತೆಕ್ಕೆಯಲ್ಲಿ ಹಿಡಿದಿರಿಸಿದನು. ಅದರಿಂದ ಫ್ರಾಗಿಯ ಆಟವೇನೂ ಸಾಗ ಪಾಯಿತು, "ಇಂದು ನಿಮ್ಮೆಲ್ಲರಿಗೆ ಆಗಿರುವುದಾದರೂ ಏನು?" ಕ್ರಿಸ್ತಿಯು ಕೇಳಿದನು. ಕ್ರಿಸ್ತಿಯು ಇರುತ್ತಿದ್ದ ಸ್ಥಳದಿಂದ ನೇರವಾಗಿ ಒಂದು ಮೈಲಿನಲ್ಲಿ ಫ್ರಾಗಿಯ ಮನೆಯಿತ್ತು. ಉಳಿದೆಲ್ಲರಿಗಿಂತಲೂ ಈತನೊಡನೆ ಕ್ರಿಸ್ತಿಯ ಸಲುಗೆ ಹೆಚ್ಚು. "ಫ್ರಾಗಿ, ನೀವೆಲ್ಲರೂ ನನ್ನ ಗಾಳಿಗೂ ನಿಲ್ಲಲು ಅಳುಕುತ್ತಿರುವ ಕಾರಣವಾದರೂ ಏನಯ್ಯಾ?" ಎಂದು ಕಳವಳದಿಂದ ಗೆಳೆಯನಿಗೆ ಕೇಳಿದನು.

ಫ್ರಾಗಿಯ ಬಾಯಿಂದ ಒಂದಕ್ಷರವೂ ಹೊರಬೀಳಲಿಲ್ಲ. ಆರು ಫೂಟು ಎತ್ತರದ ಭವ್ಯ ಶರೀರದ ಫ್ರಾಗಿಯು ಮೋರೆಯನ್ನು ಇನ್ನೊಂದು ಬದಿಗೆ ಹೊರಳಿಸಿ ಟಕರನ ಕೈಯಿಂದ ಬಿಡಿಸಿಕೊಂಡು ಥಟ್ಟನೆ ಹಾಗೆಯೆ ಹೊರಟನು.

ಟಕರನು ಮತ್ತೂ ಕುತೂಹಲದಿಂದ ಓಡಿಹೋಗಿ ಫ್ರಾಗಿಯನ್ನು ಮತ್ತೆ ಹಿಡಿದಿಟ್ಟು ಕಕ್ಕುಲತೆಯ ದನಿಯಲ್ಲಿ "ಅಣ್ಣಾ, ಫ್ರಾಗಿ! ಇಕೊ, ನೀವೆಲ್ಲ ನನ್ನೊಡನೆ ಹೀಗೆ ಅರಿಯದವರಂತೆ ವಿಚಿತ್ರ ಬಗೆಯಲ್ಲಿ ದೂರವಿರುವ ಕಾರಣವನ್ನಾದರೂ ಹೇಳುವಿಯಾ?" ಎಂದು ಕಳವಳದಿಂದ ಕೇಳಿದನು.

"ಲೀ ಕ್ರಾಸ್‌ಮನ್ನನು ನಿನ್ನನ್ನು ಕರೆಯಿಸಿದ್ದು ನಿಜವಷ್ಟೇ?" ಎಂದು ಫ್ರಾಗಿಯು ಅಂತೂ ಒಮ್ಮೆ ಬಾಯ್ಬಿಟ್ಟು ನುಡಿದನು.

"ಹಾ, ಅಹುದು; ಆತನು ಕರೆಯಿಸಿದ್ದು ನಿಜ... ...." ಕ್ರಿಸ್ತಿಯು ಮಾರು ನುಡಿದನು; "ಆತನು ಹೊಲದ ಹೋರೆಗೆ ಸಂಬಂಧಿಸಿದ್ದನ್ನೇನಾದರೂ ಹೇಳುವುದಿರ

ಬಹುದು, ಅದರಲ್ಲೇನಿದೆ? ಅದಕ್ಕೂ ನಿಮ್ಮ ಈ ಬಗೆಯ ನಡೆವಳಿಗೂ ಸಂಬಂಧ ವೇನು........?"

ಕ್ರಿಸ್ತಿಯ ಮಾತು ಇನ್ನೂ ಮುಗಿಯುವ ಮೊದಲೇ ಫ್ರಾಗಿಯು ಆತನ ಕೈ ಕೊಸರಿಕೊಂಡು ಅಲ್ಲಿಂದ ಕಾಲು ಕಿತ್ತಿದನು.

ಇನ್ನು ಸ್ವಲ್ಪವೂ ವೇಳೆಯನ್ನು ಕಳೆಯದೆ ಕ್ರಿಸ್ತಿಯು ವಸಾಹತಿನ ಕೆಲಸಗಾರರ ಆಫೀಸಿನತ್ತ ಹೊರಟನು. ಆತನಿಗೆ ಇದೇ ದುಗುಡ, ಇದೆಲ್ಲದರ ಅರ್ಥವೇನು?— ಎಂಬ ಚಿಂತೆ.

ಅವನು ಆಫೀಸಿನಲ್ಲಿ ಪ್ರವೇಶಿಸಿದನು. ಅಲ್ಲಿಯೇ ಕಾರಕೂನ ಹೆಂಡ್ರಿಕ್ಸನ್ ಮತ್ತು ಲೀ ಕ್ಲಾಸ್‌ಮನ್ನನ ತಮ್ಮ ಮಾರ್ಗನ್ ಇವರಿಬ್ಬರೂ ಕಿಡಕಿಯಲ್ಲಿ ಕಾಲು ಚಾಚಿ ಹೊರಳಾಡುತ್ತ ಬಿದ್ದುಕೊಂಡುದು ಕಂಡು ಬಂತು, ಕ್ರಿಸ್ತಿಯನ್ನು ಕಂಡೊಡನೆ ಹೆಂಡ್ರಿಕ್ಸನ್ನನು ಲಗುಬಗೆಯಿಂದ ಎದ್ದ. ಆಫೀಸಿನ ಒಳಕೋಣೆಯ ಬಾಗಿಲು ತೆರೆದು ಕಾಣೆಯಾದ. ಮಾರ್ಗನ್ನನು ಕ್ರಿಸ್ತಿಯತ್ತ ಕಠೋರ ದೃಷ್ಟಿಯಿಂದ ಒಮ್ಮೆ ನೋಡಿದ.

"ಇತ್ತ ಒಳಗೆ ಬಾರೋ, ನೀನು" ಹೆಂಡ್ರಿಕ್ಸನ್ನನು ಅಷ್ಟರಲ್ಲಿ ಬಾಗಿಲ ತೆರೆದು ಕ್ರಿಸ್ತಿಯನ್ನು ಕರೆದನು. ಕ್ರಿಸ್ತಿಯು ಆ ಕೋಣೆಯತ್ತ ಹೊರಳಿ ನೋಡುವಷ್ಟರಲ್ಲಿ ಅವನ ಹೊಲದ ಒಡೆಯನಾದ ಲೀ ಕ್ಲಾಸ್‌ಮನ್ನನು ಹೊರಗೆ ಬಾಗಿಲಲ್ಲೇ ನಿಂತುದು ಕಂಡುಬಂದಿತು.

"ಬಂದೆ ಸ್ವಾಮೀ" ಕ್ರಿಸ್ತಿಯು ಉತ್ತರವಿತ್ತನು.

ಲೀ ಕ್ಲಾಸಮನ್ನನು ಎದ್ದು ಕಾಣುವ ಬಣ್ಣದ ಉಡುಪು ಹಾಕಿದ್ದನು. ಕುದುರೆಯ ಮೇಲೆ ಸವಾರಿ ಮಾಡುವಾಗ ಹಾಕಿಕೊಳ್ಳುವ ಕಂದೀಬಣ್ಣದ ಬ್ರೀಚೆಸ್ ತೊಟ್ಟುಕೊಂಡಿದ್ದ. ಮೈಯಲ್ಲಿ ಹದಮಾಡಿದ ಚರ್ಮದ ಭದ್ರವಾದ ಜಾಕೀಟು ಇತ್ತು. ಲಕಲಕ ಹೊಳೆಯುತ್ತಿರುವ ಪಂಪು ಶೂ (ಜೋಡು) ಮೊಳಕಾಲ ವರೆಗೆ ಕಾಲನ್ನು ರಕ್ಷಣ ಮಾಡುತ್ತಿದ್ದುವು. ಕ್ರಿಸ್ತಿಯು ಆ ಕೋಣೆಯಲ್ಲಿ ಬರುವಾಗ ಲೀಯು ಸ್ವಲ್ಪ ಬದಿಗಾದ; ಕ್ರಿಸ್ತಿಯು ಒಳಸೇರುತ್ತಲೇ ಆತನು ಹೊರಗಿನಿಂದ ಕದ ಮುಚ್ಚಿಕೊಂಡನು ಕ್ರಿಸ್ತಿಯು ಒಳಗೆ ಬಾಗಿಲ ಹತ್ತಿರದಲ್ಲಿಯೇ ನಿಂತು ಒಡೆಯನು ಒಳಗೆ ಬರುವ ದಾರಿಯನ್ನು ನೋಡುತ್ತಿದ್ದ. ತನ್ನನ್ನು ಏಕೆ ಕರೆಯಿಸಿರಬಹುದೆಂಬ ಕಾರಣವೇ ಹೊಳೆಯದೆ ದಿಗಿಲುಗೊಂಡಿದ್ದ.

ಲೀ ಕ್ಲಾಸ್‌ಮನ್ನನ ಹತ್ತಿಯ ಹೊಲದಲ್ಲಿ ಕಾಯಕಷ್ಟ ಮಾಡುವುದಕ್ಕಾಗಿ ಕ್ರಿಸ್ತಿಯು ಬಂದು ಮೂರು ತಿಂಗಳೂ ಆಗಿರಲಿಲ್ಲ, ಅವನು ಜಾರ್ಜಿಯಾ ಪ್ರಾಂತದಲ್ಲಿ ಬಂದು ನೆಲಿಸಿದ್ದು ಇದೇ ಮೊದಲ ಬಾರಿ. ಆದರೆ ಆತನಿಗೆ ತನ್ನ ಅಲ್ಬಾಮಾ ಪ್ರಾಂತಕ್ಕಿಂತಲೂ ಇದು ಹೆಚ್ಚು ಸೊಗಸಾದುದೆಂದು ಎನಿಸಿತ್ತು. ಇಲ್ಲಿಯ ಹತ್ತಿಯಂತಹ ಹತ್ತಿಯ ಪಯರಿನ ಹುಚ್ಚು ಬೆಳೆಯನ್ನು ಜೀರಿಡೆಗೆ ಎಲ್ಲಿಯೂ ಕಂಡಿರ

ಲಿಲ್ಲ. ಜಾರ್ಜಿಯಾಕ್ಕೆ ಬಂದುದಕ್ಕೆ ಅವನಿಗೆ ಹಿಡಿಸಲಾರದಷ್ಟು ಹಿಗ್ಗು, ಕ್ರಿಸ್ತಿಗೆ ಕೇವಲ ತನ್ನ ಹೊಟ್ಟೆ ಹೊರಕೊಂಡು ಇರುವಷ್ಟರಿಂದಲೇ ತೃಪ್ತಿಯಿಲ್ಲ. ಏನಾದರೂ ಹೆಚ್ಚಿನ ಬದುಕು ಮಾಡದೆ ಬಾಳಿನಲ್ಲಿ ಸುಖವಿಲ್ಲ, ಎಂದು ಆತನಿಗೆ ಎನಿಸುತ್ತಿತ್ತು. ತನ್ನ ಜೊತೆಯವರಿಗಿಂತಲೂ ಏನಾದರೂ ಬಾಳಿನಲ್ಲಿ ವಿಶೇಷ ಮಾಡಿ ತೋರಿಸಬೇಕು; ಹಲವರು ಹೌದೆನ್ನುವಂತೆ ಬದುಕಬೇಕು, ಎಂದು ಆತನ ಹಂಬಲ. ಆತನಿಗೆ ಇನ್ನುಳಿದವರನ್ನು ಮೀರಿಸಿ ಮುನ್ನಡೆಯಬೇಕೆಂಬ ಮಹತ್ವಾಕಾಂಕ್ಷೆ.

ಲೀ ಕ್ರಾಸ್‌ಮನ್ನನು ಇನ್ನೂ ಒಳಗೆ ಬಂದಿದ್ದಿಲ್ಲ ಅದರಿಂದ ಕ್ರಿಸ್ತಿಯು ಅಲ್ಲಿದ್ದ ಕುರ್ಚಿಗಳಲ್ಲಿ ಒಂದರ ಮೇಲೆ ವಿಶ್ರಮಿಸಿದ. ಆತನು ಕುರ್ಚಿಗೆ ತಾಗುತ್ತಾನೋ ಇಲ್ಲವೋ ಅಷ್ಟರಲ್ಲಿ 'ಧಡಲ್' ಎಂದು ಬಾಗಿಲು ಅಪ್ಪಳಿಸಿ ಲೀಯು ಒಳಗೆ ಬಂದನು. ಕ್ರಿಸ್ತಿಯು ಕೂಡಲೆ ಬೆಪ್ಪನಂತೆ ಎದ್ದುನಿಂತ.

"ನಮಸ್ಕಾರ ಸ್ವಾಮೀ!" ಎಂದು ನಗುಮೊಗದಿಂದ ಕ್ರಿಸ್ತಿಯು ತನ್ನ ಮಾತನ್ನು ಮುಂದುವರಿಸಿದನು. "ಸ್ವಾಮಿ, ನಾನು ಬರುವಾಗ ತಮ್ಮ ಬೆಳೆಯನ್ನೆಲ್ಲ ನೋಡಿಕೊಂಡು ಬಂದೆ. ಒಡೆಯಾ, ನನಗೆ ಇನ್ನೊಂದು ಹೆಸರಗತ್ತೆ, ಒಂದು ಕಬ್ಬಿಣ ನೇಗಿಲು ಕೊಡಿಸಿದರೆ ಈಗಿನ ಇಮ್ಮಡಿ ಬೆಳೆಯನ್ನು ಮಾಡಿ ತೋರಿಸುವೆನು. ಕಬ್ಬಿಣ ನೇಗಿಲಿನ ಮಹತ್ವವೇ ಹಾಗಿದೆ: ಒಮ್ಮೆ ಅದರಿಂದ ನೇಗಿಲು ಹೊಡೆದರೆ ಬಳಿಕ ಅತ್ತ ನೋಡುವದೇ ಬೇಡ. ಭೂಮಿ ಹಸನಾಗಿ ಅಂಗೈ ಹಾಗೆ ಆಗಿಬಿಡುವುದು. ಎಲ್ಲಿ ಹುಡುಕಿದರೂ ಒಂದು ಹರಳು ದೊರೆಯಲಿಕ್ಕಿಲ್ಲ. ಅಥವಾ ಕೊರಕಲು ಸರಕಲು ಉಳಿಯಲಿಕ್ಕಿಲ್ಲ. ತಾವು ನನಗೆ ಹೆಸರಗತ್ತೆ ಮತ್ತು ಆ ರೆಂಟೆ ಒಮ್ಮೆ ಕೊಟ್ಟಾದರೂ ನೋಡಿ. ನಾನು ಇಬ್ಬರು ರೈತರಿಗಿಂತಲೂ ಒಬ್ಬನೇ ಹೆಚ್ಚು ಬೆಳೆಮಾಡಿ ತೋರಿಸುವೆನು. ನನ್ನ ಕರಾಮತನ್ನಾದರೂ ನೋಡಿರಿ."

ಕ್ರಿಸ್ತಿಯು ಆತ್ಮ-ವಿಶ್ವಾಸದ ಉಬ್ಬಿನಲ್ಲಿ ಇದೆಲ್ಲವನ್ನೂ ಆಡುತ್ತಿರುವಾಗ ಲೀಯ ಮೊಗದಲ್ಲಿ ಯಾವ ಬದಲಾವಣೆಯೂ ಕಂಡುಬರಲಿಲ್ಲ. ಸುಮ್ಮನೆ ಅದನ್ನು ಕೇಳುತ್ತಿದ್ದನು. ಕ್ರಿಸ್ತಿಯ ಮಾತು ಮುಗಿದೊಡನೆ ಅವನು ಮತ್ತೆ ಧಡಲ್ಲನೆ ಕದವನ್ನಿಕ್ಕಿಕೊಂಡು ಒಳಗೆ ಬಂದನು.

"ನಿನಗೆ ನಾನು ಕರೆಕಳಿಸಿರಲಿಲ್ಲವೇ? ಅದು ನಿನಗೆ ಗೊತ್ತಾಗಿತ್ತಷ್ಟೇ?" ಎಂದು ಲೀಯು ಕೇಳಿದನು.

"ಅಹುದು ನಿಜ ಸ್ವಾಮಿ" ಕ್ರಿಸ್ತಿಯು ನಿರಾಶೆಯ ದನಿಯಲ್ಲಿ ಎಂದನು. "ಹೌದ್ದು, ತಾವು ನನ್ನನ್ನು ಕರೆಕಳುಹಿದ್ದಿರಿ!"

"ಹಾಗಾದರೆ ನಿನ್ನ ಈ ಕರೆಮುಸುಡೆ ಬಂದು ಮಾಡು. ನಾನು ಕೇಳದೆ ಒಂದಕ್ಕರ ನುಡಿದರೂ ಎಚ್ಚರ!"

' ಆಗಲಿ ಸ್ವಾಮೀ ' ಕ್ರಿಸ್ತಿಯು ತಲೆವಾಗಿದನು. ಬಳಿಕ ಸ್ವಲ್ಪ ಹಿಂದೆ ಸರಿದು ಗೋಡೆಗೆ ಆತು ನಿಂತನು ಲೀ ಕ್ರಾಸಮನ್ನನು ಒಂದು ಕುರ್ಚಿಯಲ್ಲಿ ಕುಳಿತನು. ಕ್ರಿಸ್ತಿಯನ್ನು ದಿಟ್ಟಿಸಿ ನೋಡಿದನು.

" ಹೊರಗಿನಿಂದ ಬಂದು ಸೊಕ್ಕಿದ ಕೆಲವೇ ನಿಗ್ರೋಗಳಲ್ಲಿ ನೀನೂ ಒಬ್ಬನಾಗಿರುವೆ ಅಲ್ಲವೇ ? " ಲೀಯು ಮತ್ತೆ ಕೇಳಿದನು. " ನೀನು ಎಲ್ಲಿಂದ ಬಂದೆ ? ನೀನು ಜಾರ್ಜಿಯಾದ ನಿಗ್ರೋನಲ್ಲ. ನಿಜವೇ ? "

" ನಿಜ, ಒಡೆಯರೇ " ಕ್ರಿಸ್ತಿಯು ತಲೆವಾಗಿ ಹೇಳಿದನು. " ನಾನು ಹುಟ್ಟಿದ್ದು ಅಲ್ಬಾಮಾದಲ್ಲಿ. ನಾನು ಅಲ್ಲಿಯೇ ಬೆಳೆದು ದೊಡ್ಡವನಾದೆ. "

" ನಿಮಗೆ ಇದಕ್ಕಿಂತಲೂ ಒಳ್ಳೆಯ ಕೆಲಸ ಸಿಗುವುದಿಲ್ಲವೇ ಅಲ್ಲಿ ? "

" ಇವೆ ಸ್ವಾಮೀ. "

" ಹಾಗಾದರೆ ನೀವು ಅಷ್ಟು ದೂರದಿಂದ ಇಲ್ಲಿ ಬಂದು ಒದ್ದಾಟ ನಡಿಸುವುದೇತಕ್ಕೆ ? ಸೊಕ್ಕಿಗೆ ಬಂದಿರುವಿರಿ ನೀವು. "

" ನನಗೆ ಗೊತ್ತಿಲ್ಲ ಸ್ವಾಮೀ " ಕ್ರಿಸ್ತಿಯು ಏನೆಂದು ಉತ್ತರ ಕೊಡಲು ತಿಳಿಯದೇ ಮಾತನಾಡಿದ.

ಕ್ರಿಸ್ತಿಯು ತನ್ನ ಮುಖವನ್ನೊರೆಯಿಸಿಕೊಳ್ಳುತ್ತ, ಒಡೆಯನು ಹೀಗೆ ರೇಗಿದುದಕ್ಕೆ ತನ್ನಿಂದ ಆದ ಅಪರಾಧವಾದರೂ ಏನೆಂಬುದೇ ತಿಳಿಯದಾಗಿ ಇನ್ನಿಷ್ಟು ಗೊಂದಲದಲ್ಲಿ ಬಿದ್ದನು. ತನ್ನ ನಿಗ್ರೋ ಜನಗಳು ತನ್ನನ್ನು ಕಾಣುತ್ತಲೇ ದೂರ ಸಿಡಿದು ಹೋಗುತ್ತಿರುವುದರ ಕಾರಣವು ಅವನಿಗೆ ಒಮ್ಮೆಲೇ ಹೊಳೆಯಿತು. ಯಜಮಾನನು ತನ್ನನ್ನು ಕರೆಕಳುಹಿದುದರ ಸುದ್ದಿಯು ಅಲ್ಲೆಲ್ಲ ಮೊದಲೇ ಹಬ್ಬಿತ್ತು. ಲೀಯು ಕರೆಕಳುಹಿಸುವುದೆಂದರೆ ಆ ಆಸಾಮಿಯ ಅವತಾರವು ಸಮಾಪ್ತವಾದಂತೆಯೇ ಎಂದು ಎಲ್ಲರೂ ಬಲ್ಲರು. ಆದುದರಿಂದ ಹೀಗೆ ಒಡೆಯನ ಅವಕೃಪೆಗೆ ಒಳಗಾದ ವ್ಯಕ್ತಿಯೊಡನೆ ಮಾತನಾಡುವಾಗ ಬೇರೆಯವರಾರೂ ನೋಡಬಾರದೆಂದು ಎಲ್ಲರಿಗೂ ಎನಿಸುತ್ತಿತ್ತು. ಆದುದರಿಂದ ಪ್ರತಿಯೊಬ್ಬರೂ ಕಣ್ಣು ತಪ್ಪಿಸಿ ಓಡುವ ಹವಣಿಕೆಯಲ್ಲಿದ್ದರು.

" ನಿನ್ನಲ್ಲಿ ರೇಡಿಯೋ ಉಂಟಲ್ಲವೇ ? "

" ಉಂಟು ಸ್ವಾಮೀ "

" ಅದನ್ನು ಹೇಗೆ ಕೊಂಡೆ ? "

" ಕಂತದಿಂದ ಕೊಂಡೆ ಸ್ವಾಮೀ. "

" ಇಷ್ಟು ಹಣ ಎಲ್ಲಿಂದ ಬಂತು ? "

"ನನ್ನಲ್ಲಿ ಸ್ವಲ್ಪ ಇತ್ತು, ಮತ್ತು ನನ್ನ ಹೆಂಡತಿ ಕೋಳೀ ಸಾಕಿ ಸ್ವಲ್ಪ ಹಣ ಕೂಡಿ ಹಾಕಿದ್ದಳು."

"ಕೆಲಸಗಾರರ ಸಲುವಾಗಿ ಇರುವ ನನ್ನ ಸ್ಟೋರಿನಲ್ಲಿ ಏಕೆ ಕೊಳ್ಳಲಿಲ್ಲ ?"

"ಹೊರಗೆ ನನಗೆ ಸ್ವಲ್ಪ ಅಗ್ಗದಲ್ಲಿ ದೊರೆಯಿತು."

"ನಮ್ಮ ಹೊಲದಲ್ಲಿ ಕೆಲಸ ಮಾಡುವವರು, ತಮ್ಮ ಎಲ್ಲ ವಸ್ತುಗಳನ್ನು ನಮ್ಮ ಸ್ಟೋರಿನಲ್ಲಿಯೇ ಕೊಳ್ಳಬೇಕೆಂಬ ನಿಯಮವು ನಿನಗೆ ಗೊತ್ತಿಲ್ಲವೇ ?" ಎಂದು ಲೀಯು ಕೇಳಿದನು.

"ಗೊತ್ತಿದೆ! ಆದರೆ ಸ್ವಾಮಿ, ಸ್ಟೋರಿನಲ್ಲಿ ಉದ್ರಿ ಇಡಬಾರದೆಂದು ನನ್ನ ಅಪೇಕ್ಷೆ"

ಕ್ರಿಸ್ತಿಯು ತನ್ನ ಒಡೆಯನನ್ನು ಒಲಿಸಿಕೊಳ್ಳಬೇಕೆಂಬ ಅಪೇಕ್ಷೆಯಿಂದ ತನ್ನ ಮನಸ್ಸು ಬಿಚ್ಚಿ ತನ್ನ ಸದುದ್ದೇಶವನ್ನು ಹೇಳತೊಡಗಿದನು. "ವರ್ಷದ ಕೊನೆಗೆ ನನ್ನ ಹೆಸರಿನ ಮೇಲೆ ಹೊರಡುವ ಲೆಕ್ಕಾಚಾರದಲ್ಲಿ ನಾನು ಉಳಿದವರಿಗಿಂತಲೂ ಹೆಚ್ಚಿನ ಪರಿಶ್ರಮಪಟ್ಟಿರುವದನ್ನು ಸಿದ್ಧಪಡಿಸಬೇಕು ಉಳಿದವರಿಗಿಂತ ಮಿಗಿಲಾದವನೆಂದು ಎನಿಸಿಕೊಳ್ಳಬೇಕು........ ಎಂಬ ಅಪೇಕ್ಷೆ ನನ್ನದು."

ಕ್ರಾಸಮನ್ನನು ಏನೊಂದೂ ನುಡಿಯಲೇ ಇಲ್ಲ. ತನ್ನ ಕುರ್ಚಿಯಲ್ಲಿಯೇ ಕುಳಿತು ಕಾಲುಗಳನ್ನು ಒಂದರಮೇಲೊಂದು ಚೆಲ್ಲಿದ. ತನ್ನ ಜೇಬಿನೊಳಗಿಂದ ಮಾಟಾದ ಚಾಕು ತೆಗೆದು ಉಗುರುಗಳನ್ನು ಸರಿಪಡಿಸಕೊಳ್ಳಲಾರಂಭಿಸಿದ.

ಸ್ವಲ್ಪ ಕಾಲ ಕೋಣೆಯಲ್ಲೆಲ್ಲ ಮೌನವೇ ಆವರಿಸಿತ್ತು. ಕ್ರಿಸ್ತಿಯು ಗೋಡೆಗೆ ಆತುಕೊಂಡು ನಿಂತಿದ್ದ.

"ಗೋಡೆಗೆ ಆನಬೇಡ, ಸರಿಯಾಗಿ ನಿಲ್ಲು !" ಲೀಯು ಅವನತ್ತ ನೋಡಿ ಗರ್ಜಿಸಿದನು.

"ಆಗಲಿ ಸ್ವಾಮಿ" ಕ್ರಿಸ್ತಿಯು ಸರಿಯಾಗಿ ನಿಂತುಕೊಂಡ.

"ನಿನ್ನ ಮನೆಯ ಸುತ್ತಲೂ ಹೊಸಬೇಲಿಯನ್ನು ಹಾಕಲಿಕ್ಕೆ ನನ್ನ ಕೆಲವು ಗಿಡಗಳನ್ನು ಕಡಿದಿರುವೆ, ನಿಜವಷ್ಟೇ ?"

"ನಿಜ ಸ್ವಾಮಿ"

"ನನ್ನನ್ನೇಕೆ ಕೇಳಲಿಲ್ಲ ? ನನ್ನ ಅಪ್ಪಣೆಯ ಹೊರತು ಗಿಡಕ್ಕೆ ಹೇಗೆ ಕೈ ಹಚ್ಚಿದೆ ?"

"ಮನೆಯ ಸುತ್ತಲೂ ಬೇಲಿಯ ಕಂಬಗಳು ಕೊಳೆತು ಬಿದ್ದಿದ್ದವು. ಅವನ್ನು ಬೇಗನೆ ಸರಿಪಡಿಸುವುದು ಅವಶ್ಯವೆಂದು ನನಗೆ ತೋರಿತು. ಅಲ್ಲದೆ ನಾನಿರುವ

ಮನೆ ತಮ್ಮದೇ! ಆದಕಾರಣ ಅದನ್ನು ಸರಿಯಾಗಿರಿಸುವುದರಲ್ಲಿ ಏನೂ ತಪ್ಪೆನಿಸಲಿಲ್ಲ."

"ಎಂದರೆ, ನೀನು ನನ್ನನ್ನು ಯಾರೆಂದು ಬಗೆದಿರುವೆ?" ಲೀಯು ಕವಕ್ಕನೆ ಹರಿಹಾಯ್ದನು. "ಆ ಎಲ್ಲ ಹೊಲ ಮತ್ತು ಮನೆಯ ಮೇಲೆ ಸರ್ವಾಧಿಕಾರ ನಿನ್ನದೇ ಎಂದು ತಿಳಿದಿರುವಿಯಾ?........ ಕರಿಮುಸುಡಿಯ ನೀವು ಗೌರಕಾಯರಾದ ನಮ್ಮನ್ನು ಸರಿಗಟ್ಟಬೇಕೆಂದಿದ್ದೀರಾ?"

"ಇಲ್ಲ ಸ್ವಾಮೀ." ಕ್ರಿಸ್ತಿಯು ನಡುವೇ ಬಾಯಿ ಹಾಕಿ ದೈನ್ಯದಿಂದ ನುಡಿದ. "ಅಂತಹ ಕಲ್ಪನೆಯೇ ನನಗೆ ಹೋಂಕಿಲ್ಲ; ನಾನು ಹಾಗೆ ಎಂದೂ ನಡೆದುಕೊಂಡಿಲ್ಲ; ಒಳ್ಳೆಯದೆಂದು ಎನಿಸಿದ ಮಾತನ್ನು ತಟ್ಟನೆ ಮಾಡಿಬಿಡುವ ಖೋಡಿ ಸ್ವಭಾವವು ನನಗೆ ಇದೆ. ಅರಗಳಿಗೆ ಸುಮ್ಮನೆ ಕೂಡುವದಕ್ಕೆ—ನನ್ನಿಂದಾಗುವದಿಲ್ಲ. ಮನೆಯು ತಂತಿಯ ಬೇಲೀ ಬಿಗಿ; ಕಟ್ಟಿಗೆ ಒಡೆ; ಅಥವಾ ಹತ್ತೀ ಬಿಡಿಸು, ಹೀಗೆ ಒಂದಿಲ್ಲೊಂದು ಕೆಲಸದಲ್ಲಿ ತೊಡಗಿರದೆ ಮನಸ್ಸಿಗೆ ಸೊಗಸುವುದಿಲ್ಲ.......ಅದರಿಂದ......."

"ಆದರೆ ನಿನ್ನಂತಹ ಸೊಕ್ಕಿಗೆ ಬಂದ ನಿಗ್ರೋಗಳಿಗೆ ಬುದ್ಧಿಗಲಿಸಿ ಅವರನ್ನು ಇಲ್ಲಿ ನಾವು ಹೇಗೆ ದಾರಿಗೆ ತರುತ್ತೇವೆಂಬುದು ನಿನಗೆ ಗೊತ್ತಿದೆಯೋ?"

"ಇಲ್ಲ ಸ್ವಾಮೀ." ಎಂಬ ಅರ್ಥದಲ್ಲಿ ತನ್ನ ತಲೆಯನ್ನು ಅಲ್ಲಾಡಿಸಿದ.

"ಒಡೆಯರ ಅಧಿಕಾರಕ್ಷೇತ್ರದಲ್ಲಿ ಅತಿಕ್ರಮಣ ಮಾಡದೆ ತನ್ನ ಮೆಟ್ಟನ್ನು ಅರಿತು ಅಲ್ಲಿಯೇ ಇರಬೇಕೆಂಬುದನ್ನು ಕಲಿಸುತ್ತೇವೆ; ಗೊತ್ತಾಯಿತೇ?" ಎಂದು ಗಡಸು ದನಿಯಲ್ಲಿ ಹೇಳುತ್ತ ಲೀಯು ಎದ್ದು ಕೋಣೆಯೊಳಗಿನ ಸಣ್ಣ ಕಪಾಟಿನಲ್ಲಿ ಕೈಹಾಕಿ ಒಂದು ಬಾರಕೋಲನ್ನು ತಂದ; ಅದಕ್ಕೆ ಮೊನೆಯಾದ ಹಲವು ಮೊಳೆಗಳನ್ನು ಅಲ್ಲಲ್ಲಿ ಸೇರಿಸಿದ್ದು ಕಾಣುತ್ತಿತ್ತು. ಲೀಯು ಆ ಬಾರಕೋಲಿನಿಂದ ತನ್ನ ಬೂಟುಗಳ ಮೇಲೆ ಸಪ್ಪಳ ಮಾಡುತ್ತ ಕೋಣೆಯ ಮಧ್ಯದಲ್ಲಿ ನಿಂತು.

"ನನ್ನ ಹೊಲದಲ್ಲಿ ಕೋಳಿಗಳನ್ನು ಸಾಕುವದಕ್ಕೆ ನಿನ್ನ ಹೆಂಡತಿಗೆ ಪರವಾನಿಗೆ ಕೊಟ್ಟವರಾರು?"

"ನಾನು ಯಾರನ್ನೂ ಕೇಳಿರಲಿಲ್ಲ ಸ್ವಾಮೀ" ಕ್ರಿಸ್ತಿಯು ಅಂದನು. "ಆದರೆ ತಾವು ಇಲ್ಲ ಎನ್ನಲಿಕ್ಕಿಲ್ಲ ಎಂದು ನಾನು ಎಣಿಸಿದ್ದೆ. ಮನೆಯ ಸುತ್ತಲೂ ಬೇಕಾದಷ್ಟು ಬಯಲು ಇತ್ತು. ನಾನಲ್ಲಿ ಒಂದು ಕೋಳಿಯ ಮನೆಯನ್ನು ನಿಲ್ಲಿಸಿದೆ."

"ಎದುರುತ್ತರವನ್ನು ಕೊಡುವೆಯಾ? ಬಾಯಿ ಮುಚ್ಚು ನಿಗಾರ್."

'ಆಗಲಿ, ಒಡೆಯಾ........"

" ವಸಾಹತಿನೊಳಗಿನ ಬೆಳೆಗಳನ್ನು ಹಾಳುಮಾಡುತ್ತ ಅಡ್ಡಾಡುವ ಕೋಳಿಗಳು ನಮಗೆ ಬೇಡ. "

" ಹಾಗೆ ಆಗಲಿ, ಸ್ವಾಮೀ. "

" ಹೊ, ನಿನ್ನಲ್ಲಿ ರೇಡಿಯೊ ಕೊಳ್ಳುವಷ್ಟು ಹಣ ಎಲ್ಲಿಂದ ಬಂದಿತು ? "

" ಹೊಲದಲ್ಲಿ ಮೊಲಗಳ ಹಾವಳಿಯೂ ಉಂಟು. ಅವುಗಳಲ್ಲಿ ಕೆಲವನ್ನು ನಾನು ಹಿಡಿದುಹಾಕಿದೆ; ಅವುಗಳ ತೊಗಲು ಮಾರಿ ಕೆಲ ಹಣ . .... "

" ನನ್ನ ಹೊಲದೊಳಗಿನ ಒಂದು ಮೊಲವನ್ನು ಕೂಡ ಯಾರಾದರೂ ಬೇಟೆಯಾಡಿದರೆ, ಗೊತ್ತಿರಲಿ; ಚಿಮ್ಮುಟ ಬೆಳಗುವೆನು " ಹೀಗೆ ಹೇಳುತ್ತ ಆ ಚಾಬೂಕನ್ನು ಎತ್ತಿ ತನ್ನ ಬೂಟುಗಳ ಮೇಲೆ ಹೊಡೆದು ಚಟ್ಟೆಂದು ಸಪ್ಪಳ ಮಾಡಿದನು.

" ನಮ್ಮ ಸ್ಟೋರಿನಲ್ಲಿ ನಿನ್ನ ಹೆಸರಿನಲ್ಲಿ ಸ್ವಲ್ಪ ಉದ್ದರಿಯೂ ಹೇಗೆ ಇಲ್ಲ? ಅಲ್ಲಿ ನೀನು ಕಾಸಿನಷ್ಟು ಖರೀದಿ ಮಾಡುವುದಿಲ್ಲವೆಂದು ತೋರುತ್ತದೆ! " ಲೀಯು ಆತನನ್ನು ಬೆದರಿಸುವ ದನಿಯಲ್ಲಿ ಎಂದನು.

" ನನಗೆ ಉದ್ದರಿ ಇಡುವುದು ಸೇರುವುದಿಲ್ಲ ! " ಕ್ರಿಸ್ತಿಯು ಮರುನುಡಿದನು. "ವರ್ಷದ ಕೊನೆಗೆ ನನಗೆ ಉಳಿದವರಿಗಿಂತ ಏನಾದರೂ ಮಾಡಿ ತೋರಿಸಬೇಕಾಗಿದೆ. ಸುಧಾರಿಸಿದವನಾಗಬೇಕಾಗಿದೆ. "

" ಆದರೆ ನೀನು ಸಾಲವಿಲ್ಲದ ಸ್ವತಂತ್ರ ಮನುಷ್ಯನು ಆಗಬೇಕೊ ಬೇಡವೊ ಎಂಬುದನ್ನು ನಿರ್ಧರಿಸುವವನು ನಾನು! ...... .ನೀನಲ್ಲ ತಿಳಿಯಿತೆ, ತಿಳಿಗೇಡಿ! " ಲೀಯು ನುಡಿದನು.

ಬಳಿಕ ಆ ಕೋಣೆಯೊಳಗಿನ ಮೂಲೆಯತ್ತ ಬೆರಳುಮಾಡಿ ಲೀಯು ಅಂದನು.

" ಮೈಯೊಳಗಿನ ಶರ್ಟು ಮತ್ತು ಪ್ಯಾಂಟು ತೆಗೆ; ಅಲ್ಲಿ ಬೆನ್ನು ಮೇಲೆ ಮಾಡಿ ಮಲಗು. ನಡೆ ಹೋಗು; ತಡಮಾಡಿಸಬೇಡ. "

" ತಾವು ನನಗೆ ಏನು ಮಾಡಬೇಕೆಂದಿರುವಿರಿ ಬುದ್ಧಿ ? "

" ಅದು ನಿನಗೆ ಇದೀಗ ತಿಳಿಯುವುದು " ಲೀಯು ಬಿರುಸು ದನಿಯಲ್ಲಿಯೇ ಹೇಳಿದನು. " ನಡೆ. ಬಟ್ಟೆ ತೆಗೆದು, ಹೇಳಿದಂತೆ ಬೀಳು. "

" ತಮಗೆ ನಾನು ಹೀಗೆ ಹೊಡೆಯಗೊಡಲಾರೆ, ಸ್ವಾಮಿ ! ನಾನು ಏಟು

"ಕರಿಯ ಕೋತಿಯೇ........" ಲೀಯ ಪಿತ್ತವು ತಲೆಗೇರಿತು. ಬೈಗಳ ಮಳೆ ಸುರಿಯಿತು. ಆತನ ಸಿಟ್ಟಿನ ಆವೇಗವು ಹೆಚ್ಚಿದಂತೆ ಮುಖದಲ್ಲಿ ಕೆಂಪು ನೀಲಿ ಬಣ್ಣದ ಛಾಯೆ ಕಾಣತೊಡಗಿತು.

ಲೀಯು ಮೊಳೆಗಳುಳ್ಳ ಆ ಭಾರವಾದ ಬಾರಕೋಲಿನಿಂದ ಒಂದು ಏಟು ಕೊಟ್ಟ. ಎರಡನೆಯ ಏಟು ಹಾಕಲು ಲೀಯು ಆ ಚಬಕವನ್ನು ಎತ್ತುತ್ತಲೇ ಕ್ರಿಸ್ತಿಯು ಅದರ ತುದಿಯನ್ನು ಗಟ್ಟಿಯಾಗಿ ಹಿಡಿದನು ಲೀಯ ಕಣ್ಣು ಕೆಂಡ ವನ್ನು ಕಾರುತ್ತಿದ್ದುವು. ಬಾರುಕೋಲನ್ನು ಬಿಡಿಸಿಕೊಳ್ಳುವದಕ್ಕೆ ಜಗ್ಗಾಟ ನಡಿಸಿ ದನು.

" ನಾನು ಮಾಡಬಾರದ್ದೇನೂ ಮಾಡಿಲ್ಲ, ಸ್ವಾಮೀ........" ಕ್ರಿಸ್ತಿಯು ಅನುನಯದ ಸ್ವರದಲ್ಲಿ ಬಿನ್ನವಿಸಿದನು. "ಕೆಲವು ಮೊಲಗಳನ್ನು ಹಿಡಿದೆ; ಹೊಲ ದಲ್ಲಿ ನಾಲ್ಕು ಕೋಳಿಗಳನ್ನು ಸಾಕಿದೆ; ಇದರಲ್ಲಿ ಒಡೆಯರಿಗೆ ನಾನು ಮಾಡಿದ ಕೇಡು ಏನೂ ಇಲ್ಲ. ನಾನು ಬೇಲಿಯನ್ನು ಸರಿಪಡಿಸಿದೆ. ಆ ಮನೆ ತಮ್ಮದೇ ಆಗಿದೆ; ತಮ್ಮ ಮನೆಯನ್ನು ಅಚ್ಚುಕಟ್ಟಾಗಿ ಇಟ್ಟದಕ್ಕೆ ತಾವು ನನಗೆ ಸೈ ಎನ್ನ ಬಹುದೆಂದು ಎಣಿಸಿದ್ದೆ."

" ಮೊದಲು ಮುಸುಡಿ ಮುಚ್ಚು, ಬಾಯಿಬಡಕನೇ! ನಾನು ಹೇಳಿದಂತೆ ಅಲ್ಲಿ ನೆಲದಮೇಲೆ ಬಿದ್ದುಕೋ ಮೊದಲು, ನೋಡುವಾ." ಲೀಯು ಮತ್ತೆ ರೇಗಿ ನುಡಿದನು. " ಈ ಬಾರಕೋಲು ಬಿಡು ಮೊದಲು, ಬಿಡುವಿಯೋ ಇಲ್ಲವೋ........"

ಆದರೆ ಕ್ರಿಸ್ತಿಯು ಬಾರಕೋಲನ್ನು ಬಿಡಲಿಲ್ಲ. ಲೀಯು ಅದನ್ನು ಕಸಿದು ಕೊಂಡಾನೆಂದು ಇನ್ನಷ್ಟು ಬಿಗಿಯಾಗಿ ಹಿಡಿದನು. ಲೀಯ ರೊಚ್ಚು ಮಿತಿಮೀರಿತು. ಕೋಪೋದ್ರೇಕದಿಂದ ಅವನ ದೇಹವೆಲ್ಲ ತತ್ತರಿಸುತ್ತಿತ್ತು. ಬಾಯಿಂದ ಒಂದು ಮಾತೂ ಹೊರಬೀಳದಾಯಿತು. ಆತನು ಮತ್ತೆ ಆ ಕಪಾಟಿನ ಕಡೆಗೆ ಓಡಿದನು. ಪಿಸ್ತೂಲನ್ನು ಹೊರದೆಗೆದನು. ಅಲ್ಲಿಂದಲೇ ಗಕ್ಕನೇ ತಿರುಗಿ ಕ್ರಿಸ್ತಿಯ ಮೇಲೆ ಮೂರು ಸಲ ಗುಂಡು ಹಾರಿಸಿದನು. ಕಣ್ಣುಮುಚ್ಚಿ ಕಣ್ಣು ತೆರೆಯುವಷ್ಟರಲ್ಲಿ ಇದೆಲ್ಲವೂ ನಡೆದುಹೋಯಿತು. ಕ್ರಿಸ್ತಿಯ ದೇಹವು 'ಧಢಲ್' ಎಂದು ನೆಲಕ್ಕೆ ಬಿತು

ಗುಂಡಿನ ಸಪ್ಪಳ ಕೇಳಿ ಹೊರಕೋಣೆಯಿಂದ ಹೆಂಡ್ರಿಕ್ಸನ್ ಮತ್ತು ಮಾರ್ಗನ್ನರು ಓಡಿಬಂದರು.

"ಏನಾಯಿತು, ಲೀ?" ಕ್ರಿಸ್ತಿಯು ನೆಲಕ್ಕುರುಳಿದುದನ್ನು ಕಂಡು ಮಾರ್ಗನ್ನನು ಅಣ್ಣನಿಗೆ ಪ್ರಶ್ನೆ ಮಾಡಿದನು.

" ನೀಚ, ನಿಗ್ರೋ ನನಗೆ ಧಮಕೀ ಕೊಡುತ್ತಾನೆ " ಕಪಾಟಿನ ಕಡೆಗೆ ತಿರುಗಿ ಲೀಯು ತನ್ನ ಪಿಸ್ತೂಲನ್ನು ಒಳಗೆ ಬಿಸಾಡಿದನು, " ಆತನು ನನಗೆ ಬೆದರಿಕೆ ಹಾಕುತ್ತಿದ್ದುದು ಹೆಂಡ್ರಿಕ್ಸನ್ ಮತ್ತು ನೀನು ಕೇಳಿಯೇ ಇದ್ದೀರಿ. ಅಷ್ಟೇ ಅಲ್ಲ, ಆತ ನನ್ನ ಮೈಮೇಲೆ ಏರಿಯೂ ಬಂದು ಆತ್ಮಸಂರಕ್ಷಣೆಗಾಗಿ ಗುಂಡು ಹಾಕಬೇಕಾಯಿತು! ಏನು ಮಾಡುವುದು........ಇದರ ಹೊರತು ಬೇರೆ ಉಪಾಯವೇ ಇರಲಿಲ್ಲ!"

ಆ ಮೂವರೂ ಬಳಿಕ ಕೋಣೆಯ ಹೊರಗೆ ಬಂದರು. ಹಲವು ಕಾರಕೂನರು ಆ ಗುಂಡಿನ ಸಪ್ಪಳ ಕೇಳಿ ಅಲ್ಲಿ ಓಡುತ್ತ ಬಂದರು. ಏನಾಯಿತೆಂಬದನ್ನು ತಿಳಿಯುವ ಕುತೂಹಲವುಳ್ಳವರಾಗಿದ್ದರು.

"ಆ ನಿಗ್ರೋನ ಮಿ ತಲೆಗೇರಿತ್ತು, ಆತ ಕೊಬ್ಬಿ ಸೊಕ್ಕಿಗೆ ಬಂದಿದ್ದ." ಲೀಯು ನಳದ ಮೇಲೆ ಕೈತೊಳೆಯುತ್ತ ಹೇಳಿದನು. "ಅಲ್ಬಾಮಾದಿಂದ ಬಂದು ಎರಡು ಮೂರು ತಿಂಗಳು ಆಗಿರಬಹುದು ನನ್ನನ್ನು ಕೇಳದೆ ಗಿಡಗಳನ್ನೇಕೆ ಕಡಿದೆ, ಎಂದು ವಿಚಾರಿಸಲು ಕರೆಕಳುಹಿದ್ದೆ. ಆದರೆ ಆತನು ನನ್ನನ್ನು ಕಂಡೊಡನೆ ಬೇಕಾದ ಹಾಗೆ ಬಾಯಿ ಹರಿಬಿಟ್ಟ. ನನ್ನ ಮೇಲೆ ಏರಿಬಂದ, ಭಯಂಕರ ಮನುಷ್ಯ........"

ಲೀಯ ವಿವರಣೆಯಿಂದ ಸಮಾಧಾನಹೊಂದಿ ಕಾರಕೂನರೆಲ್ಲ ಮರಳಿ ಕೆಲಸಕ್ಕೆ ಹೋದರು. ಹೆಂಡ್ರಿಕ್ಸನ್ನನೂ ಬಳಿಕ ತನ್ನ ಭಾರವಾದ ಖಾತೆಯ ಪುಸ್ತಕ ತೆರೆದು ಬರೆಯುವುದಕ್ಕೆ ಪ್ರಾರಂಭಿಸಿದನು.

" ಆ ಹಿತ್ತಿಲ ಬಾಗಿಲ ತೆರೆ " ಲೀಯು ತನ್ನ ತಮ್ಮನಿಗೆ ಹೇಳಿದನು. " ಆ ಎಲ್ಲಾ ನಿಗ್ರೋ ಜನರಿಗೆ, ಅಲ್ಬಾಮಾದಿಂದ ಬಂದ ನಿಗ್ರೋನಂತೆ ಸೊಕ್ಕಿಗೆ ಬಂದರೆ, ಗತಿಯು ಹೇಗಾಗುತ್ತದೆ ಎಂಬುದು ಕಾಣಲಿ........"

ಕೂಡಲೇ ತಮ್ಮನು ಹಿಂದಿನ ಬಾಗಿಲವನ್ನು ತೆರೆದು ಹೊರಗೆ ಇಣಿಕಿ ನೋಡಿದನು. ಸೋಜಿಗದ ಸಂಗತಿ ಎಂದರೆ ಅಲ್ಲಿ ಒಂದೂ ಕರೇ ಪಿಳ್ಳೆಯೂ ನೆರೆಹೊರೆಯಲ್ಲಿ ಕಾಣುತ್ತಿದ್ದಿಲ್ಲ. ಕ್ರಿಸ್ತಿ ಟೆಕರನು ಕುಳಿತು ಬಂದ ಕತ್ತೆಯು ಮಾತ್ರ ನಿಂತಿತ್ತು.

—ಒಂದು ಇಂಗ್ಲಿಷ ಕತೆಯಿಂದ

## ಅಭ್ಯಸನಗಳು

ಪ್ರಶ್ನೆಗಳು:—

೧. ಟೆಕರನ ಸ್ವಭಾವವು ಹೇಗೆ ಇದ್ದಿತು?
೨. ಪೇಟೆಗೆ ಬಂದಾಗ ನಿಗ್ರೋ ಜನರು ಅವನನ್ನು ಕಂಡು ದೂರ ಹೋಗುತ್ತಿದ್ದುದು ಏಕೆ?
೩. ಕ್ರಿಸ್ತಿ ಟೆಕರನ ಮಹತ್ವಾಕಾಂಕ್ಷೆ ಏನಿದ್ದಿತು?
೪. ಲೀಯ ಅಭಿಪ್ರಾಯದ ಮೇರೆಗೆ ಕ್ರಿಸ್ತಿಯ ಅಪರಾಧಗಳು ಯಾವವು?

**ಭಾಷಾಭ್ಯಾಸ:—**

೧. ಪರಿಣಾಮಕಾರಿಯಾದ ಶೈಲಿಗೆ ಸೂಕ್ಷ್ಮನಿರೀಕ್ಷಣ ಶಕ್ತಿಯು ಅವಶ್ಯಕತೆಯಿದೆ. ಇಲ್ಲಿ ಲೀಯ ಸ್ವಭಾವವು ಅತನ ಉಡುಪು ಮತ್ತು ರೀತಿಗಳಿಂದಲೂ ಚೆನ್ನಾಗಿ ವ್ಯಕ್ತವಾಗುವಂತೆ ವರ್ಣಿಸಿದ್ದಾಗಿದೆ!

೨. i 'ಲೀಯ ವಿವರಣೆಯಿಂದ ಸಮಾಧಾನ ಹೊಂದಿ...ಕೆಲಸಕ್ಕೆ ಹೋದರು.'

ii 'ಅಲ್ಲಿ ಕತ್ತೆ ಮಾತ್ರ ನಿಂತಿತ್ತು.'

ಇಂತಹ ಮಾತುಗಳಿಂದ ಓದುಗರಿಗೇ ಅರಿತುಕೊಳ್ಳಲು ಬಿಟ್ಟು ಸಂಯಮದ ಶೈಲಿಯು ಅಭ್ಯಸನೀಯವಾಗಿದೆ. ವಾಚಕರ ಬುದ್ಧಿ ಭಾವನೆಗಳಿಗೆ ತನ್ನ ತಾನೆ ಅರಿತುಕೊಂಡು ಆನಂದಿಸಲು ಅವಕಾಶವಿರುವ ಧ್ವನಿಯುಕ್ತ ಶೈಲಿಯು ಶ್ರೇಷ್ಠ ವಾದುದು. ಎಲ್ಲವನ್ನೂ ಪ್ರತಿಯೊಂದು ಕಡೆಗೂ ಬಿಚ್ಚಿ ಬಿಡಿಸಿ ಹೇಳುವ ಪ್ರಚಾರಕರ ಶೈಲಿಯಿಂದ ಮನಸ್ಸಿನ ಭಾವನೆಗಳ ಸೂಕ್ಷ್ಮವು ಅಳಿಯುವುದು.

**ಶಬ್ದವಿಚಾರ:—**

ಥಟಾರನೆ—ಎಂದರೆ ಒಮ್ಮೆಲೆ ಈ ಶಬ್ದವು ಅನುಕೃತಿಯನ್ನು ಸೂಚಿಸುತ್ತದೆ. ಇದರಂತೆ ಕೆಲವು ಶಬ್ದಗಳನ್ನು ಹೇಳಿರಿ.

ಚರ್ಮ ಇದರ ತದ್ಭವ ಚಮ್ಮ. ಚಮ್ಮಟಾ ಬೆಳಗು ಇದರ ಅರ್ಥವೇನು ?

**ವಾಕ್-ಶಿಕ್ಷಣ:—**

೧. ನಿಮ್ಮ ಶಿಕ್ಷಕರ ಸಹಾಯದಿಂದ ಒಂದು ಅಣಕ ಪಾರ್ಲಿಮೆಂಟು ನಡೆಯಲಿ. ಅಲ್ಲಿ ಮಂತ್ರಿಗಳ ಲಕ್ಷ್ಯವನ್ನು ಸೆಳೆಯುವುದಕ್ಕಾಗಿ ನಿಲುವಳಿ ಸೂಚನೆಯನ್ನು ಮುಂದಿಡಿರಿ. ಸರಕಾರೀ ಪಕ್ಷದವರು ಟಿಕರನನ್ನು ಸಾಯುವಂತೆ ಹೊಡೆದುದು ಸ್ವಲ್ಪ ಹೆಚ್ಚು ಆದರೂ ಆ ಕೃತಿಯನ್ನು ಎತ್ತಿ ಹಿಡಿಯುವರು, ಹಾಗೂ ವಿರೋಧಿ ಪಕ್ಷದ ಮುಂದಾಳುಗಳು ಅದನ್ನು ನಿಷೇಧಿಸುವರು.— ಎಂಬೀ ಬಗೆಯ ಭಾಷಣ ಗಳನ್ನು ಮಾಡಲಿ.

**ಚರ್ಚೆ;—**

"ಮಹತ್ವಾಕಾಂಕ್ಷೆಯೇ ಎಲ್ಲ ಬಗೆಯ ಕಲಹಗಳ ಮೂಲ" ಈ ಮಾತನ್ನು ಚರ್ಚಿಸಿರಿ.

**ಬರೆಹ:—**

ಕ್ರಿಸ್ತಿ ಟಿಕರನಿಗೆ ಆದ ಅನ್ಯಾಯವು ಇನ್ನು ಮುಂದೆ ಮತ್ತೆ ಲೀಯ ಕೈಯಿಂದ ಆಗದಂತೆ ಅಲ್ಲಿಯ ಕೂಲಿಕಾರರು ತಮ್ಮ ಸಂಘಟನೆಯಿಂದ ಬುದ್ಧಿಗಲಿಸಿ ಶಾಂತಮಾರ್ಗದಿಂದಲೇ ಅತನನ್ನು ಹಾದಿಗೆ ತಂದರು, ಎಂಬ ಹಾಗೆ ಈ ಕಥೆ ಯನ್ನು ಮುಂದುವರಿಸಿ ಮುಗಿಸಿರಿ.

---

# ೨೬. ಕಾದಂಬರಿಯ ಅಂತರಂಗ

[ ಕಾದಂಬರಿಗಳನ್ನು ಓದದ ಸುಶಿಕ್ಷಿತರು ವಿರಳ. ಆದರೆ ಓದಿ ರಸಗ್ರಹಣ ಮಾಡಲು ಕಾದಂಬರಿಗಳ ಸ್ವರೂಪ ರಚನಾದಿಗಳನ್ನು ಕುರಿತ ಸಂಗತಿಗಳು ತಿಳಿದಿರುವದು ಅವಶ್ಯವಾಗಿದೆ ಆದಕ್ಕಾಗಿ ಅದನ್ನು ಕುರಿತು ಪ್ರಾಥಮಿಕ ನಾಲ್ಕು ಮಾತುಗಳನ್ನು ಇಲ್ಲಿ ಕೊಡಲಾಗಿದೆ.]

ಕಥೆ ಕಾದಂಬರಿಗಳೆರಡೂ ಒಂದೇ ಜಾತಿಗೆ ಸೇರಿದ ಸಾಹಿತ್ಯ ಪ್ರಕಾರಗಳು. ಎರಡೂ ಗದ್ಯ ಪ್ರಕಾರಗಳು ಜೀವನದ ಅನುಭವಗಳನ್ನೆ ಮೂಲವಸ್ತುವನ್ನಾಗಿಟ್ಟು ಕೊಂಡು ಕಟ್ಟಿದವುಗಳು. ಎರಡರಿಂದಲೂ ಮನರಂಜನೆ, ಮನಸ್ಸಿನ ವಿಕಾಸ ಸಾಧ್ಯ ವಾಗುತ್ತದೆ. ಹೀಗಿದ್ದರೂ ಇವೆರಡೂ ಎಷ್ಟೋ ವಿಧದಲ್ಲಿ ಬೇರೆ ಬೇರೆಯಾಗಿವೆ. ರೂಪ, ರಚನೆ, ವಿಸ್ತಾರ, ಪರಿಣಾಮ ಎಲ್ಲವೂ ಬೇರೆ ಹೇಗೆ? ಕಥೆಗೂ ಕಾದಂಬರಿಗೂ ಇರುವ ವ್ಯತ್ಯಾಸವೇನು? ಒಂದು ಉತ್ತರವನ್ನು ನೀವೇ ತಟ್ಟನೆ ಹೇಳುತ್ತೀರಿ. ಕಥೆ ಚಿಕ್ಕದಾಗಿರುತ್ತದೆ; ಕಾದಂಬರಿ ದೊಡ್ಡದಾಗಿರುತ್ತದೆ ಎಂದು. ಹೌದು. ಕಥೆಗಿಂತ ಕಾದಂಬರಿ ದೊಡ್ಡದಾಗಿರುತ್ತದೆ; ನಿಜ. ಹಾಗಾದರೆ ಕಥೆ ಯೊಂದನ್ನು ಹಿಗ್ಗಿಸಿ, ವಿಸ್ತರಿಸಿದರೆ ಕಾದಂಬರಿಯಾಗುತ್ತದೆಯೆ? ಅಥವಾ ಕಾದಂ ಬರಿಯೊಂದನ್ನು ಸಂಗ್ರಹ ಮಾಡಿದರೆ ಕಥೆಯಾಗುತ್ತದೆಯೆ? ಶ್ರೀ. ಕಾರಂತರ "ಚೋಮನ ದುಡಿ" ಕಾದಂಬರಿಯ ಸಂಗ್ರಹವನ್ನು ನೀವು ಓದಿದ್ದೀರಿ. ಅದಕ್ಕೆ ಕಾದಂಬರಿಯ ಸಂಗ್ರಹರೂಪ ಎನ್ನದೆ ಕಥೆ ಎನ್ನಲಾಗುತ್ತದೆಯೇ? ಇಲ್ಲ. ಹಾಗಾ ದರೆ ಕಥೆಗೂ ಕಾದಂಬರಿಗೂ ಇರುವ ಮುಖ್ಯ ವ್ಯತ್ಯಾಸವೇನು?

ಆಗಲೆ ನೀವು ಹೇಳಿದ ಮಾತಿನಲ್ಲಿಯೆ ಉತ್ತರ ಅಡಕವಾಗಿದೆ. ಕಾದಂಬರಿ ಕಥೆಗಿಂತ ದೊಡ್ಡದಾಗಿರುತ್ತದೆ ಎಂದರೆ ಕೇವಲ ಪುಟಗಳ ಸಂಖ್ಯೆಯಲ್ಲಿ ಅಲ್ಲ. ಜೀವ ನದ ದರ್ಶನ ಕಾದಂಬರಿಯಲ್ಲಿ ಕತೆಗಿಂತಲೂ ವಿಸ್ತೃತವಾದದ್ದಿರುತ್ತದೆ. ಹಾಗೆಂದ ರೇನು? ಚೋಮನ ದುಡಿಯಲ್ಲಿ ಚೋಮನ ಅನೇಕ ಅನುಭವಗಳನ್ನು ಜೋಡಿಸಿ ಅವನ ಕಥೆಯನ್ನು ಉದ್ದಕ್ಕೂ ಬೆಳೆಯಿಸಿಕೊಂಡು ಹೋಗಿದ್ದಾರೆ. ಹಾಗೆ ನೋಡಿದರೆ ಆ ಕಾದಂಬರಿಯನ್ನು ನಾವು ಓದಿ ಮುಗಿಸಿದಾಗ ಚೋಮನ ಇಡಿಯಾದ ಜೀವನವೆ ನಮ್ಮ ಕಣ್ಣೆದುರು ನಿಲ್ಲುತ್ತದೆ. ಚೋಮ ಗೇಣು ನೆಲಕ್ಕಾಗಿ ಧನಿಯನ್ನು ಕಾಣ ಲೆಂದು ಹೋದಾಗಿನ ಸನ್ನಿವೇಶವನ್ನಾಗಲಿ; ಮನ್ವೇಲ ಬೆಳ್ಳಿಯೊಡನೆ ಸಲ್ಲಾಪಕ್ಕೆ ತೊಡಗಿದಾಗ ಚೋಮ ಬಂದು ನೋಡಿದ ಸನ್ನಿವೇಶವನ್ನಾಗಲಿ, ಮಾತ್ರ ಎತ್ತಿಕೊಂಡು ವಿವರಿಸಿದ್ದರೆ ಅದು ಕಥೆಯಾಗಬಹುದಿತ್ತು. ಹೀಗೆಂದ ಮಾತ್ರಕ್ಕೆ ಕೆಲವೇ ಪಾತ್ರ ಗಳಿಗೆ ಸಂಬಂಧಿಸಿದ ಕಥೆಗಳನ್ನು ಒಂದೆಡೆ ಕಲೆ ಹಾಕಿದರೆ ಕಾದಂಬರಿಯಾಗುತ್ತದೆ ಎಂದೂ ತಿಳಿಯಬೇಡಿ. ಜೀವನದ ಚುಟುಕು ದರ್ಶನವನ್ನು ಕೊಡುವುದು ಕಥೆಯ

ಉದ್ದೇಶ, ಅದಕ್ಕೂ ಹೆಚ್ಚಿನ, ದೀರ್ಘವಾದ, ದರ್ಶನವನ್ನು ಒದಗಿಸುವುದು ಕಾದಂಬರಿಯ ಉದ್ದೇಶ. ಹೀಗೆ ಉದ್ದೇಶವೇ ಬೇರೆಯಾದ ಮೇಲೆ ಕಾದಂಬರಿಯ ರೂಪ-ರಚನೆಗಳೆರಡೂ ಬೇರೆಯಾಗಿರಬೇಕಲ್ಲವೇ ? ಇವೆರಡೂ ಹೇಗೆ ಬೇರೆಯಾಗುತ್ತವೆ ಎಂಬುದನ್ನು ನೋಡುವಾ.

ಕಾದಂಬರಿ ರಚನೆ ಕಥೆಯ ರಚನೆಗಿಂತ ಬೇರೆ ಎಂದು ಹೇಳಿದೆ. ಹೀಗೆ ಬೇರೆಯಾಗಿರುತ್ತದೆ. ಎಂಬುದನ್ನು ತಿಳಿಯಬೇಕಾದರೆ ರಚನೆ ಎಂದರೇನು ಎಂಬುದನ್ನು ಮೊದಲು ತಿಳಿಯಬೇಕು. ಒಂದೇ ಅಥವಾ ಕೆಲವು ಮಹತ್ವ್ವದ ವ್ಯಕ್ತಿಗಳ ಜೀವಕ್ಕೆ ಸಂಬಂಧಿಸಿದ ಸನ್ನಿವೇಶಗಳನ್ನು ಒಟ್ಟುಗೂಡಿಸಿಕೊಂಡು ಕಾದಂಬರಿಯನ್ನು ಬರೆಯಲಾಗಿರುತ್ತದೆಯಷ್ಟೆ . ಅನೇಕ ಸನ್ನಿವೇಶಗಳಿರುವುದರಿಂದ ಅವೆಲ್ಲವನ್ನು ಯಾವುದಾದರೊಂದು ಕ್ರಮದಲ್ಲಿ ಜೋಡಿಸಬೇಕು. ಬದುಕಿನಲ್ಲಿ ಹೇಗೋ ಹಾಗೆ ಘಟನೆಗಳು ಒಂದಾದ ಮೇಲೊಂದಾಗಿ ಬರಬೇಕು. ಎಂದರೆ ಕಾಲಾನುಕ್ರಮದಲ್ಲಿ ಏನೇನು ಯಾವಯಾವ ರೀತಿಯಲ್ಲಿ ನಡೆಯುತ್ತದೆಯೋ ಅದೇ ಕ್ರಮದಲ್ಲಿ ಅದರ ವಿವರವೂ ಬರಬೇಕು ಎಂದಾಯಿತು ಕಥೆಗಳಲ್ಲಿ ಈ ಕ್ರಮವನ್ನೂ ಅನುಸರಿಸಲಾಗುತ್ತದೆ. ಕಾದಂಬರಿಯಲ್ಲಿಯೂ ಇದೇ ಕ್ರಮವನ್ನು ಅನುಸರಿಸಲಾಗುತ್ತದೆ; ಆದರೆ ಕಾದಂಬರಿಯ ಕ್ರಮದ ಇನ್ನೂ ಒಂದು ವಿಶೇಷವಿರುತ್ತದೆ. ಒಂದಾದ ಮೇಲೆ ಒಂದು ಘಟನೆ ನಡೆಯಿತು ಎಂದು ಕತೆ ತೊರಿಸುತ್ತದೆ. ಆದರೆ ಕಾದಂಬರಿ ಇದರ ಜೊತೆಗೆ ಅದೇ ಕ್ರಮಲ್ಲಿ ಯಾತಕ್ಕೆ ನಡೆಯಿತು. ಎನ್ನುವುದನ್ನೂ ತೋರಿಸುತ್ತದೆ. ಅಂದರೆ ಒಂದು ಸನ್ನಿವೇಶ ಮುಂದೆ ಬೆಳೆಯುವ ಬಗೆ, ಆ ಬೆಳವಣಿಗೆಯಲ್ಲಿ ಅಡಕವಾದ ಕಾರ್ಯಕಾರಣಗಳ ಸಂಬಂಧಗಳ ಸೂಚನೆ ಕಾದಂಬರಿಯಲ್ಲಿ ಬರುತ್ತದೆ. ಏನು ನಡೆಯಿತು, ಯಾವ ಕ್ರಮದಲ್ಲಿ ನಡೆಯಿತು ಎಂಬುದನ್ನು ಹೇಳುವುದು ಕಥೆಗೆ ಮುಖ್ಯವಾದರೆ ನಡೆದದ್ದು ನಡೆದ ರೀತಿಯಲ್ಲಿಯೇ ಯಾತಕ್ಕೆ ನಡೆಯಿತು. ಎಂಬ ಬಗೆಯಲ್ಲಿ ಕಾದಂಬರಿಕಾರ ತನ್ನ ರಚನೆಯ ಮುಖಾಂತರ ತಿಳಿವನ್ನು ಕೊಡುತ್ತಾನೆ, ಆ ಬಗೆಯಲ್ಲಿ ವಿವರವಾಗಿ ಹೇಳುತ್ತಾನೆಂದಲ್ಲ. ಹೇಳದಿದ್ದರೂ ಸನ್ನಿವೇಶಗಳ ಜೋಡಣೆಯ ರೀತಿಯೇ ಅಂಥದಾಗಿರುತ್ತದೆ. ಇದರಿಂದಾಗಿ ಇದು ಹೀಗೆ ನಡೆಯಿತು, ಇದಕ್ಕಾಗಿ ನಡೆಯಿತು ಎಂದು ಓದುಗ ತಾನೇ ಗ್ರಹಿಸಬಲ್ಲವನಾಗುತ್ತಾನೆ. ಕಾದಂಬರಿಯಲ್ಲಿಯ ರಚನೆಗೆ ಇದೇ ತಳಹದಿ.

ಜೋಮನದುಡಿಯ ಉದಾಹರಣೆಯನ್ನೇ ತೆಗೆದುಕೊಳ್ಳುವಾ. ಇನ್ನೊಬ್ಬರಿಗೆ ಅಧೀನನಾಗಿ, ಆಳಾಗಿ ಉಳಿಯದೆ ತಾನಾಗ್ಗಿಯೆ ಒಂದು ಗೇಣು ನೆಲವನ್ನು ಉತ್ತು ರೈತನೆನಿಸಿಕೊಂಡು ಬಾಳಬೇಕು. ಎನ್ನುವ ಜೋಮನ ಬಯಕೆಯಿಂದ ಕಾದಂಬರಿ ಮೊದಲಾಗುತ್ತದೆ. ಇದು ಸಾಧ್ಯವಾಗಬೇಕಾದರೆ, ಮೊದಲು ಸಾಲಗಾರ

ವಾಗಿ ಆತನ ಮಕ್ಕಳಿಬ್ಬರು ಅವನಿಂದ ದೂರವಾಗಿ ಕಾಫೀ ತೋಟದಲ್ಲಿ ದುಡಿಯಲು ಹೋಗಬೇಕು. ಅಲ್ಲಿ ಒಬ್ಬ ಮಗ ಒಂದು ತೆರನಾಗಿ ಬೇರೆಯಾಗಿ ಬೆಳೆದ. ಬೆಳ್ಳಿ ಮನ್ವೇಲರ ಸಂಬಂಧ ಒಂದು ವಿಧವಾಗಿ ಬೆಳೆಯಿತು. ಇವೆಲ್ಲದರಿಂದ ಕೊನೆಯಲ್ಲಿ ಚೋಮನ ಬಾಳಿನಲ್ಲಿ ನಿರಾಶೆ ಕತ್ತಲು ಕವಿಯಿತು. ತನ್ನ ಸಾಮಾನ್ಯವಾದ ಬಯಕೆಯನ್ನು ಈಡೇರಿಸಲಾಗದೆ. ತನ್ನ ಮಕ್ಕಳಿಂದಲೂ ದೂರವಾದ ದುರಂತದಲ್ಲಿ ಕಾದಂಬರಿ ಕೊನೆಗೊಳ್ಳುತ್ತದೆ ನೀವು ಈಗಲೆ ಗಮನಿಸಿರಬೇಕು—ಒಂದರಿಂದಾಗಿ ಒಂದು ಹೇಗೆ ಅನಿವಾರ್ಯವಾಗಿ ಸನ್ನಿವೇಶಗಳು ಬೆಳೆಯುತ್ತ ಹೋದುವು ಎಂಬುದನ್ನು ಸಾಮಾನ್ಯವಾದ ಆ ಒಂದು ಬಯಕೆಯನ್ನು ಚೋಮ ಮೊದಲಿನಿಂದಲೂ ಆದೇ ತನ್ನ ಜೀವನದ ಧ್ಯೇಯ ಎಂಬ ನಿಷ್ಠೆಯಿಂದ, ಆಸೆಯಿಂದ, ಬೆಳೆಯಿಸಿಕೊಂಡು ಬಂದಿರದಿದ್ದರೆ ಮುಂದೆ ನಡೆದದ್ದು ಯಾವುದೂ ನಡೆಯಬೇಕಿರಲಿಲ್ಲ. ನಡೆಯುತ್ತಿರಲಿಲ್ಲ. ಅಂದರೆ ಏನೆಂದ ಹಾಗಾಯಿತು? ನಡೆದುದನ್ನು, ಅಥವಾ ನಡೆಯಬಹುದಾದುದನ್ನು ವಿವರವಾಗಿ ಕಾರ್ಯಕಾರಣಸಂಬಂಧ ಸೂಚಿತವಾಗುವ ಬಗೆಯಲ್ಲಿ, ಸನ್ನಿವೇಶಗಳನ್ನು ಜೋಡಿಸಿಕೊಳ್ಳುವುದೇ ಕಾದಂಬರಿಗೆ ವಿಶೇಷವಾದ ರಚನಾಕ್ರಮ. ಈ ರಚನಾಕ್ರಮದ ಮೂಲಕವೆ ಕಾದಂಬರಿಯಲ್ಲಿ ಬರುವ ಅನೇಕ ಸನ್ನಿವೇಶಗಳು ಒಟ್ಟಾಗಿ, ಒಂದಾಗಿ, ಒಂದೇಬಗೆಯ ಪರಿಣಾಮವನ್ನು ಮಾಡಲು ಸಮರ್ಥವಾಗುತ್ತವೆ.

ಈ ರಚನೆಯ ಬಗೆಯಲ್ಲಿ ಇನ್ನೊಂದು ಅಂಶವನ್ನು ನಾವು ಗಮನಿಸಬೇಕು. ಒಂದರಿಂದಾಗಿ ಇನ್ನೊಂದು ಸನ್ನಿವೇಶ ಬೆಳೆಯುತ್ತದೆ ಎಂಬುದನ್ನು ನೋಡಿದೆವು. ಆದರೆ ಹೀಗೆ ಏಕೆ ಬೆಳೆಯುತ್ತದೆ? ಚೋಮನ ಬಯಕೆಯಿಂದಲೆ ಮುಂದಿನ ಅನರ್ಥ ಪರಂಪರೆ ಸಾಧ್ಯವಾಗಲಿಕ್ಕೆ ಇನ್ನೂ ಒಂದು ಗಮನಾರ್ಹವಾದ ಕಾರಣವಿದೆ. ಅದೆಂದರೆ ಚೋಮನ ಸ್ವಭಾವಗುಣ. ಅವನದೇ ಆದ ಸ್ವಭಾವವಿಶೇಷದ ಮೂಲಕವೆ ತನ್ನ ಬಯಕೆಯನ್ನು ಆತ ಬೆಳೆಯಿಸಿಕೊಂಡ. ಚೋಮ ಅಲ್ಪಸಂತುಷ್ಟನಾಗಿದ್ದರೆ, ಪಾಲಿಗೆ ಬಂದದ್ದು ಪಂಚಾಮೃತ ಎಂದು ತಿಳಿದು ತನ್ನ ಕೀಳು ಬಾಳನ್ನೇ ಒಪ್ಪಿಕೊಂಡಿರಬಲ್ಲ ವ್ಯಕ್ತಿಯೊಬ್ಬನಾಗಿದ್ದರೆ ಈ ಕಾದಂಬರಿ ಈ ರೀತಿಯಾಗಿ ಬೆಳೆಯುತ್ತಿದ್ದಿತೆ? ಅಂಥವನಾಗಿದ್ದರೆ ಚೋಮ ಧನಿಯರೆಡೆಗೆ ಹೋಗುತ್ತಲೆ ಇರಲಿಲ್ಲ. ನಿರಾಶ ಹೊಂದುತ್ತಲೂ ಇರಲಿಲ್ಲ ನಿರಾಶೆಯಿಂದ ಆತನ ನಿರ್ಧಾರ ಹುರಿಗೊಳ್ಳುತ್ತಲೂ ಇರಲಿಲ್ಲ. ಒಟ್ಟಿನಲ್ಲಿ ಈಗ ನಡೆದ ಹಾಗೆ ಯಾವುದೂ ನಡೆಯುತ್ತಿರಲಿಲ್ಲ. ಒಂದು ಸಂಗತಿ ಒಂದು ರೀತಿಯಾಗಿ ಬೆಳೆಯುವಲ್ಲಿ ಆ ಸಂಗತಿಯನ್ನು ಮಾಡುವ ಅಥವಾ ಮುಂದರಿಸುವ ಪಾತ್ರದ ಸ್ವಭಾವ ತನ್ನ ಕೆಲಸ ಮಾಡುತ್ತಿರುತ್ತದೆ ಒಬ್ಬ ಮನುಷ್ಯ ಯಾವಾಗಲೂ ತನ್ನ ಸ್ವಭಾವಕ್ಕನುಗುಣವಾಗಿಯೆ ನಡೆದುಕೊಳ್ಳುತ್ತಾನೆ. ಆತ ಆಡುವ ಪ್ರತಿಯೊಂದು ಮಾತು, ಆತ ಮಾಡುವ ಪ್ರತಿಯೊಂದು ಕೃತಿ ಆತನ ಸ್ವಭಾವವನ್ನು ವ್ಯಕ್ತಮಾಡುತ್ತದೆ, ಸ್ವಭಾವತಃ ಒಳ್ಳೆಯವನಾಗಿದ್ದವ ಕೆಟ್ಟದ್ದನ್ನು

ಮಾಡುವುದಿಲ್ಲ. ಕೆಟ್ಟವನ ಮನಸ್ಸು ಒಳ್ಳೆಯದರ ಕಡೆಗೆ ಹರಿಯುವುದಿಲ್ಲ. ಅವರವರ ಕ್ರಿಯೆಪ್ರತಿಕ್ರಿಯೆಗಳು ಅವರವರ ಸ್ವಭಾವದ ಪಡಿಯಚ್ಚನ್ನು ಪಡೆದೇ ಬರುತ್ತವೆ. ಆದ್ದರಿಂದ ಕಾದಂಬರಿಗಳಲ್ಲಿ ಬರುವ ಸನ್ನಿವೇಶಗಳನ್ನು ನಾವು ಗಮನಿಸುವಾಗ ಅವನ್ನು ಸಾಧ್ಯವಾಗಿಸಿದ ಪಾತ್ರಗಳು ಯಾವವು ? ಅವುಗಳ ಸ್ವಭಾವವಿಶೇಷಗಳು ಯಾವ ಬಗೆಯವು ? ಎಂದು ಮುಂತಾಗಿ ಕಾರ್ಯಕಾರಣ ಸಂಬಂಧಗಳನ್ನು ತಿಳಿಯ ಬಲ್ಲವರಾಗುತ್ತೇವೆ. ಇದರಿಂದಲೇ ನಾವು ಕಾದಂಬರಿಯೊಂದನ್ನು ಓದುವಾಗ ಜೀವನ ದಲ್ಲಿ ನಡೆಯಬಹುದಾದ ಕೆಲವೊಂದು ಘಟನೆಗಳನ್ನು ಅರ್ಥ ಮಾಡಿಕೊಳ್ಳಬಲ್ಲವರಾಗು ತ್ತೇವೆ. ಅವನ್ನು ಮಾಡುವ, ಮುಂದರಿಸುವ ಜನರ ಸ್ವಭಾವಗಳನ್ನು ತಿಳಿಯಬಲ್ಲವ ರಾಗುತ್ತೇವೆ. ಎಲ್ಲ ಕಾದಂಬರಿಗಳಲ್ಲಿಯೂ ಇದು ಒಂದು ಮುಖ್ಯವಾದ ಅಂಶ ತಮ್ಮ ತಮ್ಮ ಸ್ವಭಾವಗುಣಗಳಿಗೆ ಸರಿಯಾಗಿ ಕಾರ್ಯಪ್ರವೃತ್ತರಾಗಿದ್ದ ಮಾನವ ರನ್ನು, ಅವರ ಕ್ರಿಯೆಪ್ರತಿಕ್ರಿಯೆಗಳಿಂದಾಗಿ ಹಬ್ಬಿಕೊಂಡ ಸನ್ನಿವೇಶಮಾಲಿಕೆ ಯನ್ನು ತೋರಿಸುವುದೇ ಕಾದಂಬರಿಯ ಮುಖ್ಯವಾದ ಉದ್ದೇಶ. ಆದ್ದರಿಂದ ಒಳ್ಳೆಯ ಕಾದಂಬರಿಗಳಲ್ಲಿ ಗಮನವನ್ನು ಸೆಳೆಯಬೇಕಾದ ಮುಖ್ಯ ವಿಷಯ ಗಳೆಂದರೆ ಅವುಗಳಲ್ಲಿ ಕಾಣಿಸಿಕೊಳ್ಳುವ ಪಾತ್ರಗಳು ಮತ್ತು ಆ ಪಾತ್ರಗಳು ಮಾಡುವ ಕೃತಿವಿಶೇಷಗಳು. "ಚೋಮನದುಡಿ" ಯಲ್ಲಿ ನಾವು ಚೋಮನ ಬದುಕಿನಲ್ಲಿ ನಡೆದ ಘಟನೆಗಳನ್ನು ತಿಳಿಯುತ್ತೇವೆ. ಚೋಮ ಎಂಥ ಮನುಷ್ಯನಾಗಿದ್ದ ಎಂಬು ದನ್ನು ತಿಳಿಯುತ್ತೇವೆ. ಆತನ ಸುತ್ತಲಿನವರು ಎಂಥವರಾಗಿದ್ದರು ಎಂಬುದನ್ನು ತಿಳಿಯುತ್ತೇವೆ. ಅವರು ಅಂಥಂಥವರಾಗಿದ್ದರೆಂದೇ ನಡೆದದ್ದು ನಡೆದ ಹಾಗೆ ನಡೆ ಯಿತು ಎಂಬುದನ್ನು ತಿಳಿಯುತ್ತೇವೆ.

ಕತೆಗಿಂತ ಕಾದಂಬರಿ ಜೀವನದ ವಿಸ್ತಾರವಾದ ದರ್ಶನವನ್ನು ಕೊಡುತ್ತದೆ. ಎಂಬುದನ್ನು ಮೇಲಿನ ವಿವರದಿಂದ ತಿಳಿಯಬಹುದಲ್ಲವೆ ? ಒಂದು ಸನ್ನಿವೇಶದಲ್ಲಿ ಒಂದೆರಡು ವ್ಯಕ್ತಿಗಳು ಹೇಗೆ ನಡೆದುಕೊಳ್ಳುತ್ತವೆ. ಎಂಬುದನ್ನು ಕತೆಗಳು ತೋರಿಸಿದರೆ ಅಂಥವೇ ವ್ಯಕ್ತಿಗಳು ವಿಧವಿಧವಾದ ಸನ್ನಿವೇಶಗಳಲ್ಲಿ ಹೇಗೆ ನಡೆದು ಕೊಳ್ಳುತ್ತವೆ ಎಂಬುದನ್ನು ನಾವು ಕಾದಂಬರಿಗಳಲ್ಲಿ ಕಾಣುತ್ತೇವೆ ಆದರೆ ಇನ್ನೂ ಒಂದು ಮಾತು. ಕಾದಂಬರಿಯ ದರ್ಶನವಿಸ್ತಾರ ಕೇವಲ ಸನ್ನಿವೇಶಗಳ ವಿಸ್ತಾರ ಕ್ಕಾಗಲಿ, ಪಾತ್ರಗಳ ಸಂಖ್ಯೆ, ವೈವಿಧ್ಯಕ್ಕಾಗಲಿ ಮಾತ್ರ ಸಂಬಂಧಿಸಿದ್ದಲ್ಲ ಇವುಗಳ ಜೊತೆಯಲ್ಲಿ ಅಲ್ಲಿ ನಮಗೆ ದೊರಕುವ ತಿಳಿವೂ ವಿಸ್ತಾರವಾಗಿದ್ದಿರುತ್ತದೆ. ಯಾಕೆಂದರೆ ಕತೆಯಲ್ಲಿ ನಾವು ಕಾಣುವುದು ಬಾಳಿನ ಒಂದು ದೃಶ್ಯವನ್ನು. ಅದೇ ಒಂದು ಒಳ್ಳೆಯ ದಾದ ಕಾದಂಬರಿಯಲ್ಲಿ ನಾವು ಕಾಣುವುದು ಬಾಳಿನ ದರ್ಶನವನ್ನು ನಮಗೆ ಬಾಳಿನ ದರ್ಶನವಾಯಿತು ಎಂದು ನಾವು ಯಾವಾಗ ಹೇಳಬಹುದು ? ಬಾಳಿನ ಚಿತ್ರದೊಡನೆ ಅದು ನಡೆಯುವ ಬಗೆಗಳನ್ನು ತಿಳಿದಾಗ; ಸುಖಸೌಲಭ್ಯಗಳ ಅಥವಾ ಕಷ್ಟನಷ್ಟಗಳ ಚಿತ್ರಗಳ ಜೊತೆಯಲ್ಲಿ ಅವು ಬಾಳಿನಲ್ಲಿ ಉಂಟಾಗುವ ಕ್ರಮಗಳನ್ನು ತಿಳಿದಾಗ.

ಕಷ್ಟಸುಖಗಳ ಕಲಸುಮೇಲೋಗರವಾದ ಬಾಳನ್ನು ನಾವು ಕಾದಂಬರಿಯಲ್ಲಿಯ ಚಿತ್ರಗಳ ಮೂಲಕ ತಿಳಿದು ಬಾಳು ನಡೆಯುವುದು ಈ ರೀತಿ ಎಂದುಕೊಳ್ಳುವಂತಾದಾಗ, ಆ ಬಾಳಿನಲ್ಲಿಯ ವಿಷಮ ಶಕ್ತಿಗಳನ್ನು ನಾವು ಗುರುತಿಸಿರುತ್ತೇವೆ. ಬಾಳಿನ ಬಗೆಯಲ್ಲಿ ಒಂದು ಬಗೆಯ ತಿಳಿವನ್ನು ಪಡೆದಿರುತ್ತೇವೆ. ಆ ತಿಳಿವಿನ ಮೂಲಕವೆ ಪಡೆದ ದರ್ಶನ ನಮ್ಮ ಮಟ್ಟಿಗೆ ಅರ್ಥಪೂರ್ಣವಾಗಿರುತ್ತದೆ; ಒಂದು ಬಗೆಯ ಹಿರಿದಾದ ಆನಂದವನ್ನೂ ಒದಗಿಸುವಂಥದಾಗಿರುತ್ತದೆ.

ಮತ್ತೆ ಚೋಮನ ಉದಾಹರಣೆಯನ್ನೆ ಎತ್ತಿಕೊಳ್ಳುವ. ಆ ಕಾದಂಬರಿಯಲ್ಲಿ ಚೋಮನ ಬಾಳಿನ ದರ್ಶನವಂತೂ ನಮಗೆ ಆಗಿಯೇ ಆಗುತ್ತದೆ. ಅದರ ಜೊತೆಯಲ್ಲಿ ಅಥವಾ ಆ ದರ್ಶನದ ಅಂಗವಾಗಿ ನಾವು ಗ್ರಹಿಸುವ ವಿಷಯಗಳು ಯಾವವು ಮತ್ತು ಎಷ್ಟು? ಇದನ್ನು ನಾವು ತಿಳಿದರೆ ಕಾದಂಬರಿಯಲ್ಲಿ ಸಿಕ್ಕುವ ಜೀವನದ ದರ್ಶನ ವಿಸ್ತಾರವಾದದ್ದು ಎಂಬ ಮಾತನ್ನು ತಿಳಿಯಬಹುದು. ತನ್ನದು ಎಂದುಕೊಂಡು ಒಂದು ಗೇಣು ನೆಲವನ್ನು ಉತ್ತು ಚೋಮ ಬಾಳಬೇಕೆಂದು ಬಯಸಿದ. ಆ ಬಯಕೆ ತೀರ ಸಾಮಾನ್ಯವಾದದ್ದು. ಆತನೇನೂ ಅರಸನಾಗಬೇಕೆಂದು ಬಯಸಲಿಲ್ಲ. ಆದರೂ ಆ ತೀರ ಸಾಮಾನ್ಯವಾದ ಬಯಕೆಯೂ ಈಡೇರಲಿಲ್ಲ. ಕಾದಂಬರಿಯನ್ನು ಓದಿ ಮುಗಿಸಿದಾಗ ವಿವೇಕಿಯಾದ ಓದುಗನ ಮನಸ್ಸಿನಲ್ಲಿ "ಯಾಕೆ ಈಡೇರಲಿಲ್ಲ?" ಎನ್ನುವ ಪ್ರಶ್ನೆ ಎದ್ದೇ ಏಳುತ್ತದೆ. ಹೌದು ಚೋಮನ ಬಯಕೆ ಯಾಕೆ ಈಡೇರಲಿಲ್ಲ ? ಆತನ ಧನಿ ಒಪ್ಪಲಿಲ್ಲ. ಯಾಕೆ ಒಪ್ಪಲಿಲ್ಲ ? ಹೊಲೆಯನಾದವ ನೇಗಿಲವನ್ನು ಹಿಡಿಯಬಾರದು; ಆತ ಕೀಳು ಬಾಳನ್ನು ನಡೆಯಿಸಿ ಹೊಲೆಯನಾಗಿ ಆಳಾಗಿಯೇ ಉಳಿಯಬೇಕು, ಎಂಬ ಧನಿಯ ಕುರುಡು ಹಟಕ್ಕಾಗಿ. ಇಂಥ ಕುರುಡುಹಟ ನಮ್ಮ ಸಮಾಜದಲ್ಲಿ ಪ್ರಚಲಿತವಿದ್ದ ಒಂದು ಪರಿಸ್ಥಿತಿ. ಆ ಸಮಾಜದಲ್ಲಿಯೆ ಬಾಳಬೇಕಿದ್ದ ಚೋಮ್ನ ಆ ಪರಿಸ್ಥಿತಿಯನ್ನು ಎದುರಿಸಲೇಬೇಕು. ಎದುರಿಸಿದ. ಸಮಾಜದ ಆ ಹಟವನ್ನು ಮಣಿಸುವ ಸಾಮರ್ಥ್ಯ ಚೋಮನಲ್ಲಿರಲಿಲ್ಲ. ಆದರೆ ಆತ ಕೊನೆಯಲ್ಲಿ ಪಟ್ಟ ಪಾಡು, ಅವನ ಮನೆ ಹಾಳಾದ ಬಗೆ, ಇವುಗಳನ್ನು ನಾವು ನೆನೆದಾಗ ಸಮಾಜದ ಈ ಕುರುಡುಹಟ ಎಂಥ ಅನ್ಯಾಯ ಎಂಬುದನ್ನು ನಾವು ತಿಳಿಯಬಲ್ಲವರಾಗುತ್ತೇವೆ ಎಂದರೆ ಚೋಮನ ದುರಂತ ಜೀವನದ ದರ್ಶನದ ಮುಖಾಂತರ ನಮ್ಮ ಸಮಾಜದಲ್ಲಿ ನಡೆದ–ನಡೆಯುತ್ತಿದ್ದ ಅಂಧಶ್ರದ್ಧೆಗಳ, ಅವುಗಳಿಂದ ಉಂಟಾಗುವ ಅನ್ಯಾಯಗಳ ದರ್ಶನವೂ ನಮಗೆ ಉಂಟಾಗುತ್ತದೆ. ಅದೇ ಕಾದಂಬರಿಯಲ್ಲಿಯ ಇನ್ನೊಂದು ಸನ್ನಿವೇಶವನ್ನು ನೆನೆಯೋಣ. ಬೆಳ್ಳಿಯನ್ನು ಮನ್ವೇಲ ಕರೆದುಕೊಂಡು ಹೋದ. ಸಾಲವನ್ನು ತೀರಿಸಬೇಕಾದ್ದರಿಂದ ಆಕೆಗೆ ಹೋಗಲೇಬೇಕಾಯಿತು ಅಸಹಾಯ ಪರಿಸ್ಥಿತಿಯಲ್ಲಿ ಹೋದ ಆಕೆ ಮನ್ವೇಲನ ಕಾಮಲಾಲಸೆಗೆ ಬಲಿಯಾಗಬೇಕಾಯಿತು! ಬಡತನದ ಪರಿಣಾಮ ಇದು. ಅಲ್ಲವೆ? ಆ ಬಡತನಕ್ಕಾಗಿಯೆ ಆಕೆ ಮನ್ವೇಲನ ಮಾತು ಕೇಳಬೇಕಾಯಿತು. ತನ್ನ

ಕೈಗೆ ಸಿಕ್ಕ ಆಕೆಗೆ ಮನ್ವೇಲ ಅನ್ಯಾಯ ಮಾಡಿದ. ಅಸಹಾಯ ಪರಿಸ್ಥಿತಿಯಲ್ಲಿ ಸಿಕ್ಕವರನ್ನು ಸಾಮಾನ್ಯವಾಗಿ ದುಷ್ಟನೊಬ್ಬ ನಡಿಸಿಕೊಳ್ಳುವ ರೀತಿಯಲ್ಲಿಯೆ ಮನ್ವೇಲನು ನಡಸಿಕೊಂಡ. ಮಾನವ ಜೀವನದಲ್ಲಿಯ ವಿಪರೀತ ಪರಿಸ್ಥಿತಿಗಳು, ಅಂಥ ಪರಿಸ್ಥಿತಿಗಳಲ್ಲಿ ಕೆಲವೊಂದು ಬಗೆಯ ಜನ ನಡೆದುಕೊಳ್ಳುವ ರೀತಿ, ಇವುಗಳ ದರ್ಶನ ನಮಗೆ ಇದರಿಂದ ಉಂಟಾಗುವುದಿಲ್ಲವೆ? ಪ್ರಪಂಚದಲ್ಲಿ ಬೇಕಾದಷ್ಟು ಮನ್ವೇಲರಿರಬಹುದು, ಬೆಳ್ಳಿಯಂಥವರೂ ಇರಬಹುದು, ಚೋಮನಂತೆ ತಮ್ಮ ಹೃದಯದಾಸೆಗಳಿಗೆ ಎರವಾಗಿ ಬಾಳು ಹಾಳಾದವರು ಅನೇಕರು ಇರಬಹುದು ಎಂದೆನಿಸತೊಡಗುತ್ತದೆ; ಅವರ ದುಃಖಗಳಿಗಾಗಿ ಎದೆ ಮೊರೆಯಿಡುತ್ತದೆ. ಕೊನೆಯಲ್ಲಿ "ಇದು ಬಾಳು!" ಎಂದುಕೊಳ್ಳುವಂತಾಗುತ್ತದೆ. ಹೀಗೆಂದುಕೊಳ್ಳುವಂತಾದಾಗಲೆ ಕಾದಂಬರಿ ಸಫಲವಾಗುತ್ತದೆ. ಇಷ್ಟನ್ನು ಸಾಧಿಸದ ಕಾದಂಬರಿ ಕಾದಂಬರಿಯಲ್ಲ.

ಕತೆಗಿಂತಲೂ ಕಾದಂಬರಿ ದೊಡ್ಡದಾಗಿರುವುದರಿಂದ ಮೊದಲಿಂದ ಕೊನೆಯವರೆಗೆ ಓದುಗನಿಗೆ ಬೇಸರ ಬಾರದಂತೆ ಬರೆಯುವ ಹೊಣೆ ಕಾದಂಬರಿಕಾರನದಾಗಿರುತ್ತದೆ; ಕುತೂಹಲವನ್ನು ಕಾಯ್ದುಕೊಂಡು ಹೋಗಿ, ತೋರಿಸಿದ ಜೀವನಚಿತ್ರದ ಆಸಕ್ತಿ ಹುಟ್ಟುವಂತೆ ಬರೆಯಬೇಕಾಗುತ್ತದೆ ಇದಕ್ಕಾಗಿ ಬೇರೆಬೇರೆಯಾದ ತಂತ್ರಗಳನ್ನು ಕಾದಂಬರಿಕಾರರು ಬಳಸುತ್ತಾರೆ ಕತೆಯನ್ನು ಹೇಳುವ ರೀತಿವಿಶೇಷವೆಂದರೆಯೇ ತಂತ್ರ. ವಿಧವಿಧವಾದ ತಂತ್ರಗಳ ಮೂಲಕವೆ ವಿಧವಿಧವಾದ ರಚನೆ ಸಾಧ್ಯವಾಗುತ್ತದೆ. ಈ ರಚನೆಯ ಮೂಲಕವೆ ಜೀವನದರ್ಶನ, ಪಾತ್ರದರ್ಶನ ಸಾಧ್ಯವಾಗುತ್ತದೆ. ಇವೆರಡರ ಮೂಲಕ ಓದುಗ ಬಾಳನ್ನು ತಿಳಿಯುವಂತಾಗುತ್ತಾನೆ. ಆ ತಿಳಿವಿನ ಅಂಗವಾಗಿ ಸಂತೋಷವನ್ನೂ ಅನುಭವಿಸುತ್ತಾನೆ. ಮನರಂಜನೆಯೊಡನೆ ಮನಸ್ಸಿನ ವಿಕಾಸವನ್ನೂ ಪಡೆಯುತ್ತಾನೆ.

ಮೇಲಿನ ವಿವರದಿಂದ ಕಾದಂಬರಿಯಲ್ಲಿ ಮುಖ್ಯವಾದ ಕೆಲವು ಅಂಶಗಳನ್ನು ತಿಳಿಯಬಹುದಾದರೂ ಇಷ್ಟರಿಂದ ಯಾವ ಕಾದಂಬರಿ ಹಿರಿಯದು, ಉತ್ತಮವಾದದ್ದು ಎಂಬುದನ್ನು ಹೇಳುವುದು ಕಷ್ಟವಾಗುತ್ತದೆ. ಕಾದಂಬರಿ ಜೀವನಚಿತ್ರ. ಅದರ ಮುಖಾಂತರ ಬದುಕಿನಲ್ಲಿ ಹಿರಿದಾದ್ದನ್ನು ತೋರಿಸಬಹುದಾದಂತೆ ಕೀಳಾದದ್ದನ್ನೂ ಕಾದಂಬರಿಕಾರ ತೋರಿಸಬಹುದು. ನಮ್ಮ ಮನಸ್ಸುಗಳನ್ನು ಸರಿಯಾದ ರೀತಿಯಲ್ಲಿ ಸಂಸ್ಕಾರಗೊಳಿಸುವುದಕ್ಕಾಗಿ ನಾವು ಸಾಹಿತ್ಯವನ್ನು ಓದುವುದಾದರೆ ಒಳ್ಳೆಯದು ಯಾವುದು, ಅಲ್ಲದ್ದು ಯಾವುದು ಎಂಬ ಬಗೆಯಲ್ಲಿ ವಿವೇಚನೆಯನ್ನು ಬೆಳಸಿಕೊಳ್ಳಬೇಕಾಗುತ್ತದೆ. ಈ ವಿವೇಚನೆಯ ಸಾಮರ್ಥ್ಯ ಒಳ್ಳೆಯ ಅಭಿರುಚಿಯನ್ನು ಬೆಳಸಿಕೊಂಡಾಗ ಸಾಧ್ಯವಾಗುತ್ತದೆ. ಒಬ್ಬೊಬ್ಬರ ಅಭಿರುಚಿ ಒಂದೊಂದು ಬಗೆಯಾಗಿರುತ್ತದೆ. ಹತ್ತು ಜನ ತಿಳಿದವರು ಒಂದು ಕೃತಿಯಲ್ಲಿ ಗುಣ

ವನ್ನು ಕಂಡಾಗ ಅದು ಅಭ್ಯಾಸಕ್ಕೆ ಯೋಗ್ಯವಾಗುತ್ತದೆ. ಅನೇಕಾನೇಕ ಕಾದಂಬರಿಗಳು ನಿತ್ಯವೂ ಹೊರಬರುತ್ತಿದ್ದ ಈ ಕಾಲದಲ್ಲಿ ವಿವೇಚನೆ ಕಷ್ಟವಾಗುತ್ತದೆ. ಒಂದು ಸಾಮಾನ್ಯ ಸತ್ಯವನ್ನು ನಂಬಿ ನಾವು ನಡೆಯಬಹುದು. ಕಾಲಪುರುಷನೇ ಮಹಾ ವಿಮರ್ಶಕ. ಆತನ ದವಡೆಗೆ ಸಿಕ್ಕು ಒಂದು ಕೃತಿ ಉಳಿಯಬಹುದಾದರೆ ಅದರಲ್ಲಿ ವಿಶೇಷಸತ್ತ್ವ ಇರಬೇಕು. ಇರುತ್ತದೆ, ಇಂದು ಒಳ್ಳೆಯದೆನಿಸಿಕೊಂಡದ್ದು ಇನ್ನು ಕೆಲವು ಕಾಲ ಸಂದಮೇಲೂ ಒಳ್ಳೆಯದೆನಿಸಿಕೊಳ್ಳಬಲ್ಲದಾದರೆ ಆ ಕೃತಿ ಒಳ್ಳೆಯದು ಎಂದೂ ಸ್ಥೂಲವಾಗಿ ಹೇಳಬಹುದು.

-ವ್ಹಿ. ಎಂ. ಇನಾಮದಾರ

## ಅಭ್ಯಸನಗಳು

ಪ್ರಶ್ನೆಗಳು.–

೧) ಕತೆಯನ್ನು ಹಿಗ್ಗಿಸಿದರೆ ಕಾದಂಬರಿಯಾಗಬಲ್ಲದೆ?

೨) ಕತೆ ಕಾದಂಬರಿಗಳಲ್ಲಿಯ ವ್ಯತ್ಯಾಸವೇನು?

೧) ಘಟನೆಗಳ ಜೋಡಣೆಯಲ್ಲಿ

೨) ಪಾತ್ರದರ್ಶನದಲ್ಲಿ ಅಥವಾ

೩) ಕತೆಯನ್ನು ಬೆಳೆಸುವ ರೀತಿಯಲ್ಲಿ

೩) ಚೋಮನ ದುಡಿಯಲ್ಲಿ ಕತೆಯಾಗಿ ಬರೆಯಬಹುದಾದ ಮೂರು ಸನ್ನಿವೇಶಗಳನ್ನು ಎತ್ತಿ ತೋರಿಸಿರಿ.

೪) ಕತೆಯಿಂದ ಮತ್ತು ಕಾದಂಬರಿಯಿಂದಾಗುವ ಒಟ್ಟಿನ ಪರಿಣಾಮ ಯಾವ ರೀತಿ ಬೇರೆಯಾಗಿರುತ್ತದೆ?

ಭಾಷಾಭ್ಯಾಸ:—

ಕೆಳಗಿನ ವಾಕ್ಯಗಳನ್ನು ಸ್ಪಷ್ಟೀಕರಿಸಿರಿ.

೧) ಜೀವನದ ಚುಟುಕು ದರ್ಶನವನ್ನು ಕೊಡುವದು ಕತೆಯ ಉದ್ದೇಶ. ಅದಕ್ಕೂ ಹೆಚ್ಚಿನ ದೀರ್ಘವಾದ ದರ್ಶನವನ್ನು ಒದಗಿಸುವದು ಕಾದಂಬರಿಯ ಉದ್ದೇಶ.

೨) ಒಂದಾದಮೇಲೆ ಒಂದು ಘಟನೆ ನಡೆಯಿತು ಎಂದು ಕತೆ ತೋರಿಸುತ್ತದೆ. ಆದರೆ ಕಾದಂಬರಿ ಇದರ ಜೊತೆಗೆ ಅದೇ ಕ್ರಮದಲ್ಲಿ ಯಾತಕ್ಕೆ ನಡೆಯಿತು ಎನ್ನುವದನ್ನು ತೋರಿಸುತ್ತದೆ.

೩) ಒಳ್ಳೆಯ ಕಾದಂಬರಿಗಳಲ್ಲಿ ನಮ್ಮ ಗಮನವನ್ನು ಸೆಳೆಯಬೇಕಾದ ಮುಖ್ಯ ವಿಷಯಗಳೆಂದರೆ ಅವುಗಳಲ್ಲಿ ಕಾಣಿಸಿಕೊಳ್ಳುವ ಪಾತ್ರಗಳು ಮತ್ತು ಆ ಪಾತ್ರಗಳು ಮಾಡುವ ಕೃತಿವಿಶೇಷಗಳು.

೪) ನಮ್ಮ ಮನಸ್ಸುಗಳನ್ನು ಸರಿಯಾದ ರೀತಿಯಲ್ಲಿ ಸಂಸ್ಕಾರಗೊಳಿಸುವದಕ್ಕಾಗಿ ನಾವು ಸಾಹಿತ್ಯವನ್ನು ಓದುತ್ತೇವೆ.

೫) ಕಾಲಪುರುಷನ ದವಡೆಗೆ ಸಿಕ್ಕು ಒಂದು ಕೃತಿ ಉಳಿಯಬಹುದಾದರೆ ಅದರಲ್ಲಿ ವಿಶೇಷ ಸತ್ತ್ವ ಇರಬೇಕು.

**ಶಬ್ದ ವಿಚಾರ:—**

ಈ ಸಾಹಿತ್ಯ ಪ್ರಕಾರಕ್ಕೆ ಕಾದಂಬರಿ ಎಂದು ಯಾಕೆ ಕರೆಯುತ್ತಾರೆ ಗೊತ್ತೆ? ಸಂಸ್ಕೃತದಲ್ಲಿ ಬಾಣಕವಿ ಬರೆದ ಕಾದಂಬರಿ ಎಂಬ ಗ್ರಂಥವೆ ಇದಕ್ಕೆ ಕಾರಣ. ಈ ಕಾದಂಬರಿ ಕಾಲ್ಪನಿಕ ವ್ಯಕ್ತಿಗಳ ಮತ್ತು ಸಂಗತಿಗಳ ಚಿತ್ರ. ಅಂಥ ಕಾಲ್ಪನಿಕ ಚಿತ್ರಗಳನ್ನು ಕೊಡುವಂತಹ ಕೃತಿಗಳನ್ನು ಹಳೆಯದಾದ ಈ ಕೃತಿಯ ಹೆಸರಿನಿಂದ ಕರೆಯುವದು ಸಮಂಜಸವೇ ಸರಿ. 'ಕಾಲ್ಪನಿಕತೆ' ಎಂಬ ಮುಖ್ಯವಾದ ಅಂಶವನ್ನು ಈ ಹೆಸರು ಎತ್ತಿ ತೋರಿಸುತ್ತದೆ. ಈ ಪ್ರಕಾರಕ್ಕೆ ಮರಾಠಿಯಲ್ಲಿಯೂ ಕಾದಂಬರಿ ಎನ್ನುತ್ತಾರೆ. ಹಿಂದಿಯಲ್ಲಿ ಉಪನ್ಯಾಸವೆನ್ನುತ್ತಾರೆ. ಬಂಗಾಲಿಯಲ್ಲಿ 'ಉಪೊನ್ಯಾಶ' ಎನ್ನುತ್ತಾರೆ ಇಂಗ್ಲಿಷಿನಲ್ಲಿಯ 'ನಾವ್ಹೆಲ್' ಎಂಬುದರ ಮೇಲಿಂದ ತಮಿಳು ಮತ್ತು ಮಳೆಯಾಳದಲ್ಲಿ 'ನಾವಲ' ಎಂದೂ ತೆಲಗಿನಲ್ಲಿ 'ನವಲ' ಎಂದೂ ಕರೆಯುತ್ತಾರೆ. ಗುಜರಾತಿಯಲ್ಲಿ 'ನವಲಕಥಾ' ಎನ್ನುತ್ತಾರೆ.

**ವಾಕ್-ಶಿಕ್ಷಣ :—**

ಈ ಕಾದಂಬರಿಗಳನ್ನು ಓದಿರಿ.

೧) ಕಾನೂರು ಸುಬ್ಬಮ್ಮ ಹೆಗ್ಗಡತಿ ಕುವೆಂಪು. ೨) ಮರಳಿ ಮಣ್ಣಿಗೆ (ಕಾರಂತ).
೩) ಸಮರಸವೇ ಜೀವನ (ಗೋಕಾಕ). ೪) ಕಂಬನಿಯ ಕುಯಿಲು (ತ. ರಾ. ಸು.)
೫) ಅಶಾಂತಿಪರ್ವ (ಆನಂದಕಂದ). ೬) ಚಿನ್ನಬಸವನಾಯಕ (ಮಾಸ್ತಿ).
೭) ಸ್ವಾತಂತ್ರ್ಯದೆಡೆಗೆ (ಬಸವರಾಜ ಕಟ್ಟೀಮನಿ).

**ಚರ್ಚೆ:—**

ಮಾಸ್ತಿಯವರ "ಸುಬ್ಬಣ್ಣ" ಕಾದಂಬರಿ ಚರ್ಚಿಸಿರಿ.

ಬರೆಹ :—

ಕೆಳಗಿನ ಕಾದಂಬರಿಗಳನ್ನು ಸಂಗ್ರಹಮಾಡಿರಿ.

೧) ಸ್ವರ್ಗದ ಬಾಗಿಲು. ೨) ರೂಪದರ್ಶಿ.

ಅ. ನ. ಕೃಷ್ಣರಾಯರ 'ಮಂಗಲಸೂತ್ರ'ದಲ್ಲಿ ಕಾದಂಬರಿಕಾರರು ಸನ್ನಿವೇಶಗಳನ್ನು ಹೇಗೆ ಬೆಳಸಿಕೊಂಡು ಹೋಗಿದ್ದಾರೆಂಬುದನ್ನು ಬಿಡಿಸಿ ತೋರಿಸಿರಿ.

# ಲೇಖಕರ ಪರಿಚಯ

**೧. ಶ್ರೀ. ಗೋರೂರು ರಾಮಸ್ವಾಮಿ ಅಯ್ಯಂಗಾರ**

ಮೈಸೂರು ಪ್ರಾಂತದ ಹಳ್ಳಿಯ ಜೀವನವನ್ನು ಸ್ವಾರಸ್ಯವಾಗಿ ಚಿತ್ರಿಸಿದ 'ನಮ್ಮೂರ ರಸಿಕರು' ಎಂಬ ಶಬ್ದ ಚಿತ್ರಗಳಿಂದ ಮೊದಲು ಹೆಸರು ಗಳಿಸಿದ ಗೋರೂರವರು ಇತ್ತೀಚೆಗೆ ಅನೇಕ ಗ್ರಂಥಗಳನ್ನು ಬರೆದು ಕತೆಗಾರ, ಕಾದಂಬರಿಕಾರ ಮತ್ತು ಪ್ರಬಂಧಕಾರರೆಂದು ವಿಖ್ಯಾತರಾಗಿದ್ದಾರೆ. 'ವೈಯ್ಯಾರಿ' 'ಶಿವರಾತ್ರಿ' ಮುಂತಾದ ಕಥಾಸಂಕಲನಗಳನ್ನೂ 'ಮೆರವಣಿಗೆ' 'ಹೇಮಾವತಿ' 'ಊರ್ವಶಿ' ಮುಂತಾದ ಕಾದಂಬರಿಗಳನ್ನೂ ಪ್ರಕಟಿಸಿದ್ದಾರೆ. ಹಳ್ಳಿಯ ಹಾಡುಗಳ ಸೊಬಗನ್ನು ತಿಳಿಹೇಳುವ ಗ್ರಂಥ ಒಂದನ್ನು ಬರೆದಿದ್ದಾರೆ. ಹಳ್ಳಿಯ ಜೀವನವೇ ಇವರಿಗೆ ಮುಖ್ಯ ವಸ್ತು. ತಿಳಿಯಾದ ಹಾಸ್ಯ ಇವರ ಬರವಣಿಗೆಯ ವೈಶಿಷ್ಟ್ಯ.

**೨. ಶ್ರೀ. ಕೆ. ಸಂಪದ್ಗಿರಿರಾಯರು**

ಬೆಂಗಳೂರಿನ ದೇಶೀಯ ವಿದ್ಯಾಶಾಲೆಯ ಸಂಸ್ಥಾಪಕರೂ ಮುಖ್ಯಾಧ್ಯಾಪಕರೂ ಆಗಿದ್ದು, ಈಗ ಅದೇ ಸಂಸ್ಥೆಯು ನಡೆಸುತ್ತಿದ್ದ ಕಾಲೇಜಿನ ವ್ಹಾಯಿಸ್‌ಪ್ರಿನ್ಸಿಪಾಲರಾಗಿದ್ದಾರೆ. ಮೊದಲಿನಿಂದಲೂ ರಾಷ್ಟ್ರೀಯ ಮನೋವೃತ್ತಿಯವರಾಗಿದ್ದು, ದೇಶದ ಸ್ವಾತಂತ್ರ್ಯಕ್ಕಾಗಿ ಅಖಂಡವಾಗಿ ದುಡಿದವರು. ಸಾಹಿತ್ಯ ಸಂಸ್ಕೃತಿಗಳಲ್ಲಿ ತುಂಬ ಆಸಕ್ತಿಯುಳ್ಳವರು. ಅನೇಕ ನಗೆ ಬರೆಹಗಳನ್ನು ಬರೆದಿದ್ದಾರೆ. ಕನ್ನಡದಂತೆ ಇಂಗ್ಲಿಷದಲ್ಲಿಯೂ ಸರಸವಾಗಿ ಬರೆಯಬಲ್ಲರು.

**೩. ಖಲೀಲ ಗಿಬ್ರಾನ**

ಇವರು ಲೆಬನಾನ್ ದೇಶದ ಜಗದ್ವಿಖ್ಯಾತ ಕವಿಗಳು, ತತ್ತ್ವಜ್ಞರು, ಪ್ರವಾದಿಗಳು. ಮೂಲತಃ ಪೌರ್ವಾತ್ಯರಾದರೂ ಅವರು ಹೆಚ್ಚಾಗಿ ನೆಲೆಸಿದ್ದು ಪಾಶ್ಚಾತ್ಯ ದೇಶಗಳಲ್ಲಿಯೇ. ಇವರ ಕವನಗಳ ಮತ್ತು ರೂಪಕ ಕಥೆಗಳ ಮುಖ್ಯ ಗುಣಗಳೆಂದರೆ ಸೂಚಕತೆ ಮತ್ತು ಕಲ್ಪಕತೆಯ ವಿಲಾಸ. ಓದಿದಷ್ಟು ಅರ್ಥಗರ್ಭಿತವಾಗಿ ಕಂಡುಬರುವ ಇವರ ಬರೆಹಗಳು ಪ್ರಪಂಚದ ಅನೇಕ ಭಾಷೆಗಳಲ್ಲಿ ಅನುವಾದಿತವಾಗಿವೆ.

**೪. ಶ್ರೀ. ಜಿ. ಪಿ. ರಾಜರತ್ನಂ**

ಅಭಿನವ ಸಾಹಿತ್ಯ ಪ್ರವೇಶ ೧ ರಲ್ಲಿ ಇವರ ಪರಿಚಯ ಮಾಡಿಕೊಡಲಾಗಿದೆ.

**೫. ಶ್ರೀ. ಬಿ. ಎಂ. ಶ್ರೀಕಂಠಯ್ಯನವರು**

ಅಭಿನವ ಸಾಹಿತ್ಯ ಪ್ರವೇಶ ೧ ರಲ್ಲಿ ಇವರ ಪರಿಚಯ ಮಾಡಿಕೊಡಲಾಗಿದೆ.

**೬. ಶ್ರೀಮತಿ ಬಿ. ಟಿ. ಜಿ. ಕೃಷ್ಣ ಅವರು**

ಕನ್ನಡದಲ್ಲಿ ಕೆಲವೇ ಉತ್ತಮ ಕತೆಗಾರ್ತಿಯರಲ್ಲಿ ಶ್ರೇಷ್ಠರಾದ ಬಿ. ಟಿ. ಜಿ. ಕೃಷ್ಣ ಅವರು ಅನೇಕ ಕತೆಗಳನ್ನು ಬರೆದಿದ್ದಾರೆ. 'ಹೆಂಗಸರು ಬರೆದ ಕತೆ' ಎಂಬ

ಸಹನೆಯಿಂದ ವಿಮರ್ಶಕರು ತಮ್ಮ ಕತೆಗಳನ್ನು ನೋಡದಿರಲಿ ಎಂದು ಬಯಸುತ್ತಿದ್ದ ಅವರು ನಮ್ಮ ಉತ್ತಮ ಕತೆಗಾರರ, ಉತ್ತಮ ಕತೆಗಳನ್ನು ಸರಿದೂಗುವಂತೆ ಕತೆಗಳನ್ನು ಬರೆದರು. ಹೆಣ್ಣುಬಾಳಿನಲ್ಲಿಯ ಆಗುಹೋಗುಗಳನ್ನು ಆಸೆ ಅಪೇಕ್ಷೆಗಳನ್ನು ಸಹೃದಯವಾಗಿ ನಯವಾಗಿ ಚಿತ್ರಿಸಬಲ್ಲವರು. 'ಕಂಬನಿ', 'ಚಿಗುರು'—ಎಂಬ ಅವರ ಕಥಾಸಂಕಲನಗಳಲ್ಲಿಯ ಬೇರೆ ಕತೆಗಳನ್ನು ಓದಿ ನೋಡಿ, ಅವರ ಅಕಾಲ ನಿಧನದಿಂದ ಕನ್ನಡ ಕಥಾ ಪ್ರಪಂಚಕ್ಕೆ ಎಂಥ ಹಾನಿಯಾಗಿದೆ ಎಂಬುದು ತಿಳಿಯುತ್ತದೆ.

### ೭. ಶ್ರೀ. ಶಂ. ಬಾ. ಜೋಶಿ

ಅಭಿನವ ಸಾಹಿತ್ಯ ಪ್ರವೇಶ ೧ರಲ್ಲಿ ಇವರ ಪರಿಚಯ ಮಾಡಿಕೊಡಲಾಗಿದೆ.

### ೮. ಶ್ರೀ. ರಾಳ್ಳಪಲ್ಲಿ ಅನಂತ ಕೃಷ್ಣಶರ್ಮ

ಆಸ್ಥಾನ ವಿದ್ವಾನ್ ರಾಳ್ಳಪಲ್ಲಿ ಅನಂತ ಕೃಷ್ಣಶರ್ಮರು ಬಹುಕಾಲ ವಿಶ್ವವಿದ್ಯಾಲಯದಲ್ಲಿ ತೆಲುಗು ಸಾಹಿತ್ಯದ ಅಧ್ಯಾಪಕರಾಗಿ ಕೆಲಸಮಾಡಿ ಈಗ ವಿಶ್ರಾಂತಿ ಪಡೆದಿದ್ದಾರೆ. ಶರ್ಮರು ತೆಲುಗಿನಲ್ಲಿಯಂತೆ ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳಲ್ಲಿ ಅಸಾಧಾರಣ ಪಂಡಿತರು. ನಮ್ಮ ನಾಡಿನ ಹಿರಿಯ ದಾಕ್ಷಿಣಾತ್ಯ ಪದ್ಧತಿಯ ಸಂಗೀತಕಾರರು, ರಸಋಷಿಗಳು. ಸಂಗೀತದ ಬಗೆಯಲ್ಲಿ ಮತ್ತು ಸಂಗೀತಕಾರರ ಬಗೆಯಲ್ಲಿ ಅಧಿಕಾರಯುತವಾಗಿ ಹೇಳಬಲ್ಲವರು.

### ೯. ಶ್ರೀ. ಎ. ನಾರಾಯಣರಾಯರು

ಇವರು ಮೈಸೂರಿನವರು. ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಪ್ರಾಣಿಶಾಸ್ತ್ರದ ಸಹಾಯಕ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ದಾರೆ ಶಾಸ್ತ್ರೀಯ ವಿಷಯಗಳನ್ನು ಕುರಿತು ಕನ್ನಡದಲ್ಲಿ ಅನೇಕ ಪ್ರಬಂಧಗಳನ್ನು ಬರೆದಿದ್ದಾರೆ.

### ೧೦. ಶ್ರೀ. ಆದ್ಯ ರಂಗಾಚಾರ್ಯ (ಶ್ರೀರಂಗ)

ಕನ್ನಡ ಶ್ರೇಷ್ಠ ನಾಟಕಕಾರರಾದ 'ಶ್ರೀರಂಗ'ರ ನಿಜವಾದ ಹೆಸರು ಶ್ರೀ. ಆದ್ಯ ರಂಗಾಚಾರ್ಯ. ಲಂಡನ್ ವಿಶ್ವವಿದ್ಯಾಲಯದ ಪದವಿಧರರು. ಬಹುಕಾಲ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಸಂಸ್ಕೃತದ ಅಧ್ಯಾಪಕರಾಗಿದ್ದು, ಸದ್ಯಕ್ಕೆ ಕೇಂದ್ರ ಸರಕಾರದ ಪ್ರಸಿದ್ಧಿ ಶಾಖೆಯಲ್ಲಿ ಕೆಲಸವೊಂದರಲ್ಲಿದ್ದಾರೆ. ಅನೇಕ ದೊಡ್ಡ ನಾಟಕಗಳನ್ನೂ ಏಕಾಂಕ ನಾಟಕಗಳನ್ನೂ ಬರೆದು, ಕನ್ನಡದಲ್ಲಿ ನಾಟಕವನ್ನು ಸಮಾಜ ಚಿತ್ರವನ್ನಾಗಿ ಮಾಡಿತೋರಿಸಿ, ಜೀವನದಲ್ಲಿಯ ಕುಂದುಕೊರತೆಗಳನ್ನು ಬಯಲಿಗೆಳೆದಿದ್ದಾರೆ. ಮಾತಿನ ಚಮತ್ಕೃತಿ, ಹರಿತವಾದ ಸಂಭಾಷಣೆ, ಅದರ ಹಿಂದುಗಡೆಯಲ್ಲಿ ಸಮಾಜದ ಟೀಕೆ ಇವು ಅವರ ನಾಟಕಗಳ ಮುಖ್ಯ ಲಕ್ಷಣಗಳು. ನಾಟಕಗಳನ್ನಲ್ಲದೆ ಅನೇಕ ನಗೆಬರೆಹಗಳನ್ನೂ ಕಾದಂಬರಿಗಳನ್ನೂ ಬರೆದಿದ್ದಾರೆ.

### ೧೧. ಶ್ರೀ. ಇನಾಂದಾರ ವೆಂಕಟರಾಯರು

ಅಭಿನವ ಸಾಹಿತ್ಯ ಪ್ರವೇಶ ೧ರಲ್ಲಿ ಇವರ ಪರಿಚಯ ಮಾಡಿಕೊಡಲಾಗಿದೆ.

**೧೨. ಶ್ರೀ. ಕೃಷ್ಣಶರ್ಮ ಬೆಟಗೇರಿ**

ಅಭಿನವ ಸಾಹಿತ್ಯ ಪ್ರವೇಶ ೧ರಲ್ಲಿ ಇವರ ಪರಿಚಯ ಮಾಡಿ ಕೊಡಲಾಗಿದೆ.

**೧೩. ಶ್ರೀ. ಜಿ. ಆರ್. ರಂಗಸ್ವಾಮಿ**

ಅಭಿನವ ಸಾಹಿತ್ಯ ಪ್ರವೇಶ ೧ರಲ್ಲಿ ಇವರ ಪರಿಚಯ ಮಾಡಿ ಕೊಡಲಾಗಿದೆ.

**೧೪. ಶ್ರೀ. ಎಸ್. ಕೆ. ಹಾವನೂರ**

ಇವರ ಮೊದಲ ಹೆಸರು ಎಸ್. ಕೆ. ಐರಣಿ ಎಂದು. ಆ ಹೆಸರಿನಿಂದ 'ಅವರು ಮತ್ತು ದೇವಕ್ಕ' ಎಂಬ ಕಥಾಸಂಗ್ರಹವನ್ನು ಪ್ರಕಟಿಸಿ ಮೊದಲು ಬೆಳಕಿಗೆ ಬಂದ ಈ ಉದಯೋನ್ಮುಖ ಸಾಹಿತಿಗಳು ಇದೀಗ ನಮ್ಮಲ್ಲಿಯ ವಿಖ್ಯಾತ ಕೃತಿಗಳ ಸಾರ ಸಂಗ್ರಹಗಳನ್ನು ಬರೆದು ಪ್ರಕಟಿಸಿದ್ದಾರೆ. ಒಳ್ಳೆಯ ಸಾಹಿತ್ಯದ ಒಳ್ಳೆಯತನವನ್ನು ಗ್ರಹಿಸಬಲ್ಲ ವಿಮರ್ಶಾವಿವೇಕ ಇವರ ವಿಶೇಷ.

**೧೫. ಶ್ರೀ. ಗುರುನಾಥ ದಿವೇಕರ**

ಅಚ್ಚ ಕನ್ನಡಿಗರಾದ ಶ್ರೀ. ಗುರುನಾಥ ದಿವೇಕರರು ಪರ್ಶಿಯನ್ ಮತ್ತು ಉರ್ದು ಸಾಹಿತ್ಯದ ಆಳವಾದ ಅಭ್ಯಾಸ ಮಾಡಿದವರು. ಅನೇಕ ಇಂಗ್ಲೀಷ ಮತ್ತು ಹಿಂದೀ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದು ಆ ಎರಡು ಸಾಹಿತ್ಯಗಳಲ್ಲಿಯ ಹಿರಿಯ ಲೇಖಕರ ಮತ್ತು ಕೃತಿಗಳ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಸದ್ಯಕ್ಕೆ ಮುಂಬಯಿ ಸರಕಾರದ ಪರ್ಶಿಯನ್ ಭಾಷಾಂತರಕಾರರೆಂದು ಕೆಲಸ ಮಾಡುತ್ತಿದ್ದಾರೆ.

**೧೬ ಶ್ರೀ. ಪಂಡಿತ ಜವಾಹರಲಾಲ ನೆಹರು**

ನೆಹರು ಅವರು ರಾಜಕಾರಣಿಗಳಾಗಿರದಿದ್ದರೆ ಕವಿಗಳಾಗುತ್ತಿದ್ದರು, ಉತ್ತಮ ಪ್ರಬಂಧಕಾರರಾಗುತ್ತಿದ್ದರು. ಅವರ ಆತ್ಮಚರಿತ್ರೆ ಲೋಕ ವಿಖ್ಯಾತ ಗ್ರಂಥ ವಾಗಿದೆ. ' ಮಗಳಿಗೆ ತಂದೆ ಬರೆದ ಓಲೆಗಳು ' ಅವರ ' ಜ್ಞಾನವಿಸ್ತಾರವನ್ನು, ಬರೆವಣಿಗೆಯ ಸಾಮರ್ಥ್ಯವನ್ನು ತೋರಿಸುತ್ತಿವೆ. ಅವರ ಭಾರತ ದರ್ಶನ ಎಂಬ ಗ್ರಂಥ ಭಾರತೀಯ ಇತಿಹಾಸದ ಜ್ಞಾನವನ್ನು ಭಾರತೀಯ ಸಂಸ್ಕೃತಿಯ ಬಗ್ಗೆ ಅವರಲ್ಲಿದ್ದ ಅಗಾಧ ಪ್ರೀತ್ಯಾದರಗಳನ್ನು ಸ್ಪಷ್ಟಪಡಿಸುತ್ತವೆ. ತಮ್ಮ ಎಲ್ಲ ಗ್ರಂಥಗಳನ್ನೂ ಇವರು ಕಾರಾಗೃಹದಲ್ಲಿಯೇ ಬರೆದರು. ನಿಸರ್ಗ ಸೌಂದರ್ಯದ ಬಗೆಯಲ್ಲಿ ನೆಹರು ಅವ-ರಿಗೆ ತುಂಬ ಪ್ರೀತಿ. ಅದನ್ನು ಈ ಪಾಠದಲ್ಲಿ ನಾವು ಕಾಣಬಹುದು.

**೧೭. ಶ್ರೀ. ವೆಂಕಟಾಚಾರ್ಯ ಹೋಳೀಕಟ್ಟಿ**

ಅಭಿನವ ಸಾಹಿತ್ಯ ಪ್ರವೇಶ ೧ರಲ್ಲಿ ಇವರ ಪರಿಚಯ ಮಾಡಿ ಕೊಡಲಾಗಿದೆ.

**೧೮. ಶ್ರೀ. ಅಜ್ಜಂಪುರ ಸೀತಾರಾಮರು**

'ಆನಂದ' ಅಥವಾ ಅಜ್ಜಂಪುರ ಸೀತಾರಾಮ, ಅವರು ಸಾಹಿತ್ಯ ಜೀವಿಗಳು. ಕನ್ನಡದಲ್ಲಿಯ ಉತ್ತಮ ಕಥಾ ಲೇಖಕರು. 'ಮಾಟಗಾತಿ', 'ಸಂಸಾರಶಿಲ್ಪ', ಮತ್ತು 'ಬೇವು ಬೆಲ್ಲ' ಮುಂತಾದ ಕಥಾಸಂಕಲನಗಳು ಇವರ ಉತ್ತಮ ಕತೆಗಳನ್ನು ಒಳಗೊಂಡಿವೆ. ಇವರ ಕತೆಗಳಲ್ಲಿಯ ಜೀವನದ ಸೂಕ್ಷ್ಮ ನಿರೀಕ್ಷಣೆ ಮತ್ತು ತಿಳಿಯಾದ

ಹಾಸ್ಯ ಓದುಗರನ್ನು ಯಾವಾಗಲೂ ಸೆರೆಹಿಡಿಯುತ್ತವೆ. ಮನುಷ್ಯನ ಬದುಕಿನಲ್ಲಿ ಸಿಹಿಕಹಿಗಳೆರಡೂ ಹೇಗೆ ಸರಿಬೆರಕೆಯಾಗಿರುತ್ತವೆಂಬುದನ್ನು ಇವರ ಕತೆಗಳನ್ನು ಓದಿ ಮನಗಾಣಬಹುದಾಗಿದೆ. 'ಹೆಂಡತಿಯ ಕಾಗದ' ಎಂಬುದನ್ನು 'ಮಾಟಗಾತಿ ಮತ್ತು ಇತರ ಕತೆಗಳು' ಎಂಬ ಸಂಗ್ರಹದಿಂದ ಆಯ್ದುಕೊಳ್ಳಲಾಗಿದೆ.

## ೧೯. ಶ್ರೀಮತಿ ತಿರುಮಲೆ ರಾಜಮ್ಮ

ವೈಣಿಕ ಶಿಖಾಮಣಿ ವೀಣೆ ಶೇಷಣ್ಣನವರಿಂದ ವೀಣೆಯನ್ನು ಸೊಗಸಾಗಿ ನುಡಿಸುವ ಕಲೆಯನ್ನು ಕಲಿತ ಬೆಂಗಳೂರಿನ ಶ್ರೀಮತಿ ರಾಜಮ್ಮನವರು ಸಾಹಿತ್ಯ-ಸಂಗೀತ ಪ್ರಿಯರು. ಅನೇಕ ಕವನಗಳನ್ನು ಬರೆದಿದ್ದಾರೆ. ಕೆಲವು ಅನುವಾದ ಗಳನ್ನು ಪ್ರಕಟಮಾಡಿದ್ದಾರೆ.

## ೨೦. ಶ್ರೀ. ಮಹಾದೇವ ದೇಸಾಯಿ

ಮಹಾತ್ಮರ ಆದರ್ಶ ಆಪ್ತಕಾರ್ಯದರ್ಶಿಯಾಗಿದ್ದ ಶ್ರೀ. ಮಹದೇವ ದೇಸಾಯಿಯವರು ದೇಶಕ್ಕಾಗಿ ಸರ್ವ ತ್ಯಾಗ ಮಾಡಿ ದುಡಿದ ಹಿರಿಯ ದೇಶ ಭಕ್ತರು. ನಲವತ್ತೆರಡರ ಆಂದೋಲನದ ಕಾಲಕ್ಕೆ ಬಂಧನದಲ್ಲಿರುವಾಗಲೇ ಎರವಡಾ ಕಾರಾಗೃಹದಲ್ಲಿಯೇ ಮರಣಹೊಂದಿದರು. ಮಹಾತ್ಮರ ಛಾಯಾನುವರ್ತಿಯಾಗಿ ಇವರು ಬರೆದಿಟ್ಟ ಟಿಪ್ಪಣಿಗಳು, ದಿನಚರಿಗಳು ಆ ಬಗೆಯ ಬರೆವಣಿಗೆಗೆ ಆದರ್ಶ ಪ್ರಾಯವಾಗಿವೆ. ಅವರ ತ್ಯಾಗ, ಸಹನೆ, ದೇಶಭಕ್ತಿಗಳನ್ನಲ್ಲದೆ ಮಹಾತ್ಮರ ಪರಮ ಭಕ್ತರಾಗಿ, ಪ್ರಿಯ ಶಿಷ್ಯರಾಗಿ, ಆದರ್ಶ ದೇಶವೀರರಾಗಿ ಹೇಗೆ ಬಾಳಿದರು ಎಂಬು ದನ್ನು ಅವರ ದಿನಚರಿಗಳಿಂದ ತಿಳಿಯಬಹುದಾಗಿದೆ.

## ೨೧. ಶ್ರೀ. ರಾಮಚಂದ್ರ ವಡವಿ

ಸಾಬರಮತಿ ಮತ್ತು ಬೇರೆ ಆಶ್ರಮಗಳಲ್ಲಿ ಗಾಂಧೀಜಿಯವರ ಶಿಷ್ಯರಲ್ಲೊಬ್ಬ ರಾಗಿ ಮೊದಲಿನಿಂದಲೂ ದೇಶಸೇವೆಗಾಗಿ ಜೀವನವನ್ನು ಮುಡುಪಾಗಿಸಿದ ಶ್ರೀ. ವಡವಿ ಯವರು ನಿಷ್ಠಾವಂತ ದೇಶಭಕ್ತರು. ಗಾಂಧೀಜಿಯವರ ಕೆಲವು ಉತ್ತಮ ಲೇಖನ ಗಳನ್ನು 'ಮಂಗಲ ಪ್ರಭಾತ' ಎಂದು ಅನುವಾದಮಾಡಿ ಪ್ರಕಟಿಸಿದರು. ಇದೀಗ ಮಹದೇವ ದೇಸಾಯಿಯವರ ದಿನಚರಿಯನ್ನು ಕನ್ನಡಿಸಿದ್ದಾರೆ.

## ೨೨. ಗಾಂಧೀಜಿ

ಅಭಿನವ ಸಾಹಿತ್ಯ ಪ್ರವೇಶ ೧ ರಲ್ಲಿ ಇವರ ಪರಿಚಯ ಮಾಡಿಕೊಡಲಾಗಿದೆ.

## ೨೩. ಶ್ರೀ. ಭಾರತೀ (ಪ್ರಿಯ) ಎಸ್. ವೆಂಕಟರಾವ

'ಭಾರತೀ ಪ್ರಿಯ' ಎನ್ನುವದು ಬೆಂಗಳೂರಿನ ಶ್ರೀ. ವೆಂಕಟರಾವ ಅವರ ಕಾವ್ಯನಾಮ ಕೆಲವೇ ಆದರೂ ಅತ್ಯುತ್ತಮ ಸಣ್ಣ ಕತೆಗಳನ್ನು ಬರೆದ ಅವರು ಪತ್ರಿಕಾ ವ್ಯವಸಾಯಿಗಳಾಗಿದ್ದಾರೆ. 'ಮೋಚಿ' ಇವರು ಬರೆದ ಕತೆಗಳಲ್ಲೊಂದು.

# ಅರ್ಥಕೋಶ

| | |
|---|---|
| **ಅಗಣ್ಯ** | ಎಣಿಕೆಯಿಲ್ಲದ, ಹೆಚ್ಚಾದ |
| ಅಗಸರ್ | ಅಗಸರು |
| ಅವ್ವಳಿಸು | ಜಿಗಿ |
| ಅವಳಡು | ಹೊಂದಿಕೆಯಾಗು |
| ಅಳ್ಕರು | ಪ್ರೀತಿ |
| ಅರೆಯಟ್ಟು | ಬೆನ್ನಟ್ಟು |
| **ಅಯತ** | ವಿಶಾಲ, ದೊಡ್ಡ |
| ಆಳಿಗುಡು | ಹಟಮಾಡು |
| ಆರ್ಪು | ಪರಾಕ್ರಮ |
| **ಉತ್ತಮಾಂಗ** | ಶಿರಸ್ಸು |
| ಉತ್ಖನನ | ಅಗಿದು ಮೇಲೆ ತೆಗೆಯುವುದು. |
| ಉಮ್ಮಳ | ಚಿಂತೆ |
| **ಎಗ್ಗ** | ದಡ್ಡ, ಹೆಡ್ಡ |
| ಎತ್ತುಗಡೆ | ಪ್ರಯತ್ನ |
| ಎಸಡು | ಏಡಿ |
| **ಕಟಕ** | ಪರ್ವತಪ್ರದೇಶ, ತಪ್ಪಲು |
| ಕರ್ಚು | ತೊಳೆ |
| ಕಂಧರ | ಕುತ್ತಿಗೆ |
| ಕತ್ತು | ಕುತ್ತಿಗೆ |
| ಕಳ್ಕನೆ | ಫಕ್ಕನೆ |
| ಕರಾಳದಂಷ್ಟ್ರ | ಕ್ರೂರಹಲ್ಲು |
| ಕಲ್ಮಷ | ಹೊಲಸು |
| ಕಳ | ಕಣ ( ಆಟದ ಬೈಲು ) |
| ಕಳೇಬರ | ದೇಹ |
| ಕಂ+ಕಣ–ಕಂಕಣ | ನೀರಹನಿ |
| ಕೀರಲು | ಚೀರಲುಧ್ವನಿ |
| ಕುಳ್ಳ | ಗಿಡ್ಡ |
| ಕೈವಾರ | ಸ್ತುತಿ |
| ಕೋದು | ಹೆಣೆದು ( ಕೋ–ಧಾ ) |
| ಕೋಟಲೆ | ಉಪದ್ರವ |
| ಕೋಡ | ಚಳಿಯ |

| | |
|---|---|
| ಕೊರೆ | ಅಲ್ಪಭಾಗ |
| ಕ್ಷುಧೆ | ಹಸಿವು |
| **ಖಟ್ವೆ** | ಹೊರಸು |
| ಖಟ್ವಾಂಗ | ಹೊರಸಿನಕಾಲು, ಶಿವನ ಕೈಯಲ್ಲಿಯ ಕೊಳಲು |
| **ಗೆಡಸು** | ಧೈರ್ಯ |
| ಗುಲ್ಮ | ಕಂಟಿ, ಗ್ರಂಥಿ |
| ಗೆಪ್ತಿ | ನೆನಪು |
| ಗೋಣಗಾಟ | ಗುಣುಗುಣಿಸುವುದು |
| **ಜಿಜ್ಞಾಸು** | ತಿಳವಿನ ಹಂಬಲವುಳ್ಳವ, ಚಿಕಿತ್ಸಕ |
| ಜಿಜ್ಞಾಸುದೃಷ್ಟಿ | ಚಿಕಿತ್ಸಕ ಬುದ್ಧಿ |
| ಜಾವಳಿ | ಹಾಡಿನ ಒಂದು ರೀತಿ |
| **ತೀವಿ** | ತುಂಬಿ |
| ತಣಿದು+ಪನಿ–ತಂಬನಿ | ತಂಪು ಹನಿ |
| ತಮಟೆ | ಬಾರಿಸುವ ವಾದ್ಯ ವಿಶೇಷ |
| ತಿಂಗಳ | ಚಂದ್ರ |
| ತುರುಗು | ಗುಂಪುಗೂಡು |
| **ದರ್ಜಿ** | ಸಿಂಪಿಗ |
| ದರ್ಜೆ | ತರಗತಿ |
| ದೋರ್+ಬಲ–ದೋರ್ವಲ | ತೋಳಕಸುವು |
| ದುಗುಡು | ಚಿಂತೆ |
| ದಿಟ | ಸತ್ಯ |
| ದ್ರುತ | ಶೀಘ್ರ |
| **ನನೆ** | ಸೊರಗು |
| ನಿಮಿರು | ನೆಟ್ಟಗಾಗು |
| ನಿಳಿಂಪ | ದೇವತೆ |
| ನಿಷ್ಪಂದ | ಎವೆಯಿಕ್ಕದ |
| ನಿರುಕಿಸು | ಸಿಡಿದಾಗಿ ನೋಡು, ನಿರೀಕ್ಷಿಸು, |
| ನಿತಾಂತ | ಅತಿಶಯ, ವಿಶೇಷ |
| ನೀರದ | ಮೋಡ |
| ನೆಮ್ಮು | ನಂಬು |
| **ಪಳಂಚು** | ತಾಗು, ಇದಿರಿಸು |
| **ಪಡಿ** | ಗೊತ್ತುಪಡಿಸಿದ ಧಾನ್ಯ |

| | |
|---|---|
| ಪಳಗು | ಪಕ್ವವಾಗು, ನುರಿತುದು |
| ಪಾದರಿ | ಹೂವಿನ ಒಂದು ಪ್ರಕಾರ, ಹಾದರ |
| ಪುಸಿ | ಸುಳ್ಳು |
| ಪುದುವಾಳ್ಕೆ | ಹೊಂದಿಕೊಂಡಿರುವಿಕೆ |
| ಪೆಟ್ಟಾರಿ | ಪೆಟ್ಟಿಗೆ |
| ಪ್ರಚೋದನೆ | ಪ್ರೇರಣೆ |
| ಪ್ರಸ್ತರ | ಕಲ್ಲು |
| ಪೊಧಳ್ | ಏರಿಬರು |
| ಪೊಂಗು | ಸಿಟ್ಟಿಗೇಳು |
| ಪೊಣರ್ | ಕಾದು, ಹೋರಾಡು |
| ಪೊಳ್ತರೆ | ನಸುಕು |
| **ಫಾಲಾಕ್ಷ** | ಶಿವ |
| **ಭೀರು** | ಅಂಜುಬುರುಕ |
| ಭವ | ಸಂಸಾರ |
| **ಮತ್ಸ್ಯ** | ವಿರಾಟರಾಜ |
| ಮಂಕು | ಹುಚ್ಚು |
| ಮತ್ತೇರು | ಮದವೇರು |
| ಮರವಡು | ಮರಗಟ್ಟು |
| ಮಂಜು | ಮರೆಯಾಗು ಮುಚ್ಚು |
| ಮರಲ್ | ಮರಳು, ತಿರುಗು |
| ಮಾಡುಮನೆ | ಅಂತಸ್ತಿನ ಮನೆ |
| ಮಾಲು | ಬಾಗು |
| ಮಾಣಿಸು | ಬಿಡಿಸು |
| ಮಿಡಿ | ಹಾರು |
| ಮಿಗ | ಮೃಗ (ಇದರ ತದ್ಭವ) |
| **ರಮ್ಯ (ಧ್ವ)** | ರಮ್ಯ |
| ರುತಿ | ಧ್ವನಿ |
| ರೊಪ್ಪು | ಗರ್ಜಿಸು |
| **ವಸುಮತಿ** | ಭೂಮಿ |
| ವಕ್ತ್ರ | ಮುಖ |
| ವಿಜಿಗೀಷು ವೃತ್ತಿ | ಗೆಲ್ಲುವ ಇಚ್ಛೆ |
| **ವಿಪ್ಲವ** | ಅಸಮಾಧಾನ, ಕ್ರಾಂತಿ |

| | |
|---|---|
| ಶಶ | ಮೊಲ |
| ಶಶಾಂಕ | ಚಂದ್ರ |
| ಶಿಶಿರ | ಚಳಿ |
| ಶ್ವಾಪದ | ಕ್ರೂರ ಮೃಗ |
| ಸವಿಗನಸು | ಚಲೋ ಕನಸು |
| ಸ್ಥಾಣು | ಶಿವ |
| ಸಿಂಜಿನಿ | ಬಿಲ್ಲಿನ ಹೆದೆ |
| ಸ್ಮೇರ | ಮುಗುಳ್ನಗೆ |
| ಸೌಹಾರ್ದ | ಸ್ನೇಹಿತನ ಸ್ವಭಾವ |
| ಸೌರಂಭ | ಉತ್ಸಾಹ |
| ಸೋವು | ಗುಟ್ಟು, ಮೂಲ, ಗುರುತು |
| ಹದ್ದು | (೧) ಹದ್ದು (ಪಕ್ಷಿ) (೨) ಮೇರೆ, ಮರ್ಯಾದೆ |
| ಹರಾತ್ತನೆ | ಒಮ್ಮಿಂದೊಮ್ಮೆ |
| ಹುಯ್ಯಲಿಡು | ಆರ್ಭಟೆಯಿಂದ ಕೂಗು |
| ಹೋಕು | ಹಾನಿ |
| ಹೊಂಚ | ಮೋಸಗಾರ |
| ಹೊಗರು | ಕಾಂತಿ, ಮಿಂಚು |
| ಹೊನಲು | ಪ್ರವಾಹ |

---

